# ಇಸ್ಲಾಮ್ ಮತ್ತು ಬಡತನ ನಿವಾರಣೆ

ಲೇಖಕರು

ಡಾ| ಯೂಸುಫುಲ್ ಕರ್ಝಾವಿ

ಅನುವಾದಕರು

ಪಿ. ನೂರ್ ಮುಹಮ್ಮದ್

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

ಬಡತನವು ಆಧುನಿಕ ಜಗತ್ತು ಅನುಭವಿಸುತ್ತಿರುವ ಗಂಭೀರ ಸಮಸ್ಯೆಯಾಗಿದೆ. ನಿರುದ್ಯೋಗ, ಆರ್ಥಿಕ ಶೋಷಣೆ, ಭ್ರಷ್ಟಾಚಾರ ಮತ್ತು ಬೆಲೆಯೇರಿಕೆ ಇತ್ಯಾದಿಗಳು ಬಡತನವೆಂಬ ಸಮಸ್ಯೆಯನ್ನು ಅತ್ಯಂತ ರೂಕ್ಷ ಗೊಳಿಸಿವೆ. ಕ್ಯಾಪಿಟಲಿಝಮ್, ಸೋಶಿಯಲಿಝಮ್ ಮತ್ತು ಕಮ್ಯೂನಿಝಮ್ ಮುಂತಾದ ತತ್ತ್ವ ಸಿದ್ಧಾಂತಗಳು ಬಡತನ ನಿರ್ಮೂಲನ ಕಾರ್ಯದಲ್ಲಿ ಸಂಪೂರ್ಣ ವಿಫಲಗೊಂಡಿವೆಯೆಂಬುದಕ್ಕೆ ಸಮಕಾಲೀನ ಅನುಭವಗಳು ಸಾಕ್ಷಿಯಾಗಿವೆ. ಈ ಹಿನ್ನೆಲೆಯಲ್ಲಿ ದೇವದತ್ತ ಜೀವನ ವ್ಯವಸ್ಥೆಯಾಗಿರುವ ಇಸ್ಲಾಮ್, ಬಡತನ ನಿರ್ಮೂಲನಕ್ಕೆ ಸೂಚಿಸುವ ತಾತ್ತ್ವಿಕ ಮತ್ತು ವ್ಯಾವಹಾರಿಕ ನಿರ್ದೇಶಗಳನ್ನು ಈ ಕೃತಿಯಲ್ಲಿ ಸಮಗ್ರವಾಗಿ ವಿಶ್ಲೇಷಿಸಲಾಗಿದೆ.

ಶಾಂತಿ ಪ್ರಕಾಶನ

# ಅನುಕ್ರಮಣಿಕೆ

# ಮುನ್ನುಡಿ

ಇಸ್ಲಾಮೀ ಆರ್ಥಿಕ ವ್ಯವಸ್ಥೆಯು ಬಹಳ ವಿಸ್ತಾರವಾಗಿ ಅಧ್ಯಯನ ನಡೆಸಬೇಕಾದ ಷಯವಾಗಿದೆ. ಅದರಲ್ಲಿ ಸಂಪತ್ತು, ಉತ್ಪಾದನೆ, ಕ್ರಯವಿಕ್ರಯ, ವಿತರಣೆ, ಬಳಕೆ ತ್ಯಾದಿಗಳಿಗೆ ಇಸ್ಲಾಮ್ ನಿರ್ಣಯಿಸಿರುವ ನಿಯಮ ನಿಬಂಧನೆಗಳ ವಿವರಗಳೂ ಸೇರಿವೆ. ಸ್ಲಾಮ್ ಪಾಲಿಸಿದ ನ್ಯಾಯ, ವ್ಯಕ್ತಿಸ್ವಾತಂತ್ರ್ಯ ಮತ್ತು ಸಾಮಾಜಿಕ ಹಿತಕ್ಕಾಗಿ ಅದು ಪಾಲಿಸಿದ ಂತುಲಿತತೆ, ಜನರ ಧಾರ್ಮಿಕ, ಲೌಕಿಕ ಕಾರ್ಯಗಳ ಧೋರಣೆ ಇತ್ಯಾದಿಗಳನ್ನು ಅದರಲ್ಲಿ ರ್ಚಿಸಬೇಕಾಗಿದೆ.

ಇಸ್ಲಾಮೀ ಅರ್ಥ ವ್ಯವಸ್ಥೆಯ ಬಗೆಗಿನ ಚರ್ಚಾ ವಲಯವು ಬಹಳ ವಿಶಾಲವಾಗಿದೆ. ಂವಾರು ವರ್ಷಗಳಿಂದ ನಾನು ನಡೆಸಿದ ಇಸ್ಲಾಮಿನ ಝಕಾತ್ ವ್ಯವಸ್ಥೆಯ ಅಧ್ಯಯನದ ಳೆಯಲ್ಲಿ ಆ ಬಗ್ಗೆ ಅಧ್ಯಯನ ನಡೆಸುವ ಅವಕಾಶವೂ ನನಗೆ ಲಭಿಸಿತು. ಅಲ್ಲಾಹನ ನುಗ್ರಹದಿಂದ ಝಕಾತ್ ವ್ಯವಸ್ಥೆಗೆ ಸಂಬಂಧಿಸಿದ ಸಂಶೋಧನೆ ಪೂರ್ಣಗೊಂಡಿದೆ. ರ್ಥಿಕ ವ್ಯವಸ್ಥೆಯ ಅಧ್ಯಯನವನ್ನು ಮುಂದುವರಿಸಿದ್ದೇನೆ. ಅದನ್ನು ಪೂರ್ಣಗೊಳಿಸುವಂತೆ ಲ್ಲಾಹನು ಅನುಗ್ರಹಿಸಲಿ.

ಈ ಕೃತಿಯಲ್ಲಿ ಇಸ್ಲಾಮೀ ಅರ್ಥ ವ್ಯವಸ್ಥೆಯ ಒಂದು ನಿರ್ದಿಷ್ಟ ಅಂಶದ ಬಗ್ಗೆಮಾತ್ರ ರ್ಚಿಸಿದ್ದೇನೆ- ಬಡತನ, ಅದರ ಪರಿಹಾರ, ಬಡವರ ಹಕ್ಕು ಸಂರಕ್ಷಣೆ, ಅವರ ಬೇಡಿಕೆಗಳ ೂರೈಕೆ, ಮುಸ್ಲಿಮ್ ಸಮಾಜದ ಮತ್ತು ಇಸ್ಲಾಮೀ ಶರೀಅತ್‌ನ ಆಶ್ರಯದಲ್ಲಿ ಬಡವನ ಭಿಮಾನದ ರಕ್ಷಣೆ ಇತ್ಯಾದಿ.

ಇತಿಹಾಸದ ಆರಂಭ ಕಾಲದಿಂದಲೇ ಮಾನವನು ಬಡತನ ಮತ್ತು ಬಡವರನ್ನು ಿತಿದ್ದಾನೆ. ಧರ್ಮ ಮತ್ತು ತತ್ವ ಸಿದ್ಧಾಂತಗಳು ಬಡತನದ ಪರಿಹಾರ ಮತ್ತು ಬಡವನ ಷ್ಟ ಕಾರ್ಪಣ್ಯಗಳ ನಿವಾರಣೆಗೆ ಹಿಂದಿನಿಂದಲೇ ಪ್ರಯತ್ನಿಸಿದ್ದವು. ಕೆಲವೊಮ್ಮೆ ಉಪದೇಶ ತ್ತು ಸಾಂತ್ವನಗಳ ಮೂಲಕ, ಕೆಲವೊಮ್ಮೆ ಆಮಿಷ ಮತ್ತು ಬೆದರಿಕೆಗಳ ಮೂಲಕ. ಕೆಲವರು ಸಮಾನತೆ ಮತ್ತು ಉಚ್ಛ ನೀಚತೆಗಳಿಲ್ಲದ, ಬಡತನ ಮತ್ತು ದಾರಿದ್ರ್ಯವಿಲ್ಲದಂತಹ ಜಗತ್ತಿನ ಲ್ಪನಿಕ ಚಿತ್ರವನ್ನು ಬಿಡಿಸಿ ತೋರಿಸಿದರು- ಕೇವಲ ಪುಸ್ತಕದ ಪುಟಗಳಿಗೆ ಸೀಮಿತವಾದ ಗತ್ತು! ವಾಸ್ತವಿಕ ಜಗತ್ತಿನಲ್ಲಿ ಅದು ಕಾರ್ಯಗತವಾಗಲಿಲ್ಲ. ಪ್ಲೇಟೋನ 'ರಿಪಬ್ಲಿಕ್' ಅದಕ್ಕೆ ದಾಹರಣೆಯಾಗಿದೆ. ಕೆಲವರ ಚಿಕಿತ್ಸೆಯು ರೋಗಕ್ಕಿಂತ ಕಠಿಣವಾಗಿತ್ತು. ಐದನೇ ಶತಮಾನದಲ್ಲಿ ್ರನ್ಸ್‌ನಲ್ಲಿ ಹೊನ್ನು ಮತ್ತು ಹೆಣ್ಣು ಸಮಾಜದ ಸಾರ್ವಜನಿಕ ಸೊತ್ತೆಂದು ವಾದಿಸಿದ ಸ್ದಕ್‌ನ ಚಳವಳಿಯು ಆ ವರ್ಗಕ್ಕೆ ಸೇರಿದೆ.

ಆಧುನಿಕ ಕಾಲದಲ್ಲಿ ಬಡತನ - ಆರ್ಥಿಕ ಸಮಸ್ಯೆಗಳು ಮಾನವನನ್ನು ಚಿಂತಿಸುವಂ
ಮಾಡಿದೆ. ಕೆಲವು ಗೊಂದಲಗಾರರು ಬಡತನವನ್ನು ಬಳಸಿ ಬಹುಸಂಖ್ಯಾತರನ್ನು ಕೆರಳಿಸಿ ನಾ
ಬಡವರ ರಕ್ಷಕರು ಮತ್ತು ವಿಮೋಚಕರೆಂದು ಬಿಂಬಿಸಿ ಧರ್ಮ ವಿರೋಧಿ ಸಿದ್ಧಾಂತಗಳ
ಪಾಮರರನ್ನು ಆಕರ್ಷಿಸಲು ಪ್ರಯತ್ನಿಸುತ್ತಿದ್ದಾರೆ. ಈ ವಿಭಾಗಕ್ಕೆ ಇಸ್ಲಾಮಿ ವ್ಯವಸ್ಥೆಯ ಬ
ಮುಸ್ಲಿಮರ ಅಜ್ಞಾನ, ಇಸ್ಲಾಮಿಗೆ ಮಸಿ ಬಳಿದು ವಿರೂಪಗೊಳಿಸಲಿಕ್ಕಾಗಿ ನಡೆಸಲಾ
ಕುಪ್ರಚಾರಗಳ ಪ್ರಭಾವ, ಮುಸ್ಲಿಮ್ ಸಮಾಜದ ಸಂಕೀರ್ಣ ಕಾಲದಲ್ಲಿ ಇಸ್ಲಾಮಿ ಚಿಂತಕ
ಮತ್ತು ವಿದ್ವಾಂಸರು ಬೆಳೆಸಿದ ತಪ್ಪು ತಿಳುವಳಿಕೆಗಳು ಸಹಕಾರಿಯಾಗಿವೆ.

ಈ ಹಿನ್ನೆಲೆಯಲ್ಲಿ ಅಲ್ಲಾಹನು ಮುಹಮ್ಮದ್‌ರ(ಸ) ಮೂಲಕ ಇಡೀ ಮಾನವ ಕುಲ
ಸನ್ಮಾರ್ಗ ಮತ್ತು ಕಾರುಣ್ಯವಾಗಿ ನೀಡಿದ ಇಸ್ಲಾಮಿ ವ್ಯವಸ್ಥೆಯ ವಾಸ್ತವಿಕತೆ, ಖಾಸಗಿ ಮ
ಸಾಮಾಜಿಕ ಸಮಸ್ಯೆಗಳ ಪರಿಹಾರಕ್ಕೆ ಅದು ಸಮರ್ಪಿಸಿರುವ ಸಮರ್ಪಕ ಸಿದ್ಧಾಂತಗಳ
ಮುಸ್ಲಿಮ್ ಸಮಾಜಕ್ಕೆ ಮನವರಿಕೆ ಮಾಡಿಸಬೇಕಾದುದು ಇಸ್ಲಾಮಿನ ಬಗ್ಗೆ ತಿಳುವಳಿಕೆಯಿರುವ
ಕರ್ತವ್ಯವಾಗಿದೆ.

ಈ ಕೃತಿಯಲ್ಲಿ ಬಡತನ ನಿರ್ಮೂಲನದ ಇಸ್ಲಾಮಿ ವಿಧಾನವನ್ನು ಇಸ್ಲಾಮಿನ ಆಧ
ಗ್ರಂಥಗಳಾಗಿರುವ ಕುರ್‌ಆನ್, ಪ್ರವಾದಿಚರ್ಯೆ, ಸಂಶೋಧಕರಾದ ಕರ್ಮಶಾಸ್ತ್ರ ವಿಶಾರ
ಹೇಳಿಕೆಗಳ ಆಧಾರದಲ್ಲಿ ಪ್ರತಿಪಾದಿಸಲಾಗಿದೆ. ಆದ್ದರಿಂದ ಆಧುನಿಕ ಕಾಲದ ಇಸ್ಲಾ
ಪ್ರಚಾರಕರ ಕೃತಿಗಳ ಬಗ್ಗೆ ಓರಿಯಂಟಲಿಸ್ಟ್‌ಗಳು ಆರೋಪಿಸುವಂತೆ, ಸಹಾಬಿಗಳಿಗೆ ಅಥ
ಅಬೂ ಹನೀಫಾ, ಮಾಲಿಕ್ ಮುಂತಾದ ಇಮಾಮರಿಗೆ ಅಪರಿಚಿತವಾದ ನೂತನ ಇಸ್ಲಾಮ
ನಾನು ನಿರ್ಮಿಸುತ್ತಿರುವೆನೆಂದು ಯಾರೂ ತಪ್ಪು ತಿಳಿಯಬಾರದು.

ಈ ಕೃತಿಯಲ್ಲಿ ಬಡತನದ ಬಗ್ಗೆ ಇಸ್ಲಾಮಿನ ಧೋರಣೆ, ಪರಿಹಾರೋಪಾಯಗಳ
ಬಡವನ ಹಕ್ಕು ರಕ್ಷಣೆ, ಆತನ ಲೌಕಿಕ, ಸಾಂಸ್ಕೃತಿಕ ಬೇಡಿಕೆಗಳ ಪೂರೈಕೆಗಳಿಗೆ ಇಸ್ಲಾ
ನೀಡಿದ ಗಮನವು, ಸಮಕಾಲೀನ ಜಗತ್ತಿನ ವಿವಿಧೆಡೆಗಳಲ್ಲಿ ಪ್ರಚಾರದಲ್ಲಿರುವ ಇತರ ತ
ಸಿದ್ಧಾಂತಗಳಿಗಿಂತ ಹೇಗೆ ಭಿನ್ನವಾಗಿದೆಯೆಂಬುದನ್ನು ಸ್ಪಷ್ಟಪಡಿಸಲಾಗಿದೆ. ಹಾಗೆಯೇ
ಕೃತಿಯನ್ನು ಓದುವಾಗ ಅನ್ಯ ವಿಚಾರ ಧಾರೆಗಳನ್ನು ಇಸ್ಲಾಮಿನೊಂದಿಗೆ ಅಥವಾ ಇಸ್ಲಾಮ
ಇತರ ತತ್ತ್ವ ಸಿದ್ಧಾಂತಗಳೊಂದಿಗೆ ಬೆರೆಸಿ, ಸೋಶಿಯಲಿಝಮ್ ಮತ್ತು ಕ್ಯಾಪಿಟಲಿಝಮ್‌ಗ
ಇಸ್ಲಾಮಿನಿಂದ ರೂಪುಗೊಂಡಿವೆ ಅಥವಾ ತದ್ವಿರುದ್ಧವಾಗಿವೆಯೆಂಬ ಮಾತಿಗೆ ಅರ್ಥವಿಲ್ಲವೆಂ
ವಾಚಕರಿಗೆ ಮನವರಿಕೆಯಾಗಬಹುದು.

ಜೀವನ, ಮಾನವ, ಉದ್ಯೋಗ, ಸಂಪತ್ತು, ವ್ಯಕ್ತಿ, ಸಮಾಜ ಇತ್ಯಾದಿಗಳ ಕುರಿ
ಇಸ್ಲಾಮಿಗೆ ಸ್ವಂತ ದೃಷ್ಟಿಕೋನವಿದೆ. ಅದು ಇತರ ತತ್ತ್ವ ಸಿದ್ಧಾಂತಗಳಿಗಿಂತ ಸಂಪೂ
ಭಿನ್ನವಾಗಿದೆ. ಇಸ್ಲಾಮಿನ ದೃಷ್ಟಿಕೋನವು ಸ್ವತಂತ್ರ ಮತ್ತು ಸಹಜವಾಗಿದೆ. ಅದು ಪಾಶ್ಚಾ
ಅಥವಾ ಪೌರ್ವಾತ್ಯವಲ್ಲ. ಅದು ದೈವಿಕ ಮತ್ತು ಮಾನವೀಯವಾಗಿದೆ. "ಅಗ್ನಿ ಸ್ಪರ್ಶಿಸದಿದ್ದ
ಅದರ ತೈಲವು ಬೆಳಕು ಸುರಿಸುತ್ತದೆ. ಬೆಳಕಿನ ಮೇಲೆ ಬೆಳಕು! ಅಲ್ಲಾಹನು ತಾನಿಚ್ಛಿಸಿದವ

ಆತನ ಬೆಳಕಿನೆಡೆಗೆ ಮಾರ್ಗದರ್ಶನ ನೀಡುತ್ತಾನೆ."

ಆದ್ದರಿಂದ ಇಸ್ಲಾಮಿಗೆ ಅದರ ಮೌಲ್ಯ, ಸಮಗ್ರತೆ, ಅಗಾಧತೆ, ಅಜೇಯತೆ, ಮೇಲ್ಮೆ, ಸೌಂದರ್ಯವನ್ನು ಮೀಸಲಿಡೋಣ. ಇಸ್ಲಾಮನ್ನು ಇತರ ವಿಚಾರಧಾರೆಗಳೊಂದಿಗೆ ಬೆರೆಸದಿರುವುದೇ ಘನತೆಯಾಗಿದೆ. ಜೀವನದ ಎಲ್ಲ ಸಮಸ್ಯೆ ಮತ್ತು ಬಿಕ್ಕಟ್ಟುಗಳಲ್ಲಿಯೂ ಇಸ್ಲಾಮಿನ ಪರಿಹಾರ ಸೂತ್ರಗಳನ್ನು ಕಿಂಚಿತ್ ಮನೋಬಲ ಮತ್ತು ಸ್ವಂತಿಕೆಯಿಂದ ನಾವು ಸ್ವೀಕರಿಸೋಣ. ಅದು ಎಲ್ಲ ರೋಗಗಳ ದಿವ್ಯ ಔಷಧವಾಗಿದೆ. ಯಾವ ಗಾಢಾಂಧಕಾರದಲ್ಲಿಯೂ ನಂದದ ದೀಪವಾಗಿದೆ. ಇತರೆಲ್ಲ ತತ್ತ್ವ ಸಿದ್ಧಾಂತ ಮತ್ತು ವ್ಯವಸ್ಥೆಗಳು, ಭ್ರಷ್ಟ ಮತ್ತು ಭ್ರಷ್ಟಗೊಳಿಸುವವುಗಳಾಗಿವೆ. ಅವೆಲ್ಲವೂ ನಿಷೇಧಿ ಮತ್ತು ಕುತಂತ್ರಿಗಳಾದ ಧಿಕ್ಕಾರಿಗಳ ಸೃಷ್ಟಿಯಾಗಿದೆ. ಯಹೂದಿಗಳೇ ಅವುಗಳ ರೂವಾರಿಗಳಾಗಿರುವರೆಂಬುದೇ ಅವುಗಳ ತಿರಸ್ಕಾರಕ್ಕೆ ಸೂಕ್ತ ಕಾರಣವಾಗಿದೆ.

"ಸತ್ಯನಿಷೇಧಿಗಳ ಕರ್ಮಗಳು ಮರೀಚಿಕೆಯಂತೆ. ಬಾಯಾರಿದಾತನು ಅದನ್ನು ನೀರೆಂದು ಭ್ರಮಿಸುತ್ತಾನೆ. ಹತ್ತಿರ ಹೋದರೆ ಅಲ್ಲಿ ಏನೂ ಕಾಣಿಸುವುದಿಲ್ಲ... ಅಥವಾ, ಅಗಾಧವಾದ ಸಮುದ್ರದ ಅಂಧಕಾರದಂತೆ- ಅದನ್ನು ತೆರೆಗಳು ಆವರಿಸಿವೆ. ಅದರ ಮೇಲೆಯೂ ತೆರೆಗಳ ರಾಶಿ. ದಟ್ಟವಾದ ಗಾಢಾಂಧಕಾರ. ಮಾನವನು ತನ್ನ ಕೈಗಳನ್ನು ಹೊರ ಚಾಚಿದರೂ ಅದು ಆತನಿಗೆ ಕಾಣಿಸಲಾರದು. ಅಲ್ಲಾಹನು ಪ್ರಕಾಶ ದಯಪಾಲಿಸದಾತನಿಗೆ ಬೇರೆ ಯಾವ ಪ್ರಕಾಶವೂ ಲಭಿಸುವುದಿಲ್ಲ." (ಸೂರಃ ಅನ್ನೂರ್: 39-40)

ಯೂಸುಫುಲ್ ಕರ್ಝಾವಿ

ದೋಹ

ಶಅಬಾನ್ 1389

ನವೆಂಬರ್ 1966

1

# ಬಡತನ: ವಿವಿಧ ದೃಷ್ಟಿಕೋನಗಳು

ಪುರಾತನ ಕಾಲದಿಂದಲೇ ಬಡತನದ ಬಗ್ಗೆ ಜನರಲ್ಲಿ ಹಲವು ರೀತಿಯ ಷ್ಟಿಕೋನಗಳಿದ್ದುವು. ಒಂದು ವರ್ಗವು ಅದನ್ನು ಪಾವನವೆಂದು ಭಾವಿಸಿತ್ತು. ಬಡತನವು ರಿಗೆ ವಿಮೋಚನೆ ಹೊಂದಬೇಕಾದ ಸಂಕಷ್ಟವಾಗಿರಲಿಲ್ಲ. ಬಗೆಹರಿಸಬೇಕಾದ ಸಮಸ್ಯೆಯೂ ಗಿರಲಿಲ್ಲ. ಬಡತನವನ್ನು ಅವರು ಅನುಗ್ರಹವೆಂದೇ ಪರಿಗಣಿಸಿದ್ದರು- ಅಲ್ಲಾಹನು ತಾನು ಕ್ಷಿಸಿದವರಿಗೆ ನೀಡುವ ಅನುಗ್ರಹ. ಪರಲೋಕ ಚಿಂತೆಯಲ್ಲಿ ಮಗ್ನರಾಗಿ, ಲೌಕಿಕ ಖಭೋಗಗಳಲ್ಲಿ ವೈರಾಗ್ಯ ಮೂಡಿ, ಅಲ್ಲಾಹನ ಸಂಬಂಧವನ್ನು ಉಳಿಸಿ, ಮಾನವ ಮಿಗಳಾಗಲಿಕ್ಕಾಗಿ ಅಲ್ಲಾಹನು ದಯಪಾಲಿಸಿರುವ ಅನುಗ್ರಹ. ಅಕ್ರಮಿ, ಸೋಮಾರಿ ಮತ್ತು ಹಂಕಾರಿಯಾಗಿರುವ ಶ್ರೀಮಂತನ ಸ್ಥಿತಿ ಅದಕ್ಕಿಂತ ತೀರಾ ಭಿನ್ನವಾಗಿರುವುದಷ್ಟೆ. ಕೆಲವು ನ್ಯಾಸಿಯರು, ಪುರೋಹಿತರು ಮತ್ತು ಸೂಫಿಗಳು ಬಡತನವನ್ನು ಈ ದೃಷ್ಟಿಯಿಂದ ೋಡುತ್ತಾರೆ. ಅವರ ಅಭಿಪ್ರಾಯದಂತೆ ಈ ಜಗತ್ತಿನಲ್ಲಿ ಅಧರ್ಮವೇ ತುಂಬಿದೆ. ಇಲ್ಲಿ ಕಲ ಕೆಡುಕು ಮತ್ತು ಹಿಂಸೆಗಳಿವೆ. ಅದು ಆದಷ್ಟು ಬೇಗ ನಾಶವಾಗುವುದೇ ಉತ್ತಮ. ಷ್ಟಪಕ್ಷ ಭೂಮಿಯಲ್ಲಿ ಮಾನವನ ಆಯುಷ್ಯವಾದರೂ ಕಡಿಮೆಯಾಗಬೇಕು. ಆದ್ದರಿಂದ ದ್ಧಿವಂತರು ಜೀವನದ ಸೌಲಭ್ಯಗಳನ್ನು ಕಡಿಮೆಗೊಳಿಸಿ ಕೇವಲ ಜೀವಿಸಲು ಅಗತ್ಯವಿರುವಷ್ಟು ತ್ರ ಬಳಸಿಕೊಳ್ಳಬೇಕು.

ವಿಗ್ರಹಾರಾಧಕರು ಮತ್ತು ದೇವ ಧರ್ಮಾವಲಂಬಿಗಳಲ್ಲಿಯೂ ಈ ವಿಚಾರ ರೆಯವರಿದ್ದಾರೆ. ಅವರು ಬಡತನವನ್ನು ಹೊಗಳಿ ಅದನ್ನು ಶ್ರೇಷ್ಠವೆಂದು ಪರಿಗಣಿಸುತ್ತಾರೆ. ಂದರೆ, ಅದು ದೇಹ ದಂಡನೆಯ ಉಪಾಧಿಯಾಗಿದೆ. ದೇಹದಂಡನೆಯಿಂದ ಆತ್ಮಕ್ಕೆ ೋಕ್ಷದ ಹಾದಿ ಸುಗಮವಾಗುತ್ತದೆ. ಕ್ರೈಸ್ತ ಪೌರೋಹಿತ್ಯ, ಪರ್ಶಿಯದ ಮನೀಕಿಝುಮ್, ರತೀಯ ಸನ್ಯಾಸ ಇತ್ಯಾದಿಗಳ ಪ್ರಭಾವದಿಂದ ಇಸ್ಲಾಮಿನ ಸಾಂಸ್ಕೃತಿಕ ಮೌಲ್ಯಗಳು ಪಿತಗೊಂಡಾಗ ಕೆಲವು ಮುಸ್ಲಿಮ್ ಸೂಫಿಗಳಲ್ಲಿಯೂ ಈ ವಿಚಾರ ಧಾರೆ ಹಬ್ಬಿತು. ತನ ಬರುವುದನ್ನು ಕಂಡಾಗ 'ಪುಣ್ಯಗಳ ಸಂಕೇತಕ್ಕೆ ಸ್ವಾಗತ' ವೆಂದೂ ಐಶ್ವರ್ಯ ಬಂದರೆ ಹರ್ ಪಾಪ' ವೆಂದೂ ಹೇಳಬೇಕೆಂದು ಆ ವಿಚಾರಧಾರೆಯವರ ಕೃತಿಯಲ್ಲಿ ಓದಿದ್ದು ಪಾಗುತ್ತಿದೆ. ಬಡತನದ ಬಗ್ಗೆ ಇಂತಹ ದೃಷ್ಟಿಕೋನವಿರುವುದರಿಂದ ಅದರ ಹಾರೋಪಾಯವನ್ನು ನಿರೀಕ್ಷಿಸುವುದು ನಿರರ್ಥಕ.

ಎರಡನೇಯ ವರ್ಗವು ಬಡತನವನ್ನು ವಿಪತ್ತು ಮತ್ತು ಕೇಡೆಂದು ಭಾವಿಸುತ್ತದೆ. ಆದರೆ ರ ದೃಷ್ಟಿಯಲ್ಲಿ ಅದು ಚಿಕಿತ್ಸೆ ಅಥವಾ ಔಷಧಿಯಿಲ್ಲದ ದೇವವಿಧಿಯಾಗಿದೆ. ಬಡವನ ದ್ರ್ಯವೂ ಶ್ರೀಮಂತನ ಐಶ್ವರ್ಯವೂ ದೇವೇಚ್ಛೆ ಮತ್ತು ದೇವ ನಿರ್ಣಿತವಾಗಿದೆ. ದೇವನು

ಬಯಸಿದ್ದರೆ ಎಲ್ಲ ಮಾನವರಿಗೂ ಖಾರೂನ್‌ನ ಖಜಾನೆಗಳನ್ನು ನೀಡುತ್ತಿದ್ದ. ಎಲ್ಲರನ
ಶ್ರೀಮಂತಗೊಳಿಸುತ್ತಿದ್ದ. ಆದರೆ, ದೇವನು ಕೆಲವರಿಗೆ ಇನ್ನು ಕೆಲವರಿಗಿಂತ ಹೆಚ್ಚಿನ ಸ
ನೀಡಿದ. ತನ್ನ ಕೊಡುಗೆಗಳಿಂದ ಮಾನವನನ್ನು ಪರೀಕ್ಷಿಸಲಿಕ್ಕಾಗಿ ದೇವನು ತಾನಿಚ್ಛಿಸಿದವ
ಸಮೃದ್ಧಿ ನೀಡುತ್ತಾನೆ. ಇತರ ಕೆಲವರ ಜೀವನಾನುಕೂಲತೆಗಳನ್ನು ಕಡಿಮೆಗೊಳಿಸುತ್ತಾ
ದೇವೇಚ್ಛೆಗೆ ಅಡ್ಡಿಯುಂಟು ಮಾಡಬಾರದು.

ಬಡತನದ ನಿವಾರಣೆಗೆ ಈ ಮಂದಿ ಸೂಚಿಸುವ ಪರಿಹಾರವು ಕೇವಲ ಬಡವ
ಉಪದೇಶ ನೀಡುವುದಕ್ಕೆ ಸೀಮಿತವಾಗಿದೆ: "ದೇವ ನಿರ್ಣಯದಿಂದ ಸಂತೃಪ್ತರಾಗಿರಿ. ದೇ
ಪರೀಕ್ಷೆಯಲ್ಲಿ ತಾಳ್ಮೆ ವಹಿಸಿರಿ. ಇರುವುದರಲ್ಲಿ ತೃಪ್ತರಾಗಿರಿ. ಸಂತೃಪ್ತಿಯೇ ಐಶ್ವಯ
ಅದುವೇ ಅನಶ್ವರ ಸಂಪತ್ತು." ಇವರ ದೃಷ್ಟಿಯಲ್ಲಿ ಸಂತೃಪ್ತಿಯೆಂದರೆ ಎಲ್ಲ ಪರಿಸ್ಥಿತಿಗಳಲ್ಲಿಂ
ಇರುವುದರಲ್ಲಿ ತೃಪ್ತಿ ಹೊಂದುವುದಾಗಿದೆ. 'ಜಬರಿ' ಯರೆನ್ನಲಾಗುವ ಈ ವರ್ಗ
ಶ್ರೀಮಂತರ ದುಂದುಗಾರಿಕೆ ಮತ್ತು ಆಡಂಬರವನ್ನು ಗಮನಿಸುವುದಿಲ್ಲ. ಶ್ರೀಮಂತ
ವಿಶೇಷ ಉಪದೇಶವನ್ನು ನೀಡುವುದಿಲ್ಲ. ಅದೇ ವೇಳೆ ಅವರು ಬಡವರಿಗೆ 'ಇದು ದೇವೇ
ಅದರಿಂದ ಸಂತೃಪ್ತರಾಗಿರಿ. ಬೇರೇನನ್ನೂ ಬೇಡಬೇಡಿರಿ. ಅದರ ಬದಲಾವಣೆ
ಪ್ರಯತ್ನಿಸಬೇಡಿರಿ' ಎಂದು ಸಾಕಷ್ಟು ಉಪದೇಶ ನೀಡುತ್ತಾರೆ.

ಇನ್ನೊಂದು ವರ್ಗವು 'ಜಬರಿ'ಯರ ದೃಷ್ಟಿಕೋನವನ್ನೇ ಹೊಂದಿದೆ. ಆದರೂ ಒಂ
ಸಣ್ಣ ವ್ಯತ್ಯಾಸವಿದೆ. ತಾಳ್ಮೆ ವಹಿಸಬೇಕೆಂಬ ಅವರ ಉಪದೇಶವು ಕೇವಲ ಬಡವರಿಗೆ ಮ
ಸೀಮಿತವಾಗಿಲ್ಲ. ಶ್ರೀಮಂತರಿಗೂ ಅವರು ಕೆಲವು ಉಪದೇಶಗಳನ್ನು ನೀಡುತ್ತಾ
"ಸತ್ಕಾರ್ಯಗಳನ್ನು ಮಾಡಿರಿ. ಬಡವರಿಗೆ ದಾನ ನೀಡಿರಿ. ಹಾಗೆ ಮಾಡುವವರಿಗೆ ಅಲ್ಲಾ
ಬಳಿ ಪ್ರತಿಫಲವಿದೆ. ಬಡವರೊಡನೆ ಸಹಾನುಭೂತಿ ತೋರಿಸದವರಿಗೆ ಘೋರ ಶಿಕ್ಷೆಯಿ

ಈ ಪರಿಹಾರವು ಶ್ರೀಮಂತರಿಗೆ ಬಡವರೊಂದಿಗಿರುವ ಹೊಣೆಗಾರಿಕೆಯ ಪ್ರಮಾಣವ
ಸೂಚಿಸುವುದಿಲ್ಲ. ಅದರಲ್ಲಿ ಲೋಪ ಉಂಟು ಮಾಡಿದವರಿಗೆ ದಂಡನಾ ಕ್ರಮವ
ನಿರ್ಣಯಿಸಿಲ್ಲ. ಅರ್ಹತೆಯಿರುವವರಿಗೆ ತಮ್ಮ ಹಕ್ಕುಗಳನ್ನು ಗಳಿಸುವ ಕಾರ್ಯವ
ನಿರ್ವಹಿಸುವುದಿಲ್ಲ. ಅದಕ್ಕೆ ಸಜ್ಜನರ ಆತ್ಮ ಸಾಕ್ಷಿ, ಸತ್ಯ ವಿಶ್ವಾಸಿಯ ಪ್ರತಿಫಲಾಪೇಕ್ಷೆ ಮ
ಶಿಕ್ಷೆಯನ್ನು ಭಯಪಡುವ ಹೃದಯ ಮಾತ್ರವೇ ಆಧಾರವಾಗಿದೆ. ದಾನ ಧರ್ಮಗಳ
ನೀಡಿದವರಿಗೆ ಪರಲೋಕದಲ್ಲಿ ಪ್ರತಿಫಲವಿದೆ; ಜಿಪುಣರಿಗೆ ಶಿಕ್ಷೆಯಿದೆಯೆಂಬ ನಂಬಿಕೆ ಮಾ

ಇಸ್ಲಾಮೇತರ ಧರ್ಮಗಳು ಬಡತನ ನಿರ್ಮೂಲನಕ್ಕೆ ಆತ್ಮಸಾಕ್ಷಿ ಮತ್ತು ದ
ಧರ್ಮಗಳನ್ನು ಮಾತ್ರ ಅವಲಂಬಿಸುವ ನೀತಿಯನ್ನು ಅಂಗೀಕರಿಸಿದ್ದುವು. ಅನೇಕ ಧಾರ್ಮಿ
ವಿದ್ವಾಂಸರು ಮತ್ತು ಆಚಾರ್ಯರು ಅಂಗೀಕರಿಸಿದ, ಬಡತನವು ಶ್ರೇಷ್ಠ ಮತ್ತು ದ
ವಿಧಿಯೆಂಬ ಸೂಫೀ-ಜಬರೀ ದೃಷ್ಟಿಕೋನಗಳನ್ನು ಆ ಧರ್ಮಗಳು ನಿರ್ಲಕ್ಷಿಸಿದು
ಮಧ್ಯಕಾಲೀನ ಶತಮಾನಗಳಲ್ಲಿ ಯುರೋಪಿನಲ್ಲಿಯೂ ಈ ವಿಚಾರಧಾರೆ ಚಾಲ್ತಿಯಲ್ಲಿ
ದೇವನ ಸಜ್ಜನ ದಾಸರ ಔದಾರ್ಯದ ಹೊರತು ಬಡವರಿಗೆ ಶ್ರೀಮಂತರ ಸಂಪತ್ತಿ

ನಿರ್ದಿಷ್ಟ ಹಕ್ಕು ಅಥವಾ ಪಾಲಿರಲಿಲ್ಲ.

ನಾಲ್ಕನೆಯ ವರ್ಗವು ಬಂಡವಾಳಶಾಹೀ ವಿಚಾರಧಾರೆಯಾಗಿದೆ. ಬಡತನವು ಗಂಭೀರ ಸಮಸ್ಯೆಯೇ ಆಗಿದೆ. ಆದರೆ ಅದಕ್ಕೆ ಬಡವರೇ ಹೊಣೆಗಾರರಾಗಿದ್ದಾರೆ ಅಥವಾ ದೇವೇಚ್ಛೆಯೋ ದೌರ್ಭಾಗ್ಯವೋ ಆಗಿರಬಹುದು. ಅದರಲ್ಲಿ ಸಮಾಜ, ರಾಷ್ಟ್ರ ಅಥವಾ ಶ್ರೀಮಂತರ ಪಾತ್ರವಿಲ್ಲ. ಪ್ರತಿಯೊಬ್ಬರೂ ತಂತಮ್ಮ ಪಾತ್ರಕ್ಕೆ ತಾವೇ ಹೊಣೆಗಾರರು. ಪ್ರತಿಯೊಬ್ಬರೂ ತಮ್ಮ ಸಂಪತ್ತಿನ ಒಡೆತನದ ಹಕ್ಕು ಮತ್ತು ಲೇವಾದೇವಿಯಲ್ಲಿ ಸ್ವತಂತ್ರರು.

ಇವರು ಮೂಸಾರ ಸಮುದಾಯದ ದುರಹಂಕಾರಿಯಾಗಿದ್ದ ಕಾರೂನ್‌ನ ಅನುಯಾಯಿಗಳಾಗಿದ್ದಾರೆ. ಅಲ್ಲಾಹನು ಕಾರೂನ್‌ನಿಗೆ ಅಪಾರ ಸಂಪತ್ತು ನೀಡಿದನು. "ಅಲ್ಲಾಹನು ನಿನಗೆ ನೀಡಿರುವುದರಲ್ಲಿ ನೀನು ಪರಲೋಕವನ್ನು ಬಯಸು. ಇಹಲೋಕದ ನಿನ್ನ ಪಾಲನ್ನು ನೀನು ಮರೆಯಬೇಡ. ಅಲ್ಲಾಹನು ನಿನಗೆ ಒಳಿತು ಮಾಡಿರುವಂತೆಯೇ ನೀನೂ ಒಳಿತು ಮಾಡು. ನೀನು ಭೂಮಿಯಲ್ಲಿ ನಾಶವನ್ನು ಆಶಿಸಬೇಡ. ಅಲ್ಲಾಹನು ವಿನಾಶಕರನ್ನು ಮೆಚ್ಚುವುದಿಲ್ಲ." ಎಂಬುದಾಗಿ ಕಾರೂನ್‌ನಿಗೆ ಆತನ ಸಮುದಾಯವು ಹಿತೋಪದೇಶ ನೀಡಿದಾಗ ಆತ ಹೇಳಿದ ಉತ್ತರವನ್ನು ಕುರ್‌ಆನ್ ಹೀಗೆ ಉಲ್ಲೇಖಿಸಿದೆ: "ನನಗೆ ದೊರೆತುದೆಲ್ಲವೂ ನನ್ನ ಸಾಮರ್ಥ್ಯದಿಂದಲೇ ಆಗಿದೆ!" ಈ ಕಾರೂನೀ ಸಿದ್ಧಾಂತದ ವಕ್ತಾರರ ದೃಷ್ಟಿಯಲ್ಲಿ ಅವರ ಎಲ್ಲ ಸಂಪತ್ತಿಗೂ ಬುದ್ಧಿ ಶಕ್ತಿಯೇ ಕಾರಣವಾಗಿದೆ. ಸಂಪತ್ತಿನಲ್ಲಿ ಅದರ ಒಡೆಯನ ಹೊರತು ಬೇರೆ ಯಾರಿಗೂ ಹಕ್ಕಿಲ್ಲ. ಹಣದ ಒಡೆಯನಿಗೆ ಅದನ್ನು ತನ್ನಿಷ್ಟದಂತೆ ವ್ಯಯಿಸುವ ಸ್ವಾತಂತ್ರ್ಯವಿದೆ. ಯಾರಾದರೂ ಬಡವನಿಗೆ ದಾನ ನೀಡುವುದಿದ್ದರೆ ಅದು ಕೇವಲ ಔದಾರ್ಯವಾಗಿದೆ. ಸಮಾಜವು, ಸಂಪಾದಿಸಿ ಶ್ರೀಮಂತರಾಗುವ ಸ್ವಾತಂತ್ರ್ಯವನ್ನು ಎಲ್ಲರಿಗೂ ನೀಡಬೇಕು. ಸಂಪಾದನೆಯಲ್ಲಿ ಯಾರಾದರೂ ವಿಫಲಗೊಂಡರೆ ಅದು ಸಮಾಜದ ತಪ್ಪಲ್ಲ. ಪ್ರೀತಿ, ಸಹಾನುಭೂತಿಗಳಿಂದ ಇಹಲೋಕದಲ್ಲಿ ಹೆಸರು ಗಳಿಸಲಿಕ್ಕಾಗಿ ಸಂಪತ್ತಿನಿಂದ ಏನಾದರೂ ವ್ಯಯಿಸಬಹುದು. ಅದರ ಹೊರತು ಬಡವರ ಹೊಣೆ ವಹಿಸಿ ಅವರಿಗಾಗಿ ಹಣ ವ್ಯಯಿಸುವ ಬದ್ಧತೆ ಶ್ರೀಮಂತ ವರ್ಗದವರಿಗಿಲ್ಲ. ಅದನ್ನು ಪರಲೋಕದಲ್ಲಿ ವಿಶ್ವಾಸವಿರುವ, ಮರಣೋತ್ತರ ಸುಖವನ್ನು ಬಯಸುವ ಮಂದಿ ನಿರ್ವಹಿಸಲಿ!

ಇದು ಈ ಶತಮಾನದ ಆರಂಭದಲ್ಲಿ ಯುರೋಪಿನಲ್ಲಿ ಪ್ರಬಲವಾಗಿದ್ದ ಅಪ್ಪಟ ಬಂಡವಾಳಶಾಹೀ ವಿಚಾರಧಾರೆಯಾಗಿದೆ. ಇಂತಹ ಸಮಾಜದಲ್ಲಿ ವಸೂಲು ಮಾಡುವ ಹಕ್ಕುಗಳಿಲ್ಲದ ಬಡ ದುರ್ಬಲ ವರ್ಗದ ಸ್ಥಿತಿಯು, ಶ್ರೀಮಂತರ ಔತಣ ಕೂಟಗಳಿಗೆ ಆಮಂತ್ರಣವಿಲ್ಲದೆ ಮುಗಿ ಬೀಳುವ ಅನಾಥರಿಗಿಂತ ಶೋಚನೀಯವಾಗಿರಬಹುದು. ಬಂಡವಾಳ ಶಾಹಿತ್ವವು ಆರಂಭ ಕಾಲದಲ್ಲಿ ಮಹಿಳೆಯರು, ಮಕ್ಕಳು, ನಿರ್ಗತಿಕರು, ಮತ್ತು ದುರ್ಬಲರೊಂದಿಗೆ ಕಿಂಚಿತ್ತೂ ಅನುಕಂಪವಿಲ್ಲದ ಕಠೋರ ಮನಸ್ಸು, ಕ್ರೌರ್ಯ ಮತ್ತು ಪಾಶವೀಯತೆಯ ಪ್ರತೀಕವಾಗಿತ್ತು. ಅದು ಮಹಿಳೆಯರನ್ನು, ಮಕ್ಕಳನ್ನು ತುಚ್ಛ ಕೂಲಿಗೆ ಕಾರ್ಖಾನೆಗಳಲ್ಲಿ ದುಡಿಯಲು ನಿರ್ಬಂಧಿಸಿತು. ಅದಕ್ಕೆ ವಿಧೇಯರಾಗದವರನ್ನು ಕಠಿಣ ಹೃದಯದ ಮಾಲಿಕರು

ತುಳಿದು ನಿರ್ಮೂಲನ ಮಾಡಿ ಬಿಡುತ್ತಿದ್ದರು. ಕ್ರಮೇಣ ಪರಿಸ್ಥಿತಿಯ ಒತ್ತಡ,ಹಲವು ವಿಧದ ಹೋರಾಟಗಳು ಮತ್ತು ಸಮಾಜವಾದೀ ಸಿದ್ಧಾಂತಗಳ ಪ್ರಚಾರದಿಂದ ಬಂಡವಾಳ ಶಾಹಿತ್ವವು ಹೆಜ್ಜೆ ಬದಲಾಯಿಸುವುದು ಅನಿವಾರ್ಯವಾಯಿತು. ಅದು ಕಾರ್ಮಿಕರಿಗೆ ಕೆಲವು ಸೌಲಭ್ಯ ಮತ್ತು ಹಕ್ಕುಗಳನ್ನು ಅನುಮತಿಸಿತು. ರಾಷ್ಟ್ರ ಮತ್ತು ಕಾನೂನುಗಳ ಹಸ್ತಕ್ಷೇಪದಿಂದ ಆ ಬದಲಾವಣೆಗಳು ಇಂದು, ಜೀವವಿಮೆಯಂತಹ ವ್ಯವಸ್ಥೆಗಳಿಂದ ಕಾರ್ಮಿಕರಿಗೆ ಜೀವನ ಭದ್ರತೆ ಒದಗಿಸುವ ಮಟ್ಟಕ್ಕೆ ತಲಪಿವೆ.

ಇನ್ನೊಂದು ವರ್ಗವು ಸೂಚಿಸುವ ಪರಿಹಾರವು ಹೀಗಿದೆ: ಶ್ರೀಮಂತ ವರ್ಗವನ್ನು ಸಂಪೂರ್ಣ ನಿರ್ಮೂಲನಗೊಳಿಸಿ, ಅವರ ಸಂಪತ್ತನ್ನು ಸ್ವಾಧೀನಪಡಿಸದೆ ಬಡತನ ನಿವಾರಿಸಿ ಬಡವರಿಗೆ ನ್ಯಾಯ ದೊರಕಿಸಿ ಕೊಡಲು ಸಾಧ್ಯವಿಲ್ಲ. ಅದಕ್ಕಾಗಿ ಸಮಾಜದ ಶ್ರೀಮಂತರಲ್ಲದ ವರ್ಗವನ್ನು ಸಂಘಟಿಸಿ ಅವರಲ್ಲಿ ಶ್ರೀಮಂತವರ್ಗದ ವಿರುದ್ಧ ದ್ವೇಷಾಸೂಯೆಗಳನ್ನು ಬೆಳೆಸಬೇಕು. ಇದರಿಂದ ಉಭಯ ವರ್ಗಗಳ ನಡುವೆ ಹೋರಾಟ, ಸಂಘರ್ಷ ಆರಂಭವಾಗುವುದು. ಇದರಲ್ಲಿ ಜನಬಾಹುಳ್ಯವಿರುವ ವರ್ಗವು ಜಯಗಳಿಸುವುದು. ಅವರೇ 'ಪ್ರೋಲಿಟೇರಿಯಟ್' ಎಂದು ಕರೆಯಲಾಗುವ 'ಕಾರ್ಮಿಕ ಜನವರ್ಗ'. ಇವರ ಚಟುವಟಿಕೆಯು ಶ್ರೀಮಂತ ವರ್ಗದ ನಿರ್ಮೂಲನ ಅಥವಾ ಅವರ ಸಂಪತ್ತಿನ ಸ್ವಾಧೀನಕ್ಕೆ ಮಾತ್ರ ಸೀಮಿತವಾಗಲಿಲ್ಲ. ಒಡೆತನ ಹಕ್ಕುಗಳ ಮೂಲಾಧಾರಗಳ ವಿರುದ್ಧವೂ ಅವರು ಹೋರಾಡಿದರು. ಯಾವ ರೀತಿಯಿಂದ ಸಂಪಾದಿಸಿದ್ದರೂ, ವ್ಯಕ್ತಿಗಳು ಸಂಪತ್ತಿನ ಒಡೆಯರಾಗುವುದನ್ನು ವಿಶೇಷತಃ 'ಉತ್ಪಾದನೆಯ ಸಲಕರಣೆ'ಗಳೆಂದು ಕರೆಯಲಾಗುವ ಜಮೀನು, ಕಾರ್ಖಾನೆ, ಯಂತ್ರೋಪಕರಣಗಳ ಒಡೆತನ ಹಕ್ಕನ್ನು ಇವರು ಅಂಗೀಕರಿಸುವುದಿಲ್ಲ.

ಇದು ಕಮ್ಯೂನಿಝುಮ್ ಮತ್ತು ಕ್ರಾಂತಿಕಾರೀ ಸೋಶಿಯಲಿಝುಮ್‌ನ ವಕ್ತಾರರ ದೃಷ್ಟಿಕೋನವಾಗಿದೆ. ವ್ಯಕ್ತಿಯ ಒಡೆತನ ಹಕ್ಕನ್ನು ವಿರೋಧಿಸಿ ಅದರ ನಿರ್ಮೂಲನಕ್ಕೆ ಅಂಗೀಕರಿಸಬೇಕಾದ ಕಾರ್ಯ ವಿಧಾನದ ಬಗ್ಗೆ ಸೋಶಿಯಲಿಸ್ಟರ ಸೌಮ್ಯವಾದಿ ಮತ್ತು ಉಗ್ರವಾದಿ ಗುಂಪುಗಳ ಮಧ್ಯೆ ಭಿನ್ನಾಭಿಪ್ರಾಯವಿದೆ. ಹಾಗಿದ್ದರೂ ವ್ಯಕ್ತಿಯ ಒಡೆತನ ಹಕ್ಕನ್ನು ನಿರ್ಮೂಲನ ಗೊಳಿಸಬೇಕಾಗಿದೆಯೆಂಬ ಕುರಿತು ಉಭಯತ್ರರಲ್ಲಿಯೂ ಒಮ್ಮತವಿದೆ. ಒಂದು ವರ್ಗವು ಪ್ರಜಾಸತ್ತಾತ್ಮಕ ಸೋಶಿಯಲಿಝುಮನ್ನು ಕಾರ್ಯ ವಿಧಾನವಾಗಿ ಸೂಚಿಸುತ್ತದೆ. ಅದೇ ವೇಳೆ ಇನ್ನೊಂದು ವರ್ಗವು ಸಶಸ್ತ್ರ ಕ್ರಾಂತಿಯಿಂದ ಬದಲಾವಣೆಯನ್ನು ಬಯಸುತ್ತದೆ.

'ಇದು ಸೋಶಿಯಲಿಝುಮ್' ಎಂಬ ಗ್ರಂಥದಲ್ಲಿ[1] ಹೀಗೆ ಹೇಳಲಾಗಿದೆ: ಕೆಲವರ ಅಭಿಪ್ರಾಯದಲ್ಲಿ ಸೋಶಿಯಲಿಝುಮ್ ಎಂದರೆ ವ್ಯಕ್ತಿಯ ಸ್ವಾತಂತ್ರ್ಯ ಮತ್ತು ವ್ಯಕ್ತಿಯನ್ನು ಗೌರವಿಸುವುದು ಎಂದಾಗಿದೆ. ಆದರೆ ಕೆಲವರು ಅದನ್ನು ಖಂಡಿಸಿ 'ಸೋಶಿಯಲಿಝುಮ್'ನ್ನು ಹೀಗೆ ಅರ್ಥೈಸುತ್ತಾರೆ: "ಉತ್ಪಾದನೆಯ ಸಲಕರಣೆಗಳನ್ನು ಸಮಾಜದ ಒಡೆತನಕ್ಕೆ ಒಳಪಡಿಸಿ ಕಾರ್ಮಿಕ ವರ್ಗದ ನಿರಂಕುಶಾಧಿಪತ್ಯವನ್ನು ಭದ್ರಗೊಳಿಸಲು ಪ್ರಯತ್ನಿಸುವುದು"

1. ಜೋರ್ಜ್ ಬರ್ಗನ್.

ಈ ಭಿನ್ನಾಭಿಪ್ರಾಯಗಳ ಬಗ್ಗೆ ಚರ್ಚಿಸಿ ಸಮಯ ವ್ಯರ್ಥಗೊಳಿಸಬೇಕಾಗಿಲ್ಲ. ಇದು ಹೊಸತೇನಲ್ಲ. ಮಾಕ್ಸಿಮ್ ಲೋರೋ 'ಫ್ರೆಂಚ್ ಕ್ರಾಂತಿಯ ಇತಿಹಾಸ'ದಲ್ಲಿ ಹೇಳಿರುವುದನ್ನು ನೋಡಿರಿ: "ಸೋಶಿಯಲಿಝುಮ್‌ನ ಅನೇಕ ಪ್ರಬೇಧಗಳಿವೆಯೆಂಬುದು ನಿರ್ವಿವಾದವಷ್ಟೆ. ಬಾಬುಫ್‌ನ ಸೋಶಿಯಲಿಝುಮಿಗೂ ಪ್ರಡೋನ್‌ರ ಸೋಶಿಯಲಿಝುಮಿಗೂ ಬಹಳಷ್ಟು ವ್ಯತ್ಯಾಸವಿದೆ. ಸೆಂಟ್ ಸ್ಯಮನ್ ಮತ್ತು ಪ್ರಡೋನ್‌ರ ಸೋಶಿಯಲಿಝುಮಿಗೂ ಲೂಯಿ ಬ್ಲಾಂಕಿನ ಸೋಶಿಯಲಿಝುಮಿಗೂ ತುಂಬಾ ವ್ಯತ್ಯಾಸವಿದೆ. ಫ್ಲೋಯರ್‌ಬೇಕ್ ಮತ್ತು ಬೇಕನ್ ಮುಂತಾದವರ ಕಲ್ಪನೆಯ ಸೋಶಿಯಲಿಝುಮ್ ಇವೆಲ್ಲಕ್ಕಿಂತ ಭಿನ್ನವಾಗಿದೆ. ಹಾಗಿದ್ದರೂ ಸಮಾಜದ ಎಲ್ಲ ಅಶಾಂತಿ ಮತ್ತು ಅಸಮಾನತೆಗಳಿಗೆ ಮೂಲ ಕಾರಣವಾಗಿರುವ ಖಾಸಗಿ ಒಡೆತನ ಹಕ್ಕನ್ನು ನಿರ್ಮೂಲನ ಗೊಳಿಸಬೇಕೆಂಬ ತತ್ವವು ಈ ಎಲ್ಲ ಸೋಶಿಯಲಿಸ್ಟ್ ವಿಚಾರಧಾರೆಗಳನ್ನು ಒಂದುಗೂಡಿಸುವ ಕೊಂಡಿಯಾಗಿದೆ."[1]

'ಕ್ರಾಂತಿಕಾರಿ ಸೋಶಿಯಲಿಝುಮ್ ಮತ್ತು ಕಮ್ಯೂನಿಝುಮ್‌ಗಳ ನಡುವೆ ತೀರಾ ನಗಣ್ಯ ವ್ಯತ್ಯಾಸವಿದೆ. ಅವೆರಡೂ ಜೀವನ ಮತ್ತು ಮಾನವನ ಬಗ್ಗೆ ಭೌತಿಕವಾದೀ ದೃಷ್ಟಿಕೋನವನ್ನು ಹೊಂದಿವೆ. ಧರ್ಮವನ್ನು ತುಚ್ಛೀಕರಿಸಿ ಸಮಾಜದಿಂದ ಅದನ್ನು ಅಳಿಸಿಬಿಡಲು ಪ್ರಯತ್ನಿಸುತ್ತವೆ. ರಕ್ತ ಸಿಕ್ತ ಕ್ರಾಂತಿ ಮತ್ತು ಆಕ್ರಮಗಳಲ್ಲಿ ನಂಬಿಕೆಯಿರಿಸುತ್ತದೆ. ಹಾಗೆಯೇ ಪ್ರಚಲಿತ ಸಾಮೂಹಿಕ ವ್ಯವಸ್ಥೆಯನ್ನು ಬಲಾತ್ಕಾರದಿಂದ ಧ್ವಂಸಗೊಳಿಸುವ ಕುರಿತು ಅವೆರಡೂ ಸಹಮತ ಹೊಂದಿವೆ.'

ಪ್ರೊ. ಮುಹಮ್ಮದ್ ಅಬ್ದುಲ್ಲಾ ಅನಾನ್ ಅದನ್ನು ಹೀಗೆ ವಿವರಿಸಿದ್ದಾರೆ: 'ಕಮ್ಯೂನಿಝುಮ್‌ನ ಧ್ಯೇಯವು ಸೋಶಿಯಲಿಝುಮ್‌ನ ಧ್ಯೇಯವೇ ಆಗಿದೆ. ವರ್ಗ ರಹಿತ ಸಮಾಜ ನಿರ್ಮಾಣವು ಅಪ್ಪಟ ಸೋಶಿಯಲಿಝುಮ್‌ನ ಅಂತಿಮ ಗುರಿಯಾಗಿದೆ. ಕ್ರಾಂತಿಕಾರಿ ಸೋಶಿಯಲಿಝುಮ್ ಮತ್ತು ಕಮ್ಯೂನಿಝುಮ್‌ಗಳ ವ್ಯಾವಹಾರಿಕ ಮತ್ತು ಸಾಂವಿಧಾನಿಕ ಅಂಶಗಳ ವಿವರಣೆಗಳಲ್ಲಿ ಕೆಲವು ಭಿನ್ನತೆಗಳ ಹೊರತು ಅವುಗಳ ಮಧ್ಯೆ ಗಮನಾರ್ಹ ವ್ಯತ್ಯಾಸಗಳಿಲ್ಲ. ಆದರೆ, ಕಮ್ಯೂನಿಝುಮ್ ಅದರ ಸತ್ತೆ ಮತ್ತು ವ್ಯಾವಹಾರಿಕ ಅಂಶಗಳಲ್ಲಿ ಅಪ್ಪಟ ಕ್ರಾಂತಿ ಧರ್ಮವಾಗಿದೆ. ಮಿತವಾದಿ ಸೋಶಿಯಲಿಝುಮ್ ಪ್ರತಿಪಾದಿಸುವ ಕ್ರಮಾನುಗತ ಮತ್ತು ಶಾಂತಿಯುತ ಮಾರ್ಗಗಳು ಅದಕ್ಕೆ ತಿಳಿದಿಲ್ಲ. ಧ್ಯೇಯ ಸಾಧನೆಗೆ ಅದು ಕೇವಲ ಕ್ರಾಂತಿಯನ್ನಷ್ಟೇ ಅವಲಂಬಿಸುತ್ತದೆ.[2]

---

1. ಹಾದಿಹಿ ಹಿಯಲ್ ಇಶ್ತಿರಾಕಿಯ್ಯ ಪುಟ: 13, ಮುಹಮ್ಮದ್ ಆಯ್ತಾನಿಯವರ ಅರಬಿ ಅನುವಾದ.
2. ಅಲ್ ಮದಾಹಿಬುಲ್ ಇಜ್ತಿಮಾಯಿಯ್ಯತುಲ್ ಹದೀಸ್: (ಸಮಕಾಲೀನ ಸಾಮಾಜಿಕ ವ್ಯವಸ್ಥೆಗಳು) ಪುಟ: 95.

2

# ಬಡತನ: ಇಸ್ಲಾಮಿನ ದೃಷ್ಟಿಯಲ್ಲಿ

ಬಡತನ ಮತ್ತು ಶ್ರೀಮಂತಿಕೆಯ ಕುರಿತು ಮೊದಲನೆ ವರ್ಗದ ದೃಷ್ಟಿಕೋನವನ್ನು ಇಸ್ಲಾಮ್ ಅಂಗೀಕರಿಸುವುದಿಲ್ಲ. ಪರ್ಶಿಯದ ಮನೀಕಿಝಮ್, ಕ್ರೈಸ್ತ ದರ್ಶನ ಮತ್ತು ಭಾರತೀಯ ವಿಚಾರಧಾರೆ ಇತ್ಯಾದಿಗಳಿಂದ ಹಾಗೂ ತತ್ಸಮಾನ ದರ್ಶನಗಳಿಂದ ಮುಸ್ಲಿಮರಲ್ಲಿ ನುಸುಳಿಕೊಂಡಿರುವ ಸೂಫೀ ವಿಚಾರ ಧಾರೆಯೊಂದಿಗೂ ಇಸ್ಲಾಮಿಗೆ ಸಹಮತವಿಲ್ಲ. ಪವಿತ್ರ ಕುರ್‌ಆನ್ ಮತ್ತು ಅಂಗೀಕೃತ ಪ್ರವಾದಿ ವಚನಗಳಲ್ಲಿ ಬಡತನವನ್ನು ಹೊಗಳುವಂತಹ ಒಂದಾದರೂ ವಾಕ್ಯವಿಲ್ಲ. ಏಕೆಂದರೆ ಓರ್ವ ಸನ್ಯಾಸಿಯ ಸನ್ಯಾಸಕ್ಕೂ ಸಾಧನ ಸೌಲಭ್ಯಗಳು ಅಗತ್ಯವಿದೆಯಷ್ಟೆ. ಸನ್ಯಾಸವಿರುವ ಭೂಮಿಯು ಆತನ ಹೃದಯದಲ್ಲಿರುವುದಿಲ್ಲ; ಬದಲಾಗಿ ಆತನ ಒಡೆತನದಲ್ಲಿರುತ್ತದೆ.

ಸಂಪತ್ತನ್ನು ಇಸ್ಲಾಮ್ ದೇವಾನುಗ್ರಹವೆಂದು ಪರಿಗಣಿಸುತ್ತದೆ. ಅದಕ್ಕಾಗಿ ದೇವನಿಗೆ ಕೃತಜ್ಞತೆ ಸಲ್ಲಿಸುವಂತೆ ಆದೇಶಿಸಿದೆ. ಇಸ್ಲಾಮಿನ ದೃಷ್ಟಿಯಲ್ಲಿ ಬಡತನವು, ದೇವನೊಡನೆ ಅಭಯ ಯಾಚಿಸಿ ಅದರ ವಿಮೋಚನೆಗಾಗಿ ಬೇಡಬೇಕಾದ ಆಪತ್ತು ಮತ್ತು ದುರಂತವಾಗಿದೆ. "ನಿಮ್ಮನ್ನು ನಿರ್ಗತಿಕನಾಗಿ ಕಂಡು ಸ್ಥಿತಿವಂತನಾಗಿ ಮಾಡಲಿಲ್ಲವೇ?" (ಅದ್ದುಹಾ :8) ಎಂಬ ಕುರ್‌ಆನ್ ವಾಕ್ಯವು ಅಲ್ಲಾಹನು ಪ್ರವಾದಿಯವರಿಗೆ ದಯಪಾಲಿಸಿದ ಐಶ್ವರ್ಯವನ್ನು ಪ್ರಮುಖವಾಗಿ ಎತ್ತಿ ಹೇಳಿದೆಯಷ್ಟೆ. ಸಂಪತ್ತನ್ನು ಸತ್ಯವಿಶ್ವಾಸಿಗಳಿಗೆ ಇಹಲೋಕದಲ್ಲಿ ದೊರೆಯುವ ಪ್ರತಿಫಲವೆಂದು ಕುರ್‌ಆನ್ ವರ್ಣಿಸುವುದನ್ನು ನೋಡಿರಿ:

"ನಿಮ್ಮ ಪ್ರಭುವಿನೊಡನೆ ಕ್ಷಮಾ ಯಾಚನೆ ಮಾಡಿರಿ. ಖಂಡಿತವಾಗಿಯೂ ಅವನು ಮಹಾ ಕ್ಷಮಾ ಶೀಲನಾಗಿದ್ದಾನೆ. ಅವನು ನಿಮ್ಮ ಮೇಲೆ ಆಕಾಶದಿಂದ ಧಾರಾಳವಾಗಿ ಮಳೆ ಸುರಿಸುವನು. ನಿಮಗೆ ಸೊತ್ತು ಸಂತಾನಗಳನ್ನು ದಯಪಾಲಿಸುವನು. ನಿಮಗಾಗಿ ಉದ್ಯಾನಗಳನ್ನು ಸೃಷ್ಟಿಸುವನು ಮತ್ತು ನಿಮಗಾಗಿ ಕಾಲುವೆಗಳನ್ನು ಹರಿಸುವನು." (ನೂಹ್ :10-12)

'ಸಜ್ಜನ ದೇವದಾಸನಿಗೆ ಉತ್ತಮ ಸಂಪತ್ತು ಎಷ್ಟೊಂದು ಉತ್ತಮ' ಎಂಬ ಪ್ರವಾದಿ ವಚನದ ಇಂಗಿತವೂ ಅದೇ ಆಗಿದೆ. ಬದ್ರ್ ಯುದ್ಧದ ಕೈದಿಗಳ ಕುರಿತು ಅಲ್ಲಾಹ್ ಹೇಳಿರುವುದನ್ನು ನೋಡಿರಿ:

ಓ ಪೈಗಂಬರರೇ, ನಿಮ್ಮ ಸಂಬಂಧದಲ್ಲಿರುವ ಕೈದಿಗಳೊಡನೆ ಹೇಳಿರಿ: ನಿಮ್ಮ ಹೃದಯಗಳಲ್ಲಿ ಏನಾದರೂ ಒಳಿತಿದೆಯೆಂದು ಅಲ್ಲಾಹನಿಗೆ ತಿಳಿದರೆ ಅವನು ನಿಮ್ಮಿಂದ ವಶಪಡಿಸಿರುವುದಕ್ಕಿಂತ ಉತ್ತಮವಾದುದನ್ನು ನಿಮಗೆ ನೀಡುವನು. (ಅಲ್ ಅನ್ಫಾಲ್:70)

ಯುದ್ಧ ಕೈದಿಗಳು ಕಳೆದು ಕೊಂಡಿರುವ ಸಂಪತ್ತಿಗೆ ಪ್ರತಿಯಾಗಿ ಅದಕ್ಕಿಂತ ಉತ್ತಮವಾದುದನ್ನು ಅಲ್ಲಾಹ್ ನೀಡುವನೆಂದು ಈ ವಾಕ್ಯವು ಸೂಚಿಸುತ್ತದೆ. ಅದಕ್ಕೆ, ಅವರು ಸತ್ಯವಿಶ್ವಾಸಿಗಳಾಗಬೇಕೆಂಬುದೇ ಉಪಾಧಿಯಾಗಿದೆ.

ಪ್ರವಾದಿ ವಚನಗಳಲ್ಲಿ ಬಡತನವನ್ನು ವ್ಯಕ್ತಿ ಮತ್ತು ಸಮಾಜಕ್ಕೆ ಏಕಪ್ರಕಾರ ಪಾಯಕಾರೀ ದುರಂತವೆಂದು ಚಿತ್ರಿಸಲಾಗಿದೆ. ಅದು ವಿಶ್ವಾಸ, ಸದಾಚಾರ, ಮುಕ್ತ ಚಿಂತನೆ, ಸ್ಕೃತಿ, ಕುಟುಂಬ ಭದ್ರತೆ ಮತ್ತು ಸಾಮಾಜಿಕ ವ್ಯವಸ್ಥೆಗೂ ಆಘಾತಕಾರಿಯಾಗುತ್ತದೆ.

## ಶ್ವವಿಶ್ವಾಸಕ್ಕೆ ಅಡ್ಡಿ

ವಿಶ್ವಾಸದ ದೃಢತೆ ಮತ್ತು ಭದ್ರತೆಗಳಿಗೆ ಬಡತನವು - ವಿಶೇಷತಃ ಸಂಪತ್ತು ಂದೆಡೆಯಲ್ಲಿಯೇ ರಾಶಿಬಿದ್ದು ಇನ್ನೊಂದೆಡೆಯಲ್ಲಿ ಬಡತನ ನಗ್ನತಾಂಡವ ವಾಡುವಂತಹ ರಿಸ್ಥಿತಿಯಲ್ಲಿ - ಮಾರಕವಾಗುವುದು ಖಚಿತ. ಸೊಂಟ ಮುರಿಯುವಂತೆ ದುಡಿಯುವವನು ಶವನಾಗಿಯೇ ಉಳಿದು ಮೈ ಬಗ್ಗಿಸದೆ ಸ್ವಸ್ಥವಾಗಿರುವಾತನು ಸುಖಭೋಗದಿಂದ ಬಾಳುವಂತಹ ತಿಯಲ್ಲಿ ವಿಶ್ವಾಸ ಭ್ರಂಶವು ತೀವ್ರವಾಗುತ್ತದೆ. ಈ ಅಸಮಾನತೆಯು ವಿಶ್ವ ವ್ಯವಸ್ಥೆಯಲ್ಲಿ ಲಿಸಲಾದ ದೇವಯುಕ್ತಿ ಮತ್ತು ಸಂಪನ್ಮೂಲಗಳ ವಿತರಣೆಯಲ್ಲಿ ಪಾಲಿಸಲಾದ ನ್ಯಾಯ ಶ್ಥೆಯ ಕುರಿತು ಸಂಶಯಕ್ಕೆ ಹೇತುವಾಗಬಹುದು. ಇದಕ್ಕೆ ಓರ್ವ ಕವಿಯ ಮಾತನ್ನು ದಾಹರಿಸಬಹುದು. ಆತ ಹೀಗೆ ಹಾಡಿದ್ದ: "ಮಹಾ ದಡ್ಡರು ಸುಖ ವೈಭೋಗಗಳಿಂದ ರೆಯುತ್ತಿರುವಾಗ ಅದೆಷ್ಟೋ ವಿದ್ವಾಂಸರು ಜೀವನೋಪಾಯವಿಲ್ಲದೆ ಕಷ್ಟಪಡುತ್ತಿದ್ದಾರೆ. ಪರಿಸ್ಥಿತಿಯು ಬುದ್ಧಿವಂತರನ್ನು ನಿಷ್ಕ್ರಿಯಗೊಳಿಸಿ ಘನ ವಿದ್ವಾಂಸರನ್ನು ಧಿಕ್ಕಾರಿಗಳನ್ನಾಗಿ ಾಡದಿದ್ದೀತೇ?" ಇನ್ನೊಬ್ಬ ಕವಿಯು ಜಬರಿಯರ ದೃಷ್ಟಿಕೋನಕ್ಕೆ ಒತ್ತು ನೀಡಿದ್ದಾರೆ: ನರಿಗೆ ಜೀವನ ಸಂಪನ್ಮೂಲಗಳನ್ನು ಮಳೆಯಂತೆ ವಿತರಣೆ ಮಾಡಲಾಗುತ್ತಿದೆ. ತಿಮಳೆಯಿಂದಾಗಿ ಒಂದೆಡೆಯಲ್ಲಿ ಪ್ರಳಯ ಉಂಟಾಗುವಾಗ ಇನ್ನೊಂದೆಡೆಯಲ್ಲಿ ಮಳೆಗಾಗಿ ತೊರೆಯುತ್ತಿರಬಹುದು. ಬಲಾಢ್ಯನು ಪ್ರಯತ್ನಿಸುತ್ತಾನೆ; ಆದರೆ ಏನನ್ನೂ ಗಳಿಸದೆ ಫಲನಾಗುತ್ತಾನೆ. ಅದೇ ವೇಳೆ ದುರ್ಬಲರು ಮತ್ತು ದುಷ್ಟರು ಬಹಳಷ್ಟು ಗಳಿಸುತ್ತಾರೆ."

ಕೆಲವು ಪೂರ್ವಜರು ಹೀಗೆ ಹೇಳಿದ್ದಾರೆ: "ಯಾವುದಾದರೊಂದು ಪ್ರದೇಶಕ್ಕೆ ಬಡತನ ಂದರೆ, 'ನನ್ನನ್ನೂ ಜತೆ ಸೇರಿಸುವಂತೆ' ದೇವ ನಿರಾಕರಣೆಯು ಅದನ್ನು ಒತ್ತಾಯಿಸುತ್ತದೆ." ಮಾತುಗಳಿಗೆ ಆಹಾರ ಸಂಪನ್ಮೂಲಗಳ ಅಸಮರ್ಪಕ ವಿತರಣೆಯಿಂದ ವ್ಯಾಪಿಸಿದ ಬಡತನ ತ್ತು ಅದರಿಂದ ಮೂಡಿದ ವಿಶ್ವಾಸಭ್ರಂಶವೇ ಪ್ರೇರಕವಾಗಿದೆ. ಸೂಫೀವರ್ಯರಾದ ನ್ನೂನ್ ಮಿಸ್ರಿ ಹೀಗೆ ಹೇಳಿದ್ದಾರೆ: "ತಾಳ್ಮೆಯಿಲ್ಲದ ಬಡವನು ಮಹಾ ದೇವ ಸ್ಕಾರಿಯಾಗಿರುತ್ತಾನೆ. ಆದರೆ ಜನರಲ್ಲಿ ತಾಳ್ಮೆ ಇರುವವರು ವಿರಳ." "ಬಡತನವು ದೇವ ಕರಣೆಗೆ ತಲಪಿಸಬಹುದು" (ಅಬೂ ನಈಮ್) ಎಂದು ಪ್ರವಾದಿ(ಸ) ಹೇಳಿದ್ದಾರೆ. ಲ್ಲಾಹನೇ ದೇವ ನಿರಾಕರಣೆಯಿಂದ ಮತ್ತು ಬಡತನದಿಂದ ನಾನು ನಿನ್ನ ಅಭಯ ಚಿಸುತ್ತೇನೆ." (ಅಬೂ ದಾವೂದ್), "ಅಲ್ಲಾಹನೇ! ಬರಗಾಲ, ದಾರಿದ್ರ್ಯ ಮತ್ತು ಸಮಾನಗಳಿಂದ ನಾನು ನಿನ್ನೊಡನೆ ವಿಮೋಚನೆಯನ್ನು ಬೇಡುತ್ತೇನೆ. ನನ್ನಿಂದ ನ್ಯಾಯವಾಗದಂತೆ ಮತ್ತು ಇತರರಿಂದ ನನಗೆ ಅನ್ಯಾಯವಾಗದಂತೆ ನಿನ್ನ ಸಹಾಯ

ಯಾಚಿಸುತ್ತೇನೆ" (ಅಬೂ ದಾವೂದ್, ನಸಾಈ) ಎಂದು ಮುಂತಾಗಿ ಪ್ರಾರ್ಥಿಸು
ಪ್ರವಾದಿಯವರು ಕಲಿಸಿದ್ದಾರೆ. ಇದರಿಂದ ಸತ್ಯನಿಷೇಧದಿಂದ ಅಭಯ ಯಾಚಿಸುವುದರೊಂ
ಬಡತನದ ವಿಮೋಚನೆಗಾಗಿಯೂ ಪ್ರಾರ್ಥಿಸಬೇಕೆಂದು ತಿಳಿದು ಬರುತ್ತದೆ.

**ಶಿಷ್ಟಾಚಾರಕ್ಕೆ ಹಾನಿ**

ಬಡತನವು, ವಿಶ್ವಾಸದಂತೆಯೇ ಮಾನವನ ನೈತಿಕ ಪ್ರಜ್ಞೆಗೂ ಭಾರೀ ಹಾನಿಯು
ಮಾಡುತ್ತದೆ. ದುರ್ಗತಿ ಮತ್ತು ಕಷ್ಟ ಕಾರ್ಪಣ್ಯಗಳು ನೈತಿಕ, ಚಾರಿತ್ರಿಕ ಮತ್ತು ಪ
ಮರ್ಯಾದೆಗಳಿಗೆ ಭೂಷಣವಲ್ಲದ ಕೆಲಸಗಳಿಗೆ ಬಡವನನ್ನು- ವಿಶೇಷತಃ ಸುತ್ತವ
ಸುಖಾಡಂಬರಗಳಿಂದ ಮೆರೆದಾಡುತ್ತಿರುವವರನ್ನು ಕಂಡಾಗ ಪ್ರೇರೇಪಿಸಬಹುದು.

ಹಸಿವೆಯ ಕೂಗು ಮನಸ್ಸಿನ ಕೂಗಿಗಿಂತ ಪ್ರಬಲವಾಗಿದೆಯಷ್ಟೇ. ಇದು
ಮೌಲ್ಯಗಳ ಬೆಲೆ ಮತ್ತು ಮಾನದಂಡಗಳ ಬಗ್ಗೆಯೂ ಸಂಶಯ ಹುಟ್ಟಿಸುವ ಮಟ್ಟಕ್ಕೇರು
ಹೆಚ್ಚು ಅಪಾಯಕಾರಿಯಾಗಿದೆ. ಅದು ಧಾರ್ಮಿಕ ಸಿದ್ಧಾಂತಗಳನ್ನೇ ಪ್ರಶ್ನಿಸುವಂತಹ ಸ್ಥಿ
ತಲಪಿಸಬಹುದು.

ಬಡತನವು ವ್ಯಕ್ತಿಯ ಚಾರಿತ್ರ್ಯದ ಮೇಲೆ ಬೀರುವ ಪ್ರಭಾವವನ್ನು ಪ್ರವಾದಿಯ
ಪ್ರಸ್ತಾಪಿಸಿದ್ದರು:

"ದಾನವು ಕೇವಲ ದಾನವಾಗಿರುವಾಗ ನೀವು ಅದನ್ನು ಸ್ವೀಕರಿಸಬಹುದು.
ಧರ್ಮದ ಹೆಸರಿನಲ್ಲಿರುವ ಲಂಚವಾಗಿದ್ದರೆ ನೀವು ಅದನ್ನು ಸ್ವೀಕರಿಸಬಾರದು. ಆದರೆ,
ಅದನ್ನು ತಿರಸ್ಕರಿಸುವುದಿಲ್ಲ, ಏಕೆಂದರೆ, ತಿರಸ್ಕರಿಸುವುದಕ್ಕೆ ಬೇಡಿಕೆ ಮತ್ತು ಬಡತ
ಅಡ್ಡಿಯಾಗಬಹುದು." (ಅಬೂ ನಈಮ್, ತ

ಸಾಲ ಪೀಡಿತನ ಕುರಿತು ಪ್ರವಾದಿಯವರು ಹೇಳಿರುವರು:

"ಸಾಲಗಾರನು ಮಾತನಾಡುವಾಗ ಸುಳ್ಳು ಹೇಳುತ್ತಾನೆ; ಮಾತು ಕೊ
ಉಲ್ಲಂಘಿಸುತ್ತಾನೆ." (ಬುಃ

ಸಿರಿತನ ಮತ್ತು ಬಡತನ ಮಾನವನ ಚಾರಿತ್ರ್ಯದ ಮೇಲೆ ಬೀರುವ ಪರಿಣಾ
ರೀತಿಯನ್ನು ಪ್ರವಾದಿಯವರು ಉದಾಹರಣೆ ಸಹಿತ ಸ್ಪಷ್ಟಪಡಿಸಿದ್ದರು:

ಒಬ್ಬರು ದಾನ ನೀಡಿದರು. ತಾನು ದಾನ ನೀಡಿದಾತ ಕಳ್ಳನೆಂದು ಅವರಿಗೆ ತಿಳಿದಿರ
ಈ ಘಟನೆಯು ಊರಿಡೀ ಚರ್ಚಾ ವಿಷಯವಾಯಿತು. ಆ ಬಳಿಕ ಅವರೊಮ್ಮೆ
ಮಹಿಳೆಗೆ ದಾನ ನೀಡಿದರು. ಆಕೆ ವೇಶ್ಯೆಯಾಗಿದ್ದಳು. ಆ ವಿಷಯ ಅವರಿಗೆ ತಿಳಿದಿರ
ಅದೂ ಚರ್ಚಾಸ್ಪದವಾಯಿತು. ಒಂದು ದಿನ ಅವರಿಗೊಂದು ಕನಸು ಬಿತ್ತು. ನೀನು
ಮಾಡಿದ ಕಳ್ಳನು ಅದರಿಂದಾಗಿ ಕಳ್ಳತನವನ್ನು ತೊರೆಯಬಹುದು. ನಿನ್ನ ದಾನ ಸ್ವೀಕ
ಮಹಿಳೆಯು ಅದರಿಂದಾಗಿ ವೇಶ್ಯಾ ವೃತ್ತಿಯನ್ನು ತೊರೆಯಬಹುದೆಂದು ಅವರಿಗೆ ಯಾ
ಹೇಳಿದಂತಾಯಿತು. (ಬುಖಾರಿ, ಮುಸ್ಲಿ

ಈ ಪ್ರವಾದಿ ವಚನವು ಕಳ್ಳನನ್ನು ಕಳ್ಳತನದಿಂದ ಮತ್ತು ಮಹಿಳೆಯನ್ನು ವೇಶ್ಯಾ ವೃತ್ತಿಯಿಂದ ಮುಕ್ತಗೊಳಿಸುವ ನಿಟ್ಟಿನಲ್ಲಿ ಆರ್ಥಿಕ ಸುಸ್ಥಿತಿಯ ಪಾತ್ರವನ್ನು ಚೆನ್ನಾಗಿ ಸ್ಪಷ್ಟಪಡಿಸುತ್ತದೆ. (ಅಶ್ಶೈಖ್ ಮುಹಮ್ಮದ್ ಗಝ್ಝಾಲಿಯವರ 'ಅಲ್ ಇಸ್ಲಾಮು ವಲ್ ಔದಾವುಲ್ ಇಖ್ತಿಸಾದಿಯ್ಯ:' ಎಂಬ ಕೃತಿಯಲ್ಲಿರುವ 'ದುರ್ಗುಣಗಳಿಗೆ ಆರ್ಥಿಕ ಕಾರಣಗಳು' ಎಂಬ ವಿಮರ್ಶೆಯನ್ನು ನೋಡಿರಿ.)

## ಮುಕ್ತ ವಿಚಾರಕ್ಕೆ ಅಡಚಣೆ

ಬಡತನದ ಆಘಾತವು ಮಾನವನ ಧಾರ್ಮಿಕ-ನೈತಿಕ ರಂಗಕ್ಕೆ ಮಾತ್ರ ಸೀಮಿತವಾಗಿರುವುದಿಲ್ಲ. ಅದು ಆತನ ವಿಚಾರ ಮಂಡಲವನ್ನೂ ಕೊರೆಯುತ್ತದೆ. ದೈನಂದಿನದ ಅವಶ್ಯಕ ಸಾಮಗ್ರಿಗಳನ್ನೂ ಸಂಪಾದಿಸಲಾಗದೆ ಕಷ್ಟ ಪಡುವ ಬಡವನಿಗೆ ಗಂಭೀರ ವಿಷಯಗಳ ಕುರಿತು ಆಲೋಚಿಸಲು ಸಾಧ್ಯವಾದೀತೇ? ತನ್ನ ಪರಿಸರಗಳಲ್ಲಿ ಸಂಪತ್ತಿನಿಂದ ಮೆರೆಯುವ ಮನೆಗಳನ್ನೂ ಚಿನ್ನ ತುಂಬಿದ ತಿಜೋರಿಗಳನ್ನೂ ಕಂಡಾಗ ಅದು ಮತ್ತಷ್ಟು ದುಸ್ತರವಾಗುತ್ತದೆ. ಇಮಾಮ್ ಅಬೂ ಹನೀಫಾರ ಸಂಗಡಿಗ ಮುಹಮ್ಮದ್ ಬಿನ್ ಹಸನ್ ಶೈಬಾನಿಯವರ ಒಂದು ಮಾತು ಇಲ್ಲಿ ಪ್ರಸ್ತುತ ವೆನಿಸುತ್ತದೆ, "ಹಿಟ್ಟು ಮುಗಿದಿದೆ" ಎಂದು ಸೇವಕ ಬಂದು ತಿಳಿಸಿದಾಗ, "ನೀನು ಹಾಳಾಗಿ ಹೋಗು! ನೀನು ನನ್ನ ತಲೆಯಲ್ಲಿದ್ದ ಕರ್ಮಶಾಸ್ತ್ರದ 40 ತತ್ತ್ವ (ಮಸ್ಅಲ) ಗಳನ್ನು ಹಾಳು ಗೆಡಹಿದೆ!" ಎಂದು ಅವರು ಜರೆದರು. "ಮನೆಯಲ್ಲಿ ಗೋಧಿ ಹಿಟ್ಟು ಇಲ್ಲದವರೊಡನೆ ಸಮಾಲೋಚನೆಗೆ ಇಳಿಯದಿರಿ"- ಎಂದು ಇಮಾಮ್ ಅಬೂ ಹನೀಫಾ ಹೇಳಿದ್ದಾರೆ. ಅವರ ವಿಚಾರವು ದುರ್ಬಲವಾಗಿರುವುದು. ಆದ್ದರಿಂದ, ಅವರ ತೀರ್ಮಾನ ನ್ಯಾಯೋಚಿತವಾಗಲಾರದು. ತೀವ್ರ ಮಾನಸಿಕ ಖಿನ್ನತೆಯು ವ್ಯಕ್ತಿಯ ಗ್ರಾಹ್ಯ ಶಕ್ತಿ ಮತ್ತು ಅಭಿಪ್ರಾಯ ಸುಬದ್ಧತೆಯ ಮೇಲೆ ಪ್ರತಿಕೂಲ ಪರಿಣಾಮ ಬೀರುವುದೆಂದು ಮನೋಶಾಸ್ತ್ರ ಹೇಳುತ್ತದೆ. "ನ್ಯಾಯಾಧೀಶನು, ಕುಪಿತನಾಗಿರುತ್ತಾ ತೀರ್ಪು ನೀಡಬಾರದು" ಎಂದು ಪ್ರವಾದಿ(ಸ) ಹೇಳಿದ್ದಾರೆ. ಕೋಪದಂತೆಯೇ ತೀಕ್ಷ್ಣ ಹಸಿವು ಬಾಯಾರಿಕೆಗಳು ಮಾನವ ಬುದ್ಧಿಯನ್ನು ದುರ್ಬಲಗೊಳಿಸುವುದೆಂಬುದು ಕರ್ಮಶಾಸ್ತ್ರಜ್ಞರ ಅಭಿಮತ. "ಆರ್ಥಿಕ ಸಂಕಷ್ಟವು ಮಾನವನ ಶೌರ್ಯವನ್ನು ಕುಗ್ಗಿಸುತ್ತದೆ. ಆತನಿಗೆ ಆಕಾಶ ಮತ್ತು ಭೂಮಿಯು ಸಂಕುಚಿತಗೊಂಡಂತೆ ಭಾಸವಾಗುವುದು. ಒಳಿತು ಎಲ್ಲಿದೆ, ಯಾವುದರಲ್ಲಿದೆಯೆಂಬುದು ಆತನಿಗೆ ತಿಳಿದಿರುವುದಿಲ್ಲ" ಎಂಬ ಕವಿವಾಣಿಯ ತಾತ್ಪರ್ಯವೂ ಅದೇ ಆಗಿದೆ.

## ಕೌಟುಂಬಿಕ ಭದ್ರತೆಗೆ ಬೆದರಿಕೆ

ಬಡತನವು ಕೌಟುಂಬಿಕ ಭದ್ರತೆಯನ್ನು ನಾನಾ ರೀತಿಯಿಂದ ಶಿಥಿಲಗೊಳಿಸುತ್ತದೆ. ಅದು ಒಂದು ಕುಟುಂಬದ ಅಸ್ತಿತ್ವಕ್ಕೆ ಅಡ್ಡಿಯಾಗಿರಬಹುದು. ವಿವಾಹಿತನಾಗುವ ಪುರುಷನಿಗೆ ಮಹ್ರ್, ವಿವಾಹ ವೆಚ್ಚ, ಪತ್ನಿಯ ಪೋಷಣೆ ಇತ್ಯಾದಿಗಳಿಗೆ ಸಂಪಾದನೆಯ ಅಗತ್ಯವಿದೆಯಷ್ಟೆ.

ಬಡತನದಿಂದಾಗಿ ಅವುಗಳನ್ನು ಪೂರೈಸಲಾಗದ ಯುವಕನಿಗೆ ವಿವಾಹ ಅಸಾಧ್ಯವಾಗಬಹುದ ಪವಿತ್ರ ಕುರ್‌ಆನ್ ಅಂತಹ ಮಂದಿಗೆ , ಅಲ್ಲಾಹನು ಸಂಪನ್ನಗೊಳಿಸುವ ತನಕ ಚಾರಿತ್ರ್ಯವ ಕಾಪಾಡುವಂತೆ ಉಪದೇಶಿಸಿದೆ-

"ವಿವಾಹಾನುಕೂಲತೆ ಒದಗದವರು ಅಲ್ಲಾಹನು ತನ್ನ ಅನುಗ್ರಹದಿಂದ ಅವರ ಸಂಪನ್ನಗೊಳಿಸುವ ವರೆಗೂ ಸಚ್ಚಾರಿತ್ರ್ಯವನ್ನು ಕಾಯ್ದುಕೊಳ್ಳಬೇಕು" (ಅನ್ನೂರ್:3

ವಿವಾಹಿತನಾಗಬಯಸುವ ಯುವಕನನ್ನು ಕೆಲವು ಯುವತಿಯರು ಮತ್ತು ಅವರ ತಂ ತಾಯಂದಿರು ಆತ ಕೇವಲ ಬಡವನೆಂಬ ಕಾರಣಕ್ಕಾಗಿ ನಿರ್ಲಕ್ಷಿಸಿ ಬಿಡುತ್ತಾರೆ. ಇ ಕುರ್‌ಆನ್ ವಿಮರ್ಶಿಸಿರುವ ಹಳೆಯ ರೋಗವಾಗಿದೆ. ವರರನ್ನು ಆಯ್ಕೆ ಮಾಡುವಾಗ ಅವ ಆರ್ಥಿಕ ಸ್ಥಿತಿಯ ಬದಲಾಗಿ ಧರ್ಮ ನಿಷ್ಠೆಗೆ ಪ್ರಾಮುಖ್ಯ ನೀಡ ಬೇಕೆಂದು ಕುರ್‌ಆ ಆದೇಶಿಸಿದೆ:

"ನಿಮ್ಮಲ್ಲಿ ಒಂಟಿಯಾಗಿರುವವರ ಮತ್ತು ನಿಮ್ಮ ದಾಸದಾಸಿಯರಲ್ಲಿ ಸಜ್ಜನರಾಗಿರುವ ವಿವಾಹ ಮಾಡಿ ಬಿಡಿರಿ. ಅವರು ಬಡವರಾಗಿದ್ದರೆ ಅಲ್ಲಾಹ್ ತನ್ನ ಅನುಗ್ರಹದಿಂದ ಅವರ ಸಂಪನ್ನಗೊಳಿಸುವನು. ಅಲ್ಲಾಹ್ ಅತಿ ವಿಶಾಲನೂ ಸರ್ವಜ್ಞನೂ ಆಗಿರುತ್ತಾನೆ." (ಅನ್ನೂರ್:3

ಬಡತನವು ಹಲವೊಮ್ಮೆ ಕುಟುಂಬ ಸಂಬಂಧಗಳ ಸಂರಕ್ಷಣೆಗೆ ಪ್ರೇರಕವಾಗಬೇಕಾ ಸದಾಚಾರ ಪ್ರಜ್ಞೆಯನ್ನೂ ಕೆಡಿಸಬಹುದು. ಪತಿಯ ಅಥವಾ ಕೆಲವೊಮ್ಮೆ ಪತ್ನಿಯ ಹಠದಿಂ ವಿವಾಹ ಸಂಬಂಧವನ್ನು ಮುರಿಯಬೇಕಾಗಬಹುದು. ಈ ಸ್ಥಿತ್ಯಂತರದ ಹಿನ್ನೆಲೆಯ ಬಡತನದಿಂದಾಗಿ ಪತ್ನಿಯ ಜೀವನ ವೆಚ್ಚವನ್ನು ಪೂರೈಸಲಾಗದ ಪುರುಷನಿಂದ ಮಹಿಳೆ ವಿವಾಹ ವಿಚ್ಛೇದನ ನೀಡಲು ಇಸ್ಲಾಮೀ ನೀತಿ ಸಂಹಿತೆಯು ನ್ಯಾಯಾಧೀಶನಿಗೆ ಅನುಮ ನೀಡಿದೆ. 'ಲಾ ಳರರ ವಲಾ ಳಿರಾರ' (ಪೀಡನೆಯಿಲ್ಲ, ಪೀಡಿಸುವಿಕೆಯಿಲ್ಲ) ಎಂಬ ನೀತಿಯೆ ಅದಕ್ಕೆ ಆಧಾರವಾಗಿದೆ.

ಬಡತನದಿಂದ ಕೌಟುಂಬಿಕ ಸಂಬಂಧಗಳು ಮಾತ್ರವಲ್ಲ ಕುಟುಂಬ ಸದಸ್ಯರ ಪ್ರೀ ಪಾಶವೂ ಕಡಿದು ಹೋಗಬಹುದು. ಬಡತನದ ಆಘಾತದಿಂದ ತತ್ತರಿಸಿ ಕೆಲವು ತಂದೆಯಂದಿ ತಮ್ಮ ಪುಟ್ಟ ಮಕ್ಕಳನ್ನು ನಿಷ್ಕರುಣೆಯಿಂದ ಕೊಲ್ಲುತ್ತಿದ್ದ ಭೀಕರ ಐತಿಹಾಸಿಕ ಸತ್ಯವನ ಕುರ್‌ಆನ್ ದಾಖಲಿಸಿದೆ. ಅದು ಮಾನವನು ನಾಚಿಕೆಯಿಂದ ತಲೆತಗ್ಗಿಸಬೇಕಾದ ವಿಷಯವಾಗಿ ಅಂತಹ ಕೃತ್ಯಗಳನ್ನು ಕುರ್‌ಆನ್ ಬಲವಾಗಿ ಖಂಡಿಸಿದ್ದು, ಹಾಗೆ ಮಾಡುವವರಿಗೆ ಕಠೋ ಎಚ್ಚರಿಕೆಯನ್ನು ನೀಡಿದೆ.

"ನೀವು ದಾರಿದ್ರ್ಯದ ನಿಮಿತ್ತ ನಿಮ್ಮ ಮಕ್ಕಳನ್ನು ವಧಿಸಬೇಡಿರಿ. ನಿಮಗೂ ಅವರಿಗ ನಾವೇ ಜೀವನೋಪಾಧಿಯನ್ನು ನೀಡುತ್ತೇವೆ." (ಅಲ್ ಅನ್‌ಆಮ್:15

"ನಿಮ್ಮ ಮಕ್ಕಳನ್ನು ಬಡತನದ ಭೀತಿಯಿಂದ ವಧಿಸಬೇಡಿರಿ. ನಾವು ಅವರಿಗೂ ಆಹಾ ನೀಡುವೆವು, ನಿಮಗೂ ನೀಡುವೆವು. ವಾಸ್ತವದಲ್ಲಿ ಅವರ ವಧೆಯು ಒಂದು ಘೋ

ಅಪರಾಧವಾಗಿದೆ." (ಬನೀ ಇಸ್ರಾಈಲ್:31)

ಮೊದಲ ವಾಕ್ಯದಲ್ಲಿ 'ದಾರಿದ್ರ್ಯದ ನಿಮಿತ್ತ' ಎಂಬ ಪ್ರಯೋಗವು ವರ್ತಮಾನ ಕಾಲದಲ್ಲಿ ಅನುಭವಿಸುತ್ತಲಿರುವ ದಾರಿದ್ರ್ಯವನ್ನು ಸೂಚಿಸುತ್ತದೆ. ಎರಡನೆಯ ವಾಕ್ಯದಲ್ಲಿ 'ಬಡತನದ ಭೀತಿಯಿಂದ' ಎಂಬ ಪ್ರಯೋಗವು ಮುಂದೆ ಬರಲಿರುವುದನ್ನು ಸೂಚಿಸುತ್ತದೆ. ಬಡತನ ಅಥವಾ ಅದಕ್ಕೆ ಹೆದರುವ ಸ್ಥಿತಿಯು ಪ್ರವಾದಿಯವರು ಘೋರ ಪಾಪಗಳ ಯಾದಿಯಲ್ಲಿ ಸೂಚಿಸಿದ ಎರಡನೇಯ ಅಪರಾಧಕ್ಕೆ ಕಾರಣವಾಗಬಾರದು. ಪ್ರವಾದಿ(ಸ) ಮತ್ತು ಓರ್ವ ಸಹಾಬಿಯ ಸಂಭಾಷಣೆ ಅದನ್ನು ಸ್ಪಷ್ಟಪಡಿಸುತ್ತದೆ-

ಸಹಾಬಿ: ಪ್ರವಾದಿವರ್ಯರೇ, ಅತಿ ದೊಡ್ಡ ಪಾಪ ಯಾವುದು?

ಪ್ರವಾದಿ: ಸೃಷ್ಟಿಸಿದ ಪ್ರಭುವಿಗೆ ಸಹಭಾಗಿಗಳನ್ನು ಮಾಡುವುದು.

ಸಹಾಬಿ: ಆ ಬಳಿಕ?

ಪ್ರವಾದಿ: ನಿನ್ನ ಆಹಾರದಲ್ಲಿ ಭಾಗಿಯಾಗುವರೆಂಬ ಭೀತಿಯಿಂದ ನಿನ್ನ ಮಕ್ಕಳನ್ನು ವಧಿಸುವುದು.

ಸಂಪತ್ತು, ಮಾನವ ಚಾರಿತ್ರ್ಯದ ಮೇಲೆ ಬೀರುವ ಪ್ರಭಾವವನ್ನು ಇಸ್ಲಾಮ್ ಅಂಗೀಕರಿಸುತ್ತದೆ. ಕೆಲವರಲ್ಲಿ ಅದು ಪುತ್ರ ವಾತ್ಸಲ್ಯದಂತಹ ಶ್ರೇಷ್ಠ ನೈಸರ್ಗಿಕ ಗುಣಗಳನ್ನೂ ಅಳಿಸಿ ಬಿಡುವಷ್ಟು ಪ್ರಬಲವಾಗಿರುವುದು. ಆದರೆ ಇದನ್ನು ಮಾನವ ಕುಲದ ಸಾಮಾನ್ಯ ಗುಣವೆಂದು ಭಾವಿಸಬೇಕಾಗಿಲ್ಲ. ಮಾನವನ ನಡವಳಿಕೆ ಮತ್ತು ಪರಸ್ಪರ ನೈತಿಕ ಮತ್ತು ಸಾಮಾಜಿಕ ಅಂಶಗಳೂ ಮಾನವನ ಮೇಲೆ ಪ್ರಭಾವ ಬೀರುತ್ತದೆ. ಕೆಲವರು ಅಜ್ಞಾನದಿಂದಾಗಿ ತಮ್ಮ ಮಕ್ಕಳನ್ನು ವಧಿಸುತ್ತಿದ್ದರೆಂಬ ಸತ್ಯವು, ಬಡತನದ ಅಪಾಯಗಳ ಬಗೆಗಿನ ಚರ್ಚೆಯಲ್ಲಿ ಅತಿ ಪ್ರಧಾನವಾಗಿದೆ.

## ಸಾಮಾಜಿಕ ಭದ್ರತೆಗೆ ಅಪಾಯ

ಬಡತನವು ಸಮಾಜದ ಶಾಂತಿ ಮತ್ತು ಸಾಮಾಜಿಕ ಕಾನೂನುಗಳ ಭದ್ರತೆಗೂ ಅಪಾಯ ಕಾರಿಯಾಗಿದೆ. ಒಮ್ಮೆ ಅಬೂದರ್ರ್ ಹೀಗೆ ಹೇಳಿದರು: "ಮನೆಯಲ್ಲಿ ಆಹಾರಕ್ಕೆ ಗತಿಯಿಲ್ಲದವನು, ಖಡ್ಗ ಹಿಡಿದು ಜನರತ್ತ ಹೊರಡುವುದಿಲ್ಲವೇಕೆಂದು ನನಗೆ ಅಚ್ಚರಿಯಾಗುತ್ತಿದೆ." ಜನ ಸಂಖ್ಯಾಹೆಚ್ಚಳ ಮತ್ತು ಆಹಾರದ ಕೊರತೆಯು ಬಡತನಕ್ಕೆ ಕಾರಣವೆಂದಾದರೆ ಜನರು ಸಹಿಸಬಹುದು. ಆದರೆ, ಆಹಾರ ವಿತರಣೆಯ ಅವ್ಯವಸ್ಥೆ, ಕೆಲವರ ಅಕ್ರಮ ಮತ್ತು ಬಹುಸಂಖ್ಯಾತರ ಖರ್ಚಿನಲ್ಲಿ ಅಲ್ಪ ಸಂಖ್ಯಾತರು ನಡೆಸುವ ದುಂದು ವೆಚ್ಚವು ಬಡತನಕ್ಕೆ ಕಾರಣವಾಗಿದ್ದರೆ ಅದರಿಂದ ಜನರ ಭಾವನೆ ಕೆರಳಬಹುದು. ದೇಶದಲ್ಲಿ ಗಲಭೆ, ಅರಾಜಕತೆ ವ್ಯಾಪಿಸಿ ಮಾನವ ಸಂಬಂಧಗಳು ಅಸ್ತವ್ಯಸ್ತವಾಗಬಹುದು. ಯಾವುದೇ ಸಮಾಜದಲ್ಲಿ ಗುಡಿಸಲು ಮತ್ತು ಅರಮನೆಗಳು, ಶಿಖರ ಮತ್ತು ಕಣಿವೆಗಳು, ದುಂದುಗಾರಿಕೆ ಮತ್ತು ದಾರಿದ್ರ್ಯವು ಹೆಚ್ಚು ಕಾಲ ಉಳಿದರೆ, ಒಣ ಮತ್ತು ಹಸಿಗಳು ಕರಟಿಹೋಗುವಂತೆ

ಜನಮನಗಳಲ್ಲಿ ದ್ವೇಷಾಗ್ನಿ ಪ್ರಜ್ವಲಿಸಬಹುದು. ಆದ್ದರಿಂದಲೇ ಹಣವಿರುವ ಮತ್ತು ಇಲ್ಲದವರ ಅಂತರ ಹೆಚ್ಚಿದೆಡೆಗಳಲ್ಲಿ ದಾರಿದ್ರ್ಯ ಮತ್ತು ಬಡತನದ ಬಲಿಪಶುಗಳಲ್ಲಿ ವಿನಾಶಾತ್ಮಕ ಪ್ರಕ್ರಿಯೆಯ ತತ್ತ್ವ ಸಿದ್ಧಾಂತಗಳು ಮನೆ ಮಾಡುತ್ತವೆ.

ಬಡತನವು ಜನತೆಯ ಸ್ವಾತಂತ್ರ್ಯ ಮತ್ತು ಪರಮಾಧಿಕಾರಕ್ಕೂ ಹಾನಿಕರವಾಗಿದೆ. ಜೀವನದಲ್ಲಿ ಜಿಗುಪ್ಸೆಗೊಂಡ ಬಡವನಿಗೆ ತನ್ನ ರಾಷ್ಟ್ರದ ಸೇವೆ ಸಲ್ಲಿಸುವ ಅಥವಾ ಜನತೆಯ ಅಭಿಮಾನ ರಕ್ಷಿಸುವ ಸ್ಥೈರ್ಯ ಮತ್ತು ಕಾಳಜಿಯಿರಲಾರದು. ರಾಷ್ಟ್ರವು ಆತನಿಗೆ ಹಸಿವಿನ ಶಮನಕ್ಕೆ ಆಹಾರವನ್ನು ಅಥವಾ ವಿಪತ್ತಿನಿಂದ ರಕ್ಷಣೆಯನ್ನು ನೀಡಿಲ್ಲ. ದೌರ್ಭಾಗ್ಯದ ಕೂಪದಿಂದ ಮೇಲೆ ಬರಲು ಸಮಾಜವು ಆತನಿಗೆ ಸಹಾಯ ಹಸ್ತ ಚಾಚಲಿಲ್ಲ. ತನ್ನೊಡನೆ ಕ್ರೌರ್ಯ ತೋರಿಸಿ, ತನ್ನ ಜ್ವಲಂತ ಸಮಸ್ಯೆಗಳಿಗೆ ಬೆನ್ನು ತೋರಿಸಿದ, ತನ್ನ ರಾಷ್ಟ್ರ ಮತ್ತು ಸಮಾಜದ ರಕ್ಷಣೆಗಾಗಿ ರಕ್ತ ಸುರಿಸುವ ಪ್ರೇರಣೆ ಆತನಿಗೆ ಎಲ್ಲಿಂದ ದೊರೆತೀತು? "ರಾಷ್ಟ್ರದ ರಕ್ಷಣೆಗೆ ನಾನು, ಅದರ ಫಲ ಭಕ್ಷಣೆಗೆ ಬೇರೆಯವರು!" ಈ ಸ್ಥಿತಿಯಲ್ಲಿ ತನ್ನ ರಾಷ್ಟ್ರಕ್ಕಾಗಿ ವಾದಿಸಲು ಆತನಿಂದ ಸಾಧ್ಯವಾದೀತೇ?

ಬಡತನದಿಂದುಂಟಾಗುವ ಪೋಷಕಾಂಶಗಳ ಕೊರತೆ, ಶುದ್ಧ ಗಾಳಿಯ ಅಭಾವ ಮತ್ತು ವಾಸ ಸೌಲಭ್ಯಗಳ ಸಮಸ್ಯೆಯು ಸಾರ್ವಜನಿಕ ಆರೋಗ್ಯವನ್ನು ಪೀಡಿಸುತ್ತದೆ. ಬಡತನದಿಂದಾಗುವ ಔದಾಸೀನ್ಯ, ಜಿಗುಪ್ಸೆ ಮತ್ತು ದ್ವೇಷವು ಮಾನವನ ಮಾನಸಿಕ ಆರೋಗ್ಯವನ್ನೂ ಕೆಡಿಸುತ್ತದೆ. ಅದರಿಂದ ರಾಷ್ಟ್ರದ ಉತ್ಪಾದನಾ ಸಾಮರ್ಥ್ಯ ಮತ್ತು ಆರ್ಥಿಕ ಭದ್ರತೆಗೂ ಅಡ್ಡಿಯಾಗುತ್ತದೆ. ಹೀಗೆ ಬಡತನದ ದುಷ್ಪರಿಣಾಮ ಅಪಾರವಾಗಿದೆ.

3

# ಬಡತನವು ದೇವ ವಿಧಿಯೋ?

ಬಡತನವನ್ನು ಪಾವನವೆಂದು ಪರಿಗಣಿಸುವ ಸೂಫಿಗಳ ಬಗ್ಗೆ ಇಸ್ಲಾಮಿನ ೀರಣೆಯೇನೆಂದು ನಾವು ತಿಳಿದುಕೊಂಡೆವು. ಬಡತನವು ದೇವ ವಿಧಿಯೆಂಬ ಜಬರೀಯರ ಷ್ಟಿಕೋನವನ್ನು ಇಸ್ಲಾಮ್ ತಿರಸ್ಕರಿಸುತ್ತದೆ. ಜಬರೀಯರ ಅಭಿಪ್ರಾಯದಲ್ಲಿ, ಆರ್ಥಿಕ ಸ್ಥಿತಿ ಮತ್ತು ದುಸ್ಥಿತಿಯು ದೇವ ನಿರ್ಣಯವಾಗಿದೆ. ಅದನ್ನು ಮೀರಲು ಸಾಧ್ಯವಿಲ್ಲ. ದೇವ ರ್ಣಿತವೆಂದರೆ ದೇವನು ಪ್ರತಿಯೊಬ್ಬರಿಗೂ ತಾನಿಚ್ಛಿಸಿದ್ದನ್ನು ದಯಪಾಲಿಸಿದ್ದು ಎಂದರ್ಥ. ದ್ದರಿಂದ ಪ್ರತಿಯೊಬ್ಬರೂ ಅಲ್ಲಾಹನು ತಾನಿಚ್ಛಿಸಿದ್ದನ್ನು ದಯಪಾಲಿಸಿರುವುದರಲ್ಲಿಯೇ ಂತೃಪ್ತರಾಗಬೇಕು. ಅದರ ಪರಿಹಾರ ಅಥವಾ ಬದಲಾವಣೆಯನ್ನು ಬಯಸಬಾರದು.

ಈ ದೃಷ್ಟಿಕೋನವು ಕೆಟ್ಟ ಸಾಮಾಜಿಕ ವ್ಯವಸ್ಥೆಯ ಸುಧಾರಣೆಗೆ ಅಥವಾ ನ್ಯಾಯ ಹಿರ ವ್ಯವಹಾರಗಳನ್ನು ನ್ಯಾಯನಿಷ್ಠವಾಗಿ ಪುನರ್ರಚಿಸಲು ಸಹಾಯಕವಾಗಿಲ್ಲ. ನ್ಯಾಯ ಪನೆಗಾಗಿ ನಡೆಸುವ ಎಲ್ಲಾ ಪ್ರಯತ್ನಗಳಿಗೂ ಇದು ಅಡ್ಡಿಯಾಗುತ್ತದೆ. ಆದರೆ ಇಸ್ಲಾಮ್ ರ್ಮವು, ಬಡತನದ ನಿರ್ಮೂಲನ, ವ್ಯಕ್ತಿಯ ನ್ಯಾಯಬದ್ಧ ಹಕ್ಕುಗಳ ಪ್ರಾಪ್ತಿ ಮತ್ತು ಮಾಜಿಕ ಹೊಣೆಗಾರಿಕೆಗಳ ಸಂಸ್ಥಾಪನೆಗೆ ಪ್ರತಿಜ್ಞಾಬದ್ಧವಾಗಿದೆ. ಆದ್ದರಿಂದ, ಅದಕ್ಕೆ ್ರಚೀನ ಕಾಲದಿಂದಲೇ ಮಾನವನ ಮನದಲ್ಲಿ ಬೇರೂರಿದ್ದ ಜಬರೀ ದೃಷ್ಟಿಕೋನದ ವಿರುದ್ಧ ೀರಾಡದೆ ನಿರ್ವಾಹವಿರಲಿಲ್ಲ. ಆಶ್ಚರ್ಯವೆಂದರೆ ದುರಂಹಕಾರಿಗಳು ಮತ್ತು ಕ್ರೂರಿಗಳಾದ ೀಮಂತರು ಪ್ರಚಾರ ಪಡಿಸಿದ ಆ ಸಿದ್ಧಾಂತದಲ್ಲಿ, ಅಜ್ಞಾನದಿಂದಾಗಿ ಬಡವರೂ ಂಚಿತರಾಗಿದ್ದರು. ಅಸಡ್ಡೆ ಅಥವಾ ಕಾಪಟ್ಯದಿಂದಾಗಿ ಧಾರ್ಮಿಕ ವಿದ್ವಾಂಸರೂ ಅದರ ಾಯಾಜಾಲದಲ್ಲಿ ಸಿಲುಕಿದ್ದರು.

ಈ ದೃಷ್ಟಿಕೋನವು ತಳವೂರಿದ್ದಂತಹ ಸಮಾಜದಲ್ಲಿ ಕುರ್‌ಆನ್ ಅವತೀರ್ಣಗೊಂಡಿತು. ನು ದೇವನು ನೀಡಿದ ಸಂಪತ್ತನ್ನು ದೇವನ ದಾಸರಿಗಾಗಿ ವ್ಯಯಿಸುವ ಕರೆ ನೀಡಿತು. ೀಮಂತರ ಸಂಪತ್ತಿನಲ್ಲಿ ದುರ್ಬಲರಿಗೂ ಜೀವನೋಪಾಯಗಳಿಲ್ಲದವರಿಗೂ ನಿರ್ದಿಷ್ಟ ಲನ್ನು ನಿರ್ಣಯಿಸಿತು. ಬಡತನ ಮತ್ತು ಐಶ್ವರ್ಯವು ದೇವೇಚ್ಛೆ ಎಂಬ ವಾದವು ತಪ್ಪೆಂದು ನು ಸಾರಿತು: "ಅಲ್ಲಾಹನು ನಿಮಗೆ ನೀಡಿರುವ ಜೀವನಾಧಾರದಿಂದ ಒಂದಿಷ್ಟನ್ನು ಅಲ್ಲಾಹನ ಾರ್ಗದಲ್ಲೂ ಖರ್ಚು ಮಾಡಿರಿ ಎಂದು ಹೇಳಲಾದಾಗ, ಈ ಸತ್ಯನಿಷೇಧಿಗಳು ್ಯವಿಶ್ವಾಸಿಗಳೊಡನೆ, ಅಲ್ಲಾಹ್ ಇಚ್ಛಿಸುತ್ತಿದ್ದರೆ ಸ್ವತಃ ತಾನೇ ಯಾರಿಗೆ ಉಣಿಸುತ್ತಿದ್ದನೋ ವರಿಗೆ ನಾವು ಉಣಿಸಬೇಕೇ? ನೀವಂತೂ ಸಂಪೂರ್ಣವಾಗಿ ದಾರಿಗೆಟ್ಟು ಹೋಗಿದ್ದೀರಿ" ಂದು ಹೇಳುತ್ತಾರೆ. (ಯಾಸೀನ್: 47)

ತಮ್ಮ ಕುರುಡು ದೇಹೇಚ್ಛೆಗಳನ್ನು ಅಲ್ಲಾಹನ ವಿಧಿಯೆಂದು ಚಿತ್ರಿಸುವುದಕ್ಕಿಂತ ದೊಡ್ಡ

ಪಥಭ್ರಷ್ಟತೆ ಇದ್ದೀತೇ? ಅಲ್ಲಾಹನು ಬಡವರಿಗೆ ಆಹಾರ ನೀಡಬಯಸುವುದಿದ್ದರೆ ಆತ ಆಕಾಶದಿಂದ ನೇರವಾಗಿ ರೊಟ್ಟಿ, ಸಾರು, ಜೇನು, ತುಪ್ಪ ಇತ್ಯಾದಿಗಳನ್ನು ಇಳಿಸಲಿ ಎಂಬು ಅವರ ಧೋರಣೆಯಾಗಿತ್ತು! ಆದರೆ, ಅವರು ಸ್ವಲ್ಪ ಆಲೋಚಿಸುತ್ತಿದ್ದರೆ, ಜನರಲ್ಲಿ ಕೆಲವ ಅಲ್ಲಾಹನು ಇತರ ಕೆಲವರ ಮೂಲಕ ಆಹಾರ ಒದಗಿಸುತ್ತಾನೆಂಬುದು ಮನವರಿಕೆಯಾಗುತ್ತಿತ ಅಲ್ಲಾಹನ ಇಚ್ಛೆಯಂತೆಯೇ ಶ್ರೀಮಂತರು ಬಡವರ ಬೇಡಿಕೆಗಳನ್ನು ಪೂರೈಸುತ್ತಾರೆ.

ಎಲ್ಲ ಸಮಸ್ಯೆಗಳಿಗೂ ಪರಿಹಾರವಿದೆಯೆಂಬುದು ಇಸ್ಲಾಮಿನ ಮೂಲ ತತ್ತ್ವವಾಗಿ ಎಲ್ಲ ರೋಗಗಳಿಗೂ ಔಷಧಿಯಿದೆ. ರೋಗವನ್ನು ಸೃಷ್ಟಿಸಿದಾತನೇ ಔಷಧವನ್ನೂ ಸೃಷ್ಟಿಸಿದ್ದಾ ನೈಜ ವಿಶ್ವಾಸಿಯು ವಿಧಿಯನ್ನು ವಿಧಿಯಿಂದ ಎದುರಿಸುತ್ತಾನೆ. ಹಸಿವೆಯೆಂಬ ದೇಹೇಚ್ಛೆಯ ಆಹಾರವೆಂಬ ವಿಧಿಯಿಂದ, ದಾಹವನ್ನು ಪಾನೀಯದಿಂದ ಎದುರಿಸುತ್ತಾನೆ. ಪ್ಲೇಗ ಭೀತಿಯಿಂದ ಸಿರಿಯಾದಿಂದ ಮರಳಿ ಬಂದ ಖಲೀಫಾ ಉಮರ್‌ರೊಡನೆ, "ಅಲ್ಲಾಹ ವಿಧಿಯಿಂದ ಓಡಿ ಪಾರಾಗ ಬಯಸುತ್ತೀರಾ?" ಎಂದು ಓರ್ವರು ಪ್ರಶ್ನಿಸಿದರು. ಆಗ ಅವ "ಹೌದು, ಅಲ್ಲಾಹನ ಒಂದು ವಿಧಿಯಿಂದ ಇನ್ನೊಂದು ವಿಧಿಗೆ" ಎಂದು ಉತ್ತರಿಸಿದ್ದ ಔಷಧಗಳ ಬಳಕೆ ಮತ್ತು ರೋಗ ಪ್ರತಿರೋಧದ ಕುರಿತು ಓರ್ವರು ಪ್ರವಾದಿಯವರೊಡನೆ( ವಿಚಾರಿಸಿದರು: ಅಲ್ಲಾಹನ ವಿಧಿಯನ್ನು ಪ್ರತಿರೋಧಿಸಲಾದೀತೇ? "ಅದು ಕೂಡಾ ಅಲ್ಲಾಹ ವಿಧಿಯೇ ಆಗಿದೆ" ಯೆಂದು ಪ್ರವಾದಿ(ಸ) ಉತ್ತರಿಸಿದರು. ಬಡತನವು ರೋಗವೆಂದಾದ ಅದಕ್ಕೆ ಪರಿಹಾರವಿದೆ. ಅದು ಅಲ್ಲಾಹನ ವಿಧಿಯಾಗಿದ್ದರೆ ಅದನ್ನು ಎದುರಿಸಬಹುದು ಮತ ಅದರಿಂದ ವಿಮೋಚನೆ ಪಡೆಯಬಹುದೆಂಬುದೂ ದೇವ ನಿರ್ಣಯವಾಗಿದೆ.

## ಇದ್ದುದರಲ್ಲಿ ತೃಪ್ತಿಯೆಂದರೇನು?

ಇದ್ದುದರಲ್ಲಿ ಸಂತೃಪ್ತರಾಗಲು ಪ್ರೇರೇಪಿಸುವ ಪ್ರವಾದಿ ವಚನಗಳಿಗೆ, ಬಡವ ಸಂಕಷ್ಟಮಯ ಜೀವನದಿಂದಲೇ ಸಂತೃಪ್ತರಾಗಬೇಕು, ಸುಖ ನೆಮ್ಮದಿಯ ಜೀವನಕ್ಕಾ ಪ್ರಯತ್ನಿಸಬಾರದು ಅಥವಾ ಹಣ ಸಂಪಾದಿಸಲು ಶ್ರಮಿಸಬಾರದು ಎಂಬ ಅರ್ಥವಿಲ್ಲ

ಹಾಗೆಯೇ ಅದಕ್ಕೆ, ಶ್ರೀಮಂತರನ್ನು ಭೋಗ ವಿಲಾಸ, ಆಡಂಬರ, ದುಂದ ದುರ್ವ್ಯಯಗಳಿಂದ ಸ್ವಚ್ಛಂದ ಮೆರೆದಾಡಲು ಬಿಡಬೇಕೆಂಬ ಅರ್ಥವೂ ಇಲ್ಲ. ಏಕೆಂದ ಪ್ರವಾದಿಯವರೇ(ಸ) ಸ್ವತಃ ದೇವ ಸಂಪ್ರೀತಿಯಂತೆಯೇ ಲೌಕಿಕ ಸಂಪತ್ತಿಗಾಗಿಯ ಪ್ರಾರ್ಥಿಸಿದ್ದರು. ತನ್ನ ಸಹಾಯಕ ಮತ್ತು ಅನುಯಾಯಿಯಾಗಿದ್ದ ಅನಸ್‌ರಿಗಾಗಿ, "ಅಲ್ಲಾಹ ನೀನು ಅವರಿಗೆ ಸಂಪತ್ತನ್ನು ವೃದ್ಧಿಸಿ ಕೊಡು" ಎಂದು ಪ್ರವಾದಿಯವರು(ಸ) ಪ್ರಾರ್ಥಿಸಿದ್ದರ ಒಮ್ಮೆ ಅಬೂಬಕರ್‌ರನ್ನು ಪ್ರಶಂಸಿಸುತ್ತಾ ಪ್ರವಾದಿಯವರು(ಸ), "ಅಬೂಬಕರ್‌ರ ಸಂಪತ ಉಪಯುಕ್ತವಾದಂತೆ ಬೇರೆ ಯಾರ ಹಣವೂ ನನಗೆ ಉಪಯುಕ್ತವಾಗಿಲ್ಲ" ಎಂ ಹೇಳಿದ್ದರು. ಹಾಗಾದರೆ ಇದ್ದುದರಲ್ಲಿ ತೃಪ್ತಿ ಪಡುವುದು ಎಂಬ ಮಾತಿನ ತಾತ್ಪರ್ಯವೇನ

1. ಮಾನವನು ಸಹಜವಾಗಿ ದುರಾಸೆಯುಳ್ಳವನು ಮತ್ತು ಅತಿಮೋಹಿಯಾಗಿರುತ್ತಾ

ಲೌಕಿಕ ಸೌಲಭ್ಯಗಳು ಎಷ್ಟು ದೊರೆತರೂ ಆತನಿಗೆ ತೃಪ್ತಿಯಾಗುವುದಿಲ್ಲ. ಅದನ್ನು ಒಂದು ಪ್ರವಾದಿ ವಚನದಲ್ಲಿ ಹೀಗೆ ವರ್ಣಿಸಲಾಗಿದೆ:

"ಆದಮರ ಸಂತತಿಗೆ ಎರಡು ಬಂಗಾರದ ಕಣಿವೆಗಳು ದೊರೆತರೆ ಆತ ಮೂರನೇಯದಕ್ಕೆ ಆಶೆ ಪಡುತ್ತಾನೆ. ಮೂರು ದೊರೆತರೆ ನಾಲ್ಕನೇಯದನ್ನು ಬಯಸುತ್ತಾನೆ. ಮಣ್ಣು ಮಾತ್ರ ಆವನ ಹೊಟ್ಟೆ ತುಂಬಬಲ್ಲುದು." (ಬುಖಾರಿ)

ಈ ಹಿನ್ನಲೆಯಲ್ಲಿ ಸಂಪತ್ತಿನ ಗಳಿಕೆಯಲ್ಲಿ ಮಾನವನಿಗೆ ದಾರಿ ತೋರಿಸಬೇಕಾದುದು ಧರ್ಮದ ಕರ್ತವ್ಯವಾಗಿದೆ. ಜೀವನದಲ್ಲಿ ಸಂತುಲನೆ ಪಾಲಿಸಿ, ನೆಮ್ಮದಿಯ ಮೂಲವಾಗಿರುವ ಮಾನಸಿಕ ಶಾಂತಿಯನ್ನು ಗಳಿಸಿ, ಮನಸ್ಸು ಮತ್ತು ದೇಹವನ್ನು ಪೀಡಿಸುವ ದುಂದು, ದುರ್ವ್ಯಯಗಳನ್ನು ತೊರೆಯಲು ಸಹಾಯಕವಾಗುವ ದಾರಿ. ಆದ್ದರಿಂದಲೇ ಪ್ರವಾದಿಯವರು(ಸ) ಹೀಗೆ ಹೇಳಿದ್ದರು: "ತಮ್ಮ ಆಹಾರವು ಸಂಪೂರ್ಣವಾಗಿ ದೊರೆಯದೆ ಯಾರೊಬ್ಬರೂ ಸಾಯುವುದಿಲ್ಲವೆಂದು ಪರಿಶುದ್ಧ ದೇವಚರ ನನಗೆ ಬೋಧನೆ ನೀಡಿದೆ. ಆದ್ದರಿಂದ ಅಲ್ಲಾಹನನ್ನು ಭಯಪಡಿರಿ, ಆಹಾರ ಸಂಪಾದನೆಗೆ ಉತ್ತಮ ಮಾರ್ಗಗಳನ್ನು ಅವಲಂಬಿಸಿರಿ."

ಮಾನವನಿಗೆ ಅತಿಲಾಲಸೆ ಮತ್ತು ದುರಾಸೆಯಂತೆ ವರ್ತಿಸುವ ಮುಕ್ತ ಸ್ವಾತಂತ್ರ್ಯ ನೀಡಿದರೆ ಅದು ಆತನಿಗೂ ಸಮಾಜಕ್ಕೂ ಹಾನಿಕರವಾಗುವುದು ಖಚಿತ. ಆದ್ದರಿಂದ, ಆಶೆ ಅಭಿಲಾಷೆಗಳನ್ನು ಉದಾತ್ತ ಮಾನದಂಡ ಮತ್ತು ಸನಾತನ ಮೌಲ್ಯಗಳ ಆಧಾರದಲ್ಲಿ ನಿಯಂತ್ರಿಸುವ ಅಗತ್ಯವಿದೆ. ಅದು ಧರ್ಮದ ಕರ್ತವ್ಯವಾಗಿದೆ. ಈ ಕೆಳಗಿನ ಕುರ್‌ಆನ್ ವಾಕ್ಯಗಳು ಅದನ್ನು ನಿರ್ವಹಿಸುತ್ತವೆ:

"ನಾವು ಜನರ ಪೈಕಿ ಕೆಲವರಿಗೆ ನೀಡುವ ಐಹಿಕ ಭೋಗ ವಿಲಾಸಗಳತ್ತ ಕಣ್ಣೆತ್ತಿಯೂ ನೋಡಬೇಡಿರಿ. ಅವುಗಳನ್ನಂತು ನಾವು ಪರೀಕ್ಷಿಸಲಿಕ್ಕಾಗಿ ಅವರಿಗೆ ಕೊಟ್ಟಿರುತ್ತೇವೆ ಮತ್ತು ನಿನ್ನ ಪ್ರಭು ನೀಡಿರುವ ಧರ್ಮ ಸಮ್ಮತ ಜೀವನಾಧಾರವೇ ಶ್ರೇಷ್ಠವೂ ಶಾಶ್ವತವೂ ಆಗಿರುತ್ತದೆ." (ತಾಹಾ:131)

"ಜನರಿಗೆ ಇಂದ್ರಿಯಾಭಿಲಾಷೆಗಳಾದ ಸ್ತ್ರೀಯರು, ಮಕ್ಕಳು, ಚಿನ್ನ-ಬೆಳ್ಳಿಗಳ ರಾಶಿ, ಆಯ್ದ ಕುದುರೆಗಳು, ಜಾನುವಾರುಗಳು ಮತ್ತು ಕೃಷಿಭೂಮಿ ಇವುಗಳನ್ನು ಆತ್ಯಾಕರ್ಷಕವಾಗಿ ಮಾಡಲಾಗಿದೆ. ಆದರೆ ಇವೆಲ್ಲ ಇಹಲೋಕದ ಕೆಲವೇ ದಿನಗಳ ಜೀವನ ಸಾಧನಗಳು. ಯಥಾರ್ಥದಲ್ಲಿ ಅತ್ಯುತ್ತಮ ವಾಸಸ್ಥಳವಂತು ಅಲ್ಲಾಹನ ಬಳಿಯಲ್ಲಿದೆ. ಹೇಳಿರಿ- ನಾನು ಇವುಗಳಿಗಿಂತಲೂ ಹೆಚ್ಚು ಉತ್ತಮವಾದುದೇನೆಂದು ನಿಮಗೆ ತಿಳಿಸಲೇ? 'ತಖ್ವಾ'ದ (ಧರ್ಮ ನಿಷ್ಠೆ) ನಿಲುಮೆಯನ್ನು ಕೈಗೊಂಡವರಿಗೆ ಅವರ ಪ್ರಭುವಿನ ಬಳಿ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವ ಉದ್ಯಾನಗಳು ಇವೆ. ಅಲ್ಲಿ ಅವರಿಗೆ ಶಾಶ್ವತ ಜೀವನ ಪ್ರಾಪ್ತವಾಗುವುದು. ಪರಿಶುದ್ಧ ಮಡದಿಯರ ಒಡನಾಟವಿರುವುದು ಮತ್ತು ಅವರು ಅಲ್ಲಾಹನ ಸಂಪ್ರೀತಿಗೆ ಪಾತ್ರರಾಗುವರು. ಅಲ್ಲಾಹ್ ತನ್ನ ದಾಸರ ರೀತಿ-ನೀತಿಗಳನ್ನು ಸೂಕ್ಷ್ಮವಾಗಿ ಅವಲೋಕಿಸುತ್ತಾನೆ.

(ಆಲಿ ಇಮ್‌ರಾನ್:14-1

ಇಲ್ಲಿ ಯಾವುದರಿಂದಲೂ ತೃಪ್ತಿಯಾಗದೆ ಮನಸ್ಸನ್ನು ಸದಾ ಪೀಡಿಸುವ ಆಸೆ ಮತ್ತ ವ್ಯಾಮೋಹಗಳಿಗೆ ಹೃದಯದಲ್ಲಿ ಅವಕಾಶ ನೀಡದೆ ಅವುಗಳ ದುಷ್ಟ ಪ್ರೇರಣೆಗಳಿಗೆ ಕಡಿವಾ ಹಾಕುವ ಕರ್ತವ್ಯವನ್ನು ಸತ್ಯನಿಶ್ವಾಸವು ನಿರ್ವಹಿಸುತ್ತದೆ. ಈ ಕಡಿವಾಣವಿಲ್ಲದಿದ್ದ ಮಾನವನಿಗೆ ತನ್ನಲ್ಲಿರುವ ಮತ್ತು ಸಮ್ಮತಾರ್ಹವಾದವುಗಳಿಂದ ತೃಪ್ತಿಯಾಗದೆ ಅನ್ಯ ಸೊತ್ತುಗಳಿಗೆ ಕೈ ಹಾಕುವ ಮತ್ತು ನಿಷಿದ್ಧವಾದುವುಗಳನ್ನು ಗಳಿಸುವ ಪ್ರೇರಣೆಯುಂಟಾಗುತ್ತ ಅಂತಹ ಮನಸ್ಸಿಗೆ ಸಂತೃಪ್ತಿ ಮತ್ತು ನೆಮ್ಮದಿ ಖಂಡಿತ ದೊರೆಯಲಾರದು. ಅದೊಂ ನರಕದಂತಿರಬಹುದು. ತನ್ನ ಉದರದಲ್ಲಿ ಧಾರಾಳವಾಗಿ ಉರಿಸುತ್ತಲಿದ್ದರೂ, 'ನಿನಗೆ ಸಾಕೇ ಎಂದು ಪ್ರಶ್ನಿಸಿದರೆ, "ಇನ್ನೂ ಇದೆಯೇ?" ಎಂದು ಪುನಃ ಕೇಳುವ ನರಕ! ಅಲ್ಲಾಹ ನಮ್ಮನ್ನು ಅದರಿಂದ ರಕ್ಷಿಸಲಿ.

ಮನಸ್ಸನ್ನು ಸನಾತನ ಮೌಲ್ಯ, ಶಾಶ್ವತ ಪಾರತ್ರಿಕ ಜೀವನ ಮತ್ತು ಅನಾದಿಯಾ ದೇವನತ್ತ ಮರಳಿಸುವುದೇ ವಿಶ್ವಾಸದ ಬೇಡಿಕೆಯಾಗಿದೆ. ಅದರಿಂದಾಗಿ ಐಶ್ವರ್ಯ ಸಂಪತ್ಸಮೃದ್ಧಿಯಲ್ಲ, ಐಶ್ವರ್ಯವು ಮನದಲ್ಲಿದೆಯೆಂಬ ಪ್ರಜ್ಞೆ ಮೂಡುತ್ತದೆ. ಆದ್ದರಿಂದೇ ಪ್ರವಾದಿವರ್ಯರು(ಸ) ಹೀಗೆ ಹೇಳಿದ್ದಾರೆ: "ಸಂಪತ್ಸಮೃದ್ಧಿಯಿಂದ ಐಶ್ವರ್ಯ ಲಭಿಸಲಾರದ ಮನಸ್ಸಿನ ಸಂತೃಪ್ತಿಯೇ ಐಶ್ವರ್ಯ."

2. ಇದ್ದುದರಲ್ಲಿ ಸಂತೃಪ್ತಿ ಎಂಬ ಮಾತಿನ ಎರಡನೇಯ ತಾತ್ಪರ್ಯ ಹೀಗಿದೆ: ಆರ್ಥಿ ಅಸಮಾನತೆಯು ಮಾನವನ ಇತರ ಸಾಧನೆಗಳ ಏರುಪೇರುಗಳಿಗೆ ಸಮಾನವಾಗಿದೆ. ಅ ಜೀವನ, ಮಾನವನ ಐಹಿಕ ಧೋರಣೆ, ದೇವದತ್ತ ಸ್ವಾತಂತ್ರ್ಯ ಮತ್ತು ಮಾನವನ ಲೌ ಪರೀಕ್ಷೆಯ ಅನಿವಾರ್ಯತೆಯಾಗಿದೆ. ಅಲ್ಲಾಹನು ಹೇಳಿರುವನು: "ಅಲ್ಲಾಹನು ನಿಮ್ಮ ಪೈ ಕೆಲವರಿಗೆ ಕೆಲವರ ಮೇಲೆ ಜೀವನಾಧಾರದಲ್ಲಿ ಶ್ರೇಷ್ಠತೆಯನ್ನು ದಯಪಾಲಿಸಿದ್ದಾನೆ."

(ಅನ್ನಹ್ಲ್: 71)

"ನಿಮ್ಮ ಪ್ರಭು ತನಗಿಷ್ಟ ಬಂದವರಿಗೆ ಜೀವನಾಧಾರವನ್ನು ವಿಶಾಲ ಗೊಳಿಸುತ್ತಾ ಮತ್ತು ತನಗಿಷ್ಟ ಬಂದವರಿಗೆ ಸಂಕುಚಿತ ಗೊಳಿಸುತ್ತಾನೆ. ಅವನು ದಾಸರ ಸ್ಥಿತಿಗಳನ ಅರಿತವನಾಗಿರುತ್ತಾನೆ ಮತ್ತು ಅವರನ್ನು ವೀಕ್ಷಿಸುತ್ತಿದ್ದಾನೆ." (ಬನೀಇಸ್ರಾಈಲ್ :3

"ಅವನೇ ನಿಮ್ಮನ್ನು ಭೂಮಿಯ ಪ್ರತಿನಿಧಿಯನ್ನಾಗಿ ಮಾಡಿದನು. ಮತ್ತು ನಿಮ ಕೊಟ್ಟಿರುವುದರಲ್ಲಿ ನಿಮ್ಮನ್ನು ಪರೀಕ್ಷಿಸಲಿಕ್ಕಾಗಿ ನಿಮ್ಮಲ್ಲಿ ಕೆಲವರಿಗೆ ಕೆಲವರಿಗಿಂತ ಉನ್ನ ಪದವಿಯನ್ನು ನೀಡಿದನು." (ಅಲ್ ಅನ್‌ಆಮ್:16

ಜನರಲ್ಲಿ ನೀಳಕಾಯ-ಕುಳ್ಳ, ಸುಂದರ-ಕುರೂಪಿ, ಬುದ್ಧಿವಂತ-ದಡ್ಡ, ಬಲಾಢ್ ದುರ್ಬಲ ಇತ್ಯಾದಿ ವ್ಯತ್ಯಾಸಗಳು ಸಹಜವಾಗಿದೆ. ಹಾಗೆಯೇ ಆರ್ಥಿಕವಾಗಿ ಅಸಮಾನರಿರುತ್ತಾ ಅದು ಐಹಿಕ ಜೀವನದ ಅನಿವಾರ್ಯತೆ ಮತ್ತು ದೇವ ನೀತಿಯಾಗಿದೆ. ಆರ್ಥಿಕ ಉಚ್ಛ

ೀಚತೆಯು ನಿರ್ಮೂಲನದ ಬಗ್ಗೆ ಪ್ರಚಂಡ ಭಾಷಣ ಮಾಡುವ ಕಮ್ಯೂನಿಸ್ಟರಿಂದಲೂ ಬದಲಾಯಿಸಲಸಾಧ್ಯವಾಗಿರುವ ದೇವ ನೀತಿ. ಆದ್ದರಿಂದಲೇ, ಮಿಥ್ಯಗಳ ಬೆಂಬತ್ತಿ ಜೀವನವನ್ನು ಷ್ಟ ಮತ್ತು ಶೋಚನೀಯ ಗೊಳಿಸದೆ ವಾಸ್ತವಿಕ ಪ್ರಜ್ಞೆಯಿಂದ ಎದುರಿಸಬೇಕೆಂದು ಇಸ್ಲಾಮ್ ಬೋಧಿಸುತ್ತದೆ.

ದುರಾಸೆ ಮತ್ತು ದ್ವೇಷಾಸೂಯೆಯಿಂದ ಅನ್ಯರಿಗೆ ದೊರೆತ ಅನುಗ್ರಹಗಳತ್ತ ನೋಡುವ ಣವನ್ನು ಇಸ್ಲಾಮ್ ಖಂಡಿಸುತ್ತದೆ. ಅದು ಸ್ವಂತ ಜೀವನದಲ್ಲಿ ಅಸಂತುಷ್ಟಿ ಮತ್ತು ಖಿನ್ನತೆಯನ್ನಷ್ಟೇ ಮೂಡಿಸಬಹುದು. ತನಗಿಂತ ಸಂಕಷ್ಟದಲ್ಲಿರುವ ಮತ್ತು ತನ್ನಷ್ಟು ಭಾಗ್ಯವಂತರಲ್ಲದ ಜನರನ್ನು ನೋಡಬೇಕು, ತುಲನಾತ್ಮಕವಾಗಿ ನಾನೆಂತಹ ಭಾಗ್ಯಶಾಲಿಯೆಂಬ ಭಾವನೆಯಿಂದ ಮಾನಸಿಕ ಶಾಂತಿ-ನೆಮ್ಮದಿ ಗಳಿಸಬೇಕೆಂದು ಇಸ್ಲಾಮ್ ಕಲಿಸುತ್ತದೆ.

ಹಾಗಾದರೆ ಇದ್ದುದರಲ್ಲಿ ತೃಪ್ತಿ ಪಡುವುದೆಂದರೆ, ಬದಲಾವಣೆಗೆ ಬದ್ಧವಲ್ಲದ ೀತಿಯಲ್ಲಿ ಅಲ್ಲಾಹನು ಮಾನವನಿಗೆ ನೀಡಿರುವುದರಲ್ಲಿ ಸಂತುಷ್ಟರಾಗುವುದಾಗಿದೆ. ಜನ್ಮ ದ್ಧವಾದ ದೈಹಿಕ, ಮಾನಸಿಕ, ಬೌದ್ಧಿಕ ವೈಶಿಷ್ಟ್ಯಗಳು ಮಾನವನ ಗುಣ ನಡತೆ ಮತ್ತು ಚಾರ ಧಾರೆಯ ಮೇಲೆ ಪರಿಣಾಮ ಬೀರುತ್ತದೆ. ತರುವಾಯ ಪರಿಸ್ಥಿತಿ ಮತ್ತು ನುಭವಗಳು, ಆ ಗುಣ ನಡತೆ ಮತ್ತು ವಿಚಾರ ಧಾರೆಗಳನ್ನು ನಿಯಂತ್ರಿಸುತ್ತದೆ. ಈ ನ್ನೆಲೆಯಲ್ಲಿ, ತನ್ನ ಆಸೆ ಅಭಿಲಾಷೆಗಳನ್ನು ತನಗೆ ನಿರ್ಣಯಿಸಿದ ಪಾಲಿನ ಮಿತಿಯೊಳಗಿರಿಸಬೇಕಾದುದು ಆತನ ಕರ್ತವ್ಯವಾಗಿದೆ. ತನಗಿಲ್ಲದ ಮತ್ತು ಇತರರಿಗಿರುವ ನುಗ್ರಹಗಳತ್ತ ಕಣ್ಣು ಹಾಯಿಸಬಾರದು. ಅದು ಓರ್ವ ಮುದುಕನು ಯುವಕನ ದೇಹಬಲಕ್ಕಾಗಿ ಸೆ ಪಡುವ, ಕುರೂಪಿಯು ಸುಂದರಿಯನ್ನು ದ್ವೇಷದಿಂದ ನೋಡುವ ಮತ್ತು ದೀರ್ಘಕಾಯನು ಳ್ಳನನ್ನು ನೋಡಿ ಮತ್ಸರ ಪಡುವುದಕ್ಕೆ ಸಮಾನವಾಗಿದೆ. ಪ್ರವಾದಿಯವರ(ಸ) ಕಾಲದಲ್ಲಿ ಲವು ಮಹಿಳೆಯರಿಗೆ ಇಂತಹ ಬಯಕೆಗಳಿದ್ದುವು. ಪುರುಷರಂತೆಯೇ ಅವರಿಗೂ ೊರೆಯಬೇಕೆಂದು ಅವರು ಆಸೆ ಪಟ್ಟಿದ್ದರು. ಕುರ್‌ಆನ್ ಅವರಿಗೆ ಈ ಉತ್ತರ ನೀಡಿತ್ತು:

"ಅಲ್ಲಾಹನು ನಿಮ್ಮಲ್ಲಿ ಕೆಲವರಿಗೆ ಇನ್ನು ಕೆಲವರಿಗಿಂತ ಅಧಿಕವಾಗಿ ನೀಡಿದ್ದರೆ ದಕ್ಕಾಗಿ ಆಸೆ ಪಡಬೇಡಿರಿ. ಪುರುಷರು ಗಳಿಸಿದಕ್ಕನುಸಾರವಾದ ಪಾಲು ಅವರಿಗಿದೆ, ಸ್ತ್ರೀಯರು ಳಿಸಿದ್ದಕ್ಕನುಸಾರವಾದ ಪಾಲು ಅವರಿಗಿದೆ. ಅಲ್ಲಾಹನೊಡನೆ ಅವನ ಅನುಗ್ರಹವನ್ನು ಯಾಚಿಸುತ್ತಲಿರಿ." (ಅನ್ನಿಸಾ:32)

ವ್ಯಕ್ತಿ ಮತ್ತು ಸಮಾಜವನ್ನು ಪೀಡಿಸುವ ಆರ್ಥಿಕ ಬಿಕ್ಕಟ್ಟು ಮತ್ತು ಆಹಾರ ಕೊರತೆ, ಯುದ್ಧ, ಬರಗಾಲಗಳಿಂದಾಗುವ ವಿಷಮ ಪರಿಸ್ಥಿತಿಗಳ ವೇಳೆ ಜನರು ಇದ್ದುದರಲ್ಲಿ ತೃಪ್ತಿಪಡಲು ನಿರ್ಬಂಧಿತರಾಗುತ್ತಾರೆ. ಜನರ ಜೀವನಾವಶ್ಯಕತೆಗಳನ್ನು ಪೂರೈಸುವಷ್ಟು ಂಪನ್ಮೂಲಗಳಿಲ್ಲದ ರಾಷ್ಟ್ರಗಳಿವೆ. ಸರಕಾರಗಳಿಗೆ ಸಂಪನ್ಮೂಲಗಳನ್ನು ಹೆಚ್ಚಿಸಲಾಗದಿದ್ದರೆ ಥವಾ ಜನರಿಗೆ ಬೇರೆಡೆಗೆ ಹೋಗಲು ಸಾಧ್ಯವಾಗದಿದ್ದರೆ ಇದ್ದುದರಲ್ಲಿಯೇ ತೃಪ್ತಿ ಡುವುದು ಸೂಕ್ತವಾಗಿದೆ. ಅದರ ಹೊರತು ಬೇರೆ ಮಾರ್ಗವನ್ನು ಹುಡುಕುವುದೆಂದರೆ

ಕೈಗೆಟಕದ ಹಾಗೂ ಅಸಂಭವನೀಯವಾದುದನ್ನು ನಿರೀಕ್ಷಿಸುವುದಕ್ಕೆ ತುಲ್ಯವಾಗಿದೆ; ಅದರಿಂ
ನಿರಾಶೆ ಮತ್ತು ದುಃಖವಷ್ಟೇ ಲಭಿಸಬಹುದು. ಐಶ್ವರ್ಯವು ಸಂಪತ್ಸಮೃದ್ಧಿಯಲ್ಲಿ
ಮನಸ್ಸಿನ ಸಂತೃಪ್ತಿಯೇ ಐಶ್ವರ್ಯವೆಂಬುದನ್ನು ಈ ಮಂದಿಗೆ ಮನವರಿಕೆ ಮಾಡಿಸಬೇಕ
ಕೆಲವು ಪ್ರವಾದಿ ವಚನಗಳತ್ತ ಅವರ ಗಮನ ಸೆಳೆಯುವುದು ಸೂಕ್ತವೆನಿಸುತ್ತಿದೆ:

"ಅಲ್ಲಾಹನು ನಿನಗೆ ನಿರ್ಣಯಿಸಿದ ಪಾಲಿನಿಂದ ಸಂತೃಪ್ತನಾಗು.' (ಇಬ್ನು ಮಾಜ
"ಇಸ್ಲಾಮಿನೆಡೆಗೆ ಮಾರ್ಗದರ್ಶನ ದೊರೆತು, ತನ್ನ ಹಣವು ಅಗತ್ಯಕ್ಕೆ ಸಾಕಾಗಿ ಅದರಿಂ
ಸಂತೃಪ್ತನಾಗುವವ ಜಯಿಸಿದ." (ತಿರ್ಮಿದಿ)

ಅಗತ್ಯವನ್ನು ಪೂರೈಸುವ ಕಡಿಮೆ ಹಣವು ಮಾನವನನ್ನು ಸೋಮಾರಿಗೊಳಿಸುವ ಅಧಿ
ಹಣಕ್ಕಿಂತ ಉತ್ತಮ.

ಓರ್ವ ಕವಿ ಹೀಗೆ ಹೇಳಿದ್ದ:

"ಮನಸ್ಸಿನ ಐಶ್ವರ್ಯವನ್ನು ಗಳಿಸಿದಾತನೇ ಐಶ್ವರ್ಯವಂತ. ಪ್ರಪಂಚದ ಪ್ರ
ಮೂಲೆಯಲ್ಲಿಯೂ ಐಶ್ವರ್ಯ ಹುಡುಕುವಾತನಿಗೆ ಇರುವುದೆಲ್ಲ ದೊರೆತರೂ ತೃಪ್ತಿಯಾಗಲಾರದ
ಇದ್ದುದರಲ್ಲಿ ತೃಪ್ತನಾದರೆ ಕಡಿಮೆ ಸಾಕು."

ಸಂಕ್ಷಿಪ್ತದಲ್ಲಿ, ಇದ್ದುದರಲ್ಲಿ ತೃಪ್ತನಾಗುವುದೆಂದರೆ ಅಸೂಯೆ ಮತ
ದುರಾಸೆಯಿಲ್ಲದಿರುವುದು. ತನ್ನದಲ್ಲದ ಮತ್ತು ತನ್ನ ಸಾಮರ್ಥ್ಯಕ್ಕೆ ಮೀರಿದ ಯಾವುದಕ
ಆಸೆ ಪಡದಿರುವುದೆಂದರ್ಥ. ಆ ಮೂಲಕ ಮಾನವನಿಗೆ, ಶ್ರಮ ಜೀವಿಯಾದ ಸತ್ಯವಿಶ್ವಾಸಿ
ಅಲ್ಲಾಹನು ಇಹಲೋಕದಲ್ಲಿ ಪ್ರತಿಫಲವಾಗಿ ನಿರ್ಣಯಿಸಿದ ಜೀವನದ ಸೌಭಾಗ್ಯಗಳನ
ಅನುಭವಿಸಲು ಸಾಧ್ಯವಾಗುವುದು.

"ಪುರುಷನಾಗಿರಲಿ, ಸ್ತ್ರೀ ಆಗಿರಲಿ ಯಾರು ಸತ್ಕರ್ಮವೆಸಗುವನೋ ಅವ
ಸತ್ಯವಿಶ್ವಾಸಿಯಾಗಿದ್ದರೆ ಅವನಿಗೆ ನಾವು ಇಹಲೋಕದಲ್ಲಿ ಪರಿಶುದ್ಧ ಜೀವನವನ
ದಯಪಾಲಿಸುವೆವು ಮತ್ತು ಇಂತಹವರಿಗೆ (ಪರಲೋಕದಲ್ಲಿ) ಅವರ ಅತ್ಯುತ್ತಮ ಕರ್ಮಗಳಿಗನುಸ
ಪ್ರತಿಫಲ ನೀಡುವೆವು." (ಅನ್ನಹ್ಲ್:16

ಅಲೀ ಬಿನ್ ಅಬೀತಾಲಿಬ್‌ರು, 'ಸುಖ ಜೀವನವನ್ನು ಇದ್ದುದರಲ್ಲಿ ಸಂತೃ
ಜೀವನವೆಂದು ವ್ಯಾಖ್ಯಾನಿಸಿದ್ದರು.'

4

# ದಾನ ಧರ್ಮಗಳು: ಇಸ್ಲಾಮಿನ ದೃಷ್ಟಿಕೋನ

ಬಡ ದುರ್ಬಲ ವರ್ಗಗಳಿಗೆ ದಾನ ಧರ್ಮಗಳನ್ನು ನೀಡಬೇಕು, ಅವರಿಗೆ ಸಹಾಯ ಸ್ತ ಚಾಚಬೇಕೆಂದು ಶ್ರೀಮಂತರಿಗೆ ಇಸ್ಲಾಮ್ ಆದೇಶಿಸಿದೆ. ಇದು ಬಡತನ ನಿರ್ಮೂಲನಕ್ಕೆ ವಲ ವೈಯಕ್ತಿಕ ದಾನ ಧರ್ಮಗಳನ್ನು ಅವಲಂಬಿಸುವ ವರ್ಗಕ್ಕೆ ಸಮಂಜಸ ೋರಣೆಯೆನಿಸಬಹುದು. ಆದರೆ ಬಡತನ ನಿರ್ಮೂಲನಕ್ಕೆ, ಕೇವಲ ದಾನ ಧರ್ಮಗಳನ್ನು ವಲಂಬಿಸುವ ದೃಷ್ಟಿಕೋನವನ್ನು ಇಸ್ಲಾಮ್ ಅಂಗೀಕರಿಸುವುದಿಲ್ಲ. ಅದು ಬಡವರು ಮತ್ತು ರ್ಗತಿಕರನ್ನು ಶ್ರೀಮಂತರ ಕೃಪಾಶ್ರಯಕ್ಕೆ ಬಿಡುವುದರಿಂದ ಅವರಿಗೆ ನಷ್ಟವುಂಟಾಗುವುದೆಂದು ಳಿದಿದೆ. ಏಕೆಂದರೆ ವಿಶ್ವಾಸವು ದುರ್ಬಲಗೊಂಡು, ಹೃದಯದಲ್ಲಿ ಜಿಪುಣತೆ ಮತ್ತು ್ವಾರ್ಥವು ತುಂಬಿಕೊಳ್ಳುವುದು. ಶ್ರೀಮಂತರಿಗೆ ಅಲ್ಲಾಹ್ ಪ್ರವಾದಿ ಮತ್ತು ಪರಲೋಕದ ಜಯದ ಬದಲಾಗಿ ಸಂಪತ್ತು ಪ್ರಿಯವಾದಾಗ ದಾನ ಧರ್ಮಗಳ ಪ್ರಮಾಣವೂ ತಿಮೆಯಾಗುವುದು. "ಇಲ್ಲ, ನೀವು ಅನಾಥರನ್ನು ಗೌರವಿಸುವುದಿಲ್ಲ. ನಿರ್ಗತಿಕರಿಗೆ ಆಹಾರ ೀಡಲು ಪ್ರೇರೇಪಿಸುವುದಿಲ್ಲ. ನೀವು ವಾರೀಸು ಸೊತ್ತನ್ನು ಕಬಳಿಸುತ್ತೀರಿ."- ಎಂಬುದಾಗಿ ುರ್‌ಆನ್ ಆಕ್ಷೇಪಿಸಿರುವ ಜನರು, ಮೇಲೆ ವಿವರಿಸಿದ ಗುಂಪಿಗೆ ಸೇರಿದ್ದಾರೆ.

ಬಡತನವನ್ನು ವಿಶ್ಲೇಷಿಸುವಾಗ, ದಾನವೆಂಬ ಕರ್ಮದ ಗುಣ ಮತ್ತು ವೈಯಕ್ತಿಕ ಹಿತದ ,ಹಿಕೆಯಲ್ಲಿ ನಮ್ಮಿಂದ ತಪ್ಪು ಸಂಭವಿಸಿದೆ. ಆ ಕುರಿತು ಡಾ| ಇಬ್ರಾಹೀಮ್ ಲಬ್ಬಾನ್ ಡೆಸಿದ ವಿಶ್ಲೇಷಣೆ ಗಮನಾರ್ಹವಾಗಿದೆ. ದುರ್ಬಲರ ಹಕ್ಕುಗಳನ್ನು ಪ್ರತಿಪಾದಿಸುತ್ತಾ ಅವರು ೇಗೆಂದಿದ್ದಾರೆ:

ದಾನ ಧರ್ಮಗಳು, ಸಮಾಜದಿಂದ ಬಡತನ ನಿರ್ಮೂಲನಕ್ಕಾಗಿ ದೇವ ಧರ್ಮಗಳು ಳಸುತ್ತಿದ್ದ ಹಳೆಯ ಕರ್ಮವಾಗಿದೆ. ಮಾನವ ಸಮಾಜವು ಈ ಕರ್ಮವನ್ನು ಸುದೀರ್ಘ ಲದಿಂದ ಅನುಸರಿಸುತ್ತಾ ಬಂದಿದೆ. ಈ ಕರ್ಮಕ್ಕೆ ತನ್ನದೇ ಆದ ವೈಶಿಷ್ಟ್ಯ ಮತ್ತು ತ್ಫಲಗಳೊಂದಿಗೆ ಕೆಲವು ದೋಷಗಳೂ ಇವೆ. ಅದರಿಂದ ಬಡತನವನ್ನು ಅಮೂಲಾಗ್ರ ರ್ಮೂಲನಗೊಳಿಸಲು ಅಥವಾ ದೀನ ದುರ್ಬಲ ವರ್ಗಗಳನ್ನು ಗೌರವಾರ್ಹದ ಜೀವನ ಟ್ಟಕ್ಕೇರಿಸಲು ಸಾಧ್ಯವಿಲ್ಲ. ಈ ದೋಷವು ಅದರ ಮೂಲ ಸ್ವರೂಪಕ್ಕೆ ಸಂಬಂಧಿಸಿದೆ. ದ್ದರಿಂದ ಅದರ ನೈಜ ಗುಣ ವೈಶಿಷ್ಟ್ಯಗಳನ್ನು ಮನಗಂಡು ಲೋಪ ದೋಷಗಳನ್ನು ಕಂಡು ಡಿಯಬೇಕಾಗಿದೆ. ಹಾಗಾದರೆ ಮಾತ್ರ ಸಮಾಜವನ್ನು ಬಡತನದಿಂದ ವಿಮೋಚನೆಗೊಳಿಸುವ ಟ್ಟಿನಲ್ಲಿ ಆ ಕರ್ಮವು ಯಾಕೆ ವಿಫಲವಾಯಿತೆಂದು ಖಚಿತ ಪಡಿಸಬಹುದಾಗಿದೆ.

ಕರ್ತವ್ಯಗಳಲ್ಲಿ ಹಕ್ಕು ಕೂಡಾ ಸೇರಿಕೊಂಡಿದೆ. ಒಂದು ವಸ್ತುವನ್ನು ಖರೀದಿಸುವಾತನು ದರ ಬೆಲೆಯನ್ನು ನೀಡುವುದು ಕರ್ತವ್ಯವಾಗಿದೆ. ಅದೇ ವೇಳೆ ಮಾರಾಟಗಾರನು ಅದರ ಲೆಯನ್ನು ಕೇಳಿ ಪಡೆಯುವುದು ಆತನ ಹಕ್ಕಾಗಿದೆ. ಈ ಹಕ್ಕನ್ನು ಎರಡು ಅಂಶಗಳು

ದೃಢೀಕರಿಸುತ್ತವೆ- 1. ತನಗೆ ಅರ್ಹವಾಗಿರುವ ಮತ್ತು ಪಾವತಿಸುವಂತೆ ಅಪೇಕ್ಷಿಸಬಹುದಾ ಬೆಲೆಯ ಹಕ್ಕು. 2. ಹಕ್ಕುದಾರರಿಗೆ ಅವರ ಹಕ್ಕುಗಳನ್ನು ಗಳಿಸಿ ಕೊಡುವ ನಿಟ್ಟಿನಲ್ಲಿ ರಾಷ್ಟ್ರ ಕರ್ತವ್ಯ.

ಕರ್ತವ್ಯವೆಂಬ ಕಲ್ಪನೆಯಲ್ಲಿ ಹಕ್ಕು ಕೂಡಾ ಸೇರಿರುವುದೇ ಕ್ರಯ ವಿಕ್ರಯಗಳ ಯಶಸ್ಸಿ ಪ್ರೇರಕ ಮತ್ತು ಪೂರಕವಾಗಿದೆ. ಕೇವಲ ಕರ್ತವ್ಯ ಪ್ರಜ್ಞೆಯಿಂದ ಆರ್ಥಿಕ ವಿನಿಮ ಪ್ರಕ್ರಿಯೆಯನ್ನು ಯಶಸ್ವಿಗೊಳಿಸಲು ಸಾಧ್ಯವಿಲ್ಲ. ಮಾರಾಟ ವಸ್ತುವಿನ ಬೆಲೆಯು ತನ್ನ ಸುದ ಹಕ್ಕೆಂಬ ಪ್ರಜ್ಞೆಯು ವಿನಿಮಯ ಪ್ರಕ್ರಿಯೆಯ ಯಶಸ್ಸಿನಲ್ಲಿ ಮುಖ್ಯ ಪಾತ್ರ ವಹಿಸುತ್ತ ಹಾಗೆಯೇ ಆರ್ಥಿಕ ವ್ಯವಹಾರದ ಯಶಸ್ಸಿನಲ್ಲಿ, ಹಕ್ಕುಗಳನ್ನು ಗಳಿಸಲು ಹಕ್ಕುದಾರ ನೆರವಾಗಿ, ಕರ್ತವ್ಯ ನಿರ್ವಹಣೆಗೆ ಬದ್ಧರಾದವರನ್ನು ಅದಕ್ಕಾಗಿ ಒತ್ತಾಯಿಸುವ ರಾಷ್ಟ್ರ ಹೊಣೆಗಾರಿಕೆಯ ಪಾತ್ರವೂ ಗಮನಾರ್ಹವಾಗಿದೆ.

ದಾನಧರ್ಮಗಳ ಸ್ವಭಾವವನ್ನು ತಿಳಿಯಲು ಈ ಮುನ್ನುಡಿ ಅತ್ಯಗತ್ಯವಾಗಿ ದಾನಧರ್ಮಗಳು ಕೇವಲ ಕರ್ತವ್ಯವಾಗಿದೆ, ಅದು ಹಕ್ಕಲ್ಲ. ಆದ್ದರಿಂದ ಬಡತನ ನಿರ್ಮೂಲನಕ್ಕೆ ದಾನಧರ್ಮಗಳು ಮಾತ್ರ ರೂಢಿಯಲ್ಲಿದ್ದ ಕಾಲದಲ್ಲಿ ಬಡವರಿಗೆ ಅದ ಶ್ರೀಮಂತರಿಂದ ಕೇಳಿ ಪಡೆಯುವ ಅಥವಾ ವಸೂಲು ಮಾಡುವ ಹಕ್ಕು ಇರಲಿಲ್ಲ. ಬಡವ ತಮ್ಮ ಹಕ್ಕಿಗಾಗಿ ವಾದಿಸುವುದರಿಂದ ಮತ್ತು ಸರಕಾರವು ಬಡವರಿಗೆ ಆ ಹಕ್ಕ ನೀಡದಿರುವುದರಿಂದ ಶ್ರೀಮಂತರು ದಾನಧರ್ಮವನ್ನೇ ನಿಲ್ಲಿಸಿ ಬಿಟ್ಟರು.

ಬಡವರಿಗೆ ದಾನ ನೀಡುವಂತೆ ಶ್ರೀಮಂತರನ್ನು ಪ್ರೇರೇಪಿಸಲು ಸರಕಾರಕ್ಕೆ ಎರ ವಿಷಯಗಳು ಅಡ್ಡಿಯಾಗಿದ್ದುವು. ಒಂದನೆಯದಾಗಿ ಈ ಕರ್ತವ್ಯದ ಮಹತ್ವವನ್ನು ಅರಿತಿರಲೀ ಕರ್ತವ್ಯಗಳಲ್ಲಿ ದಾನ ಧರ್ಮಗಳಿಗೆ ಅತ್ಯುನ್ನತ ಸ್ಥಾನವಿದೆಯೆಂದು ಜನರೂ ತಿಳಿದಿರಲೀ ಅದೇ ವೇಳೆ ಧಾರ್ಮಿಕ ಕರ್ತವ್ಯ ಮತ್ತು ಧರ್ಮೇತರ ಕರ್ತವ್ಯಗಳಿಗೆ ಭಿನ್ನ ನಿಲುವೆುಯಿದೆಯೆಂ ಜನರು ಮೊದಲೇ ಗ್ರಹಿಸಿದ್ದರು. ಆದ್ದರಿಂದ, ಕರ್ತವ್ಯಗಳ ಸಾಲಿನಲ್ಲಿ ದಾನಧರ್ಮಕ್ಕೆ ಉನ್ನ ಸ್ಥಾನ ನೀಡಲ್ಪಡಲಿಲ್ಲ.

ದಾನ ಧರ್ಮಗಳಿಗೆ ಸರಕಾರವು ಹಸ್ತಕ್ಷೇಪ ನಡೆಸಬೇಕಾದಂತಹ ವೈಶಿಷ್ಟ್ಯಗಳಿಲ್ಲವೆಂಬುದ ಇನ್ನೊಂದು ಕಾರಣವಾಗಿದೆ. ತೆರಿಗೆಯನ್ನು, ನಿರ್ದಿಷ್ಟ ಪ್ರಮಾಣ ಮತ್ತು ನಿರ್ದಿ ಅವಧಿಯನ್ನು ಸೂಚಿಸಿ ವಸೂಲು ಮಾಡಬಹುದು. ದಾನವನ್ನು ಆ ರೀತಿಯಲ್ಲಿ ವಸೂ ಮಾಡಲು ಸಾಧ್ಯವಿಲ್ಲ. ಅದಕ್ಕೆ ಮಿತಿ ನಿರ್ಣಯಿಸಲು ಸಾಧ್ಯವಿಲ್ಲವಷ್ಟೆ. ಯಾರಿಗೆ, ಯಾವ ಎಷ್ಟು ದಾನ ಧರ್ಮಗಳು ಕಡ್ಡಾಯವಾಗುವುದೆಂಬ ಬಗ್ಗೆ ವಿವರಗಳೂ ಲಭ್ಯವಿಲ್ಲ.

ಈ ಹಿನ್ನೆಲೆಯಿಂದಾಗಿ ದಾನ ಧರ್ಮ ನೀಡುವುದು ಕೇವಲ ಒಂದು ಕರ್ತವ್ಯವಾ ಉಳಿಯಿತು. ದಾನ ಧರ್ಮವನ್ನು ಕೇವಲ ಕರ್ತವ್ಯಕ್ಕೆ ಸೀಮಿತಗೊಳಿಸಿದರೆ ಅದನ್ನು ಹಕ್ಕೆಂ ಪರಿಗಣಿಸಿ ಅದರ ಪ್ರಮಾಣವನ್ನು ನಿಗದಿ ಪಡಿಸಿ ಸರಕಾರವೇ ವಸೂಲು ಮಾಡಿ ವಿತರ

ಮಾಡುವ ಸ್ಥಿತಿಯಿಂದ ಲಭ್ಯವಾಗುವ ಮಹತ್ವ ಮತ್ತು ಸುವ್ಯವಸ್ಥೆ ಸಾಧ್ಯವಾಗುವುದಿಲ್ಲ. ಬಡತನ ನಿರ್ಮೂಲನದಲ್ಲಿ ದಾನ ಧರ್ಮಗಳ ವೈಫಲ್ಯಕ್ಕೆ ಅದೇ ಕಾರಣವಾಗಿದೆ. ಸಮಸ್ಯೆಯನ್ನು ಸಂಪೂರ್ಣವಾಗಿ ಶ್ರೀಮಂತರ ಹೊಣೆಗಾರಿಕೆ ಮತ್ತು ಅವರ ಆತ್ಮ ಸಾಕ್ಷಿಗೆ ಬಿಟ್ಟು ಬಿಡಲಾಯಿತು. ಆತ್ಮ ಸಾಕ್ಷಿಯಾದರೋ, ಸಂಪತ್ತಿನ ಬಗ್ಗೆ ಸಹಜ ಪ್ರೀತಿ ಮತ್ತು ವ್ಯಯದ ಬಗ್ಗೆ ವೈಮನಸ್ಸಿನ ಪ್ರಭಾವಕ್ಕೆ ಬದ್ಧವಾಗಿದೆ! ಇದರಿಂದಾಗಿ, ಶ್ರೀಮಂತ ವರ್ಗವು ದಾನ ಧರ್ಮಗಳನ್ನು ಕೈಬಿಟ್ಟು, ಬಡವರು ಬಡವರಾಗಿಯೇ ಉಳಿಯುವಂತಾಯಿತು.

ಸಂಕ್ಷಿಪ್ತದಲ್ಲಿ, ದಾನಧರ್ಮಗಳೆಂಬ ಕಲ್ಪನೆಯು ಸ್ವಾಭಾವಿಕವಾಗಿ ದುರ್ಬಲವಾಗಿದೆ. ಬಡತನ ನಿರ್ಮೂಲನಕ್ಕೆ ಅದು ಅಪರ್ಯಾಪ್ತವಾಗಿದೆ. ಬಡವನ ಬೇಡಿಕೆಗಳ ಪೂರೈಕೆಗೆ ಬೇಕಾದ ಪಾಲನ್ನು ಅದು ನಿಗದಿ ಪಡಿಸುವುದಿಲ್ಲ. ಅದಕ್ಕೆ ಸುವ್ಯವಸ್ಥೆಯನ್ನು ಹೊಂದಿರುವ ಕರ್ತವ್ಯವೆಂಬ ಸ್ಥಾನವಿಲ್ಲ. ಆದ್ದರಿಂದ ಅದರ ಪರಿಣಾಮವು ನಗಣ್ಯ, ಅಸ್ಥಿರ ಮತ್ತು ಕ್ಷಣಿಕವಾಗಿದೆ. ಅದು ವ್ಯಕ್ತಿಯ ಸದ್ಭಾವನೆ ಮತ್ತು ಆತ್ಮ ಸಾಕ್ಷಿಗೆ ಬಿಟ್ಟ, ಕೇವಲ ವೈಯಕ್ತಿಕ ಕರ್ತವ್ಯವೆಂಬುದು ಅದರ ಬಹುದೊಡ್ಡ ಕೊರತೆಯಾಗಿದೆ. ಅದನ್ನು ಸರಕಾರವೇ ವಸೂಲು ಮಾಡಿ ವಿತರಣೆ ಮಾಡಲು ಸಾಧ್ಯವಿಲ್ಲದಿರುವುದರಿಂದ ಅದರ ಕ್ರಮಬದ್ಧ ನಿರ್ವಹಣೆಗೂ ಅಡ್ಡಿಯುಂಟಾಗುತ್ತದೆ.

(ಮಜ್ಮವುಲ್ ಬುಹೂತಿಲ್ ಇಸ್ಲಾಮಿಯ್ಯ- ಪುಟ: 242-243, ಅಲ್ ಮುಅ್ತಮರುಲ್ ಅವ್ವಲ್- ಕೈರೊ)

5

# ಬಂಡವಾಳಶಾಹಿತ್ವ ಮತ್ತು ಕಮ್ಯೂನಿಝಮ್

ಕೆಲವು ದಾನಧರ್ಮಗಳನ್ನು ಅವಲಂಬಿಸಿ ಬಡತನವನ್ನು ನಿರ್ಮೂಲನಗೊಳಿಸಬಹುದೆಂಬ ನೀತಿಯನ್ನು ಇಸ್ಲಾಮ್ ಅಂಗೀಕರಿಸುವುದಿಲ್ಲ. ಹಾಗೆಯೇ, ಸಂಪತ್ತಿನ ನೈಜ ಒಡೆಯನೇ ಅದರ ಹಕ್ಕುದಾರನಾಗಿದ್ದು, ಒಡೆಯನು ತನಗಿಷ್ಟ ಬಂದಂತೆ ಅದನ್ನು ಉಪಯೋಗಿಸಬಹುದೆಂಬ ಅಪ್ಪಟ ಬಂಡವಾಳ ಶಾಹಿ ವಿಚಾರ ಧಾರೆಯನ್ನೂ ಇಸ್ಲಾಮ್ ತಿರಸ್ಕರಿಸುತ್ತದೆ. ಅದು ತನ್ನ ಸಂಪತ್ತೆಲ್ಲವೂ ಸ್ವಸಾಮರ್ಥ್ಯದ ಫಲವೆಂದು ವಾದಿಸಿ, ದೇವಾನುಗ್ರಹವನ್ನು ಖಂಡಿಸಿ ತನ್ನ ಜನತೆಯೊಂದಿಗಿನ ಕರ್ತವ್ಯವನ್ನು ಮರೆತು ದೇವನ ಶಿಕ್ಷೆಗೆ ಪಾತ್ರನಾದ ಖಾರೂನ್‌ನ ವಿಚಾರಧಾರೆಯಾಗಿದೆ.

ಈ ವಿಚಾರ ಧಾರೆಯನ್ನು ಇಸ್ಲಾಮ್ ಸೈದ್ಧಾಂತಿಕವಾಗಿ ವಿರೋಧಿಸುತ್ತದೆ. ಇಸ್ಲಾಮಿನ ದೃಷ್ಟಿಯಲ್ಲಿ ಅಲ್ಲಾಹನೇ ಸಂಪತ್ತಿನ ನೈಜ ಒಡೆಯನಾಗಿದ್ದಾನೆ. ಆತನೇ ಅದರ ಸೃಷ್ಟಿಕರ್ತ ಮತ್ತು ವಿಧಾತ. ಮಾನವನಿಗೆ ಅದರ ಹೊಣೆಯನ್ನು ವಹಿಸಿಕೊಟ್ಟು ಆತನನ್ನು ಅದರ ಪ್ರತಿನಿಧಿಯಾಗಿ ನೇಮಿಸಲಾಗಿದೆ. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಆತನು ಸಂಪತ್ತಿನ ನೈಜ ಒಡೆಯನನ್ನು ಪ್ರತಿನಿಧಿಸುವ ವ್ಯಕ್ತಿಯಾಗಿದ್ದಾನೆ- ನೈಜ ಒಡೆಯನಾದ ದೇವನ ಆಜ್ಞೆ ಮತ್ತು ಇಂಗಿತದಂತೆ ಸಂಪತ್ತನ್ನು ಸಂರಕ್ಷಿಸಿ ಕಾರ್ಯನಿರ್ವಹಿಸಲಿಕ್ಕಾಗಿ ನೇಮಕಗೊಂಡ ಪ್ರತಿನಿಧಿ. ಅಲ್ಲಾಹನು ಹೇಳಿರುವನು:

"ಅವನು ಯಾವ ವಸ್ತುಗಳ ಮೇಲೆ ನಿಮ್ಮನ್ನು ಪ್ರತಿನಿಧಿಯಾಗಿ ಮಾಡಿರುವನೋ ಅವುಗಳಿಂದ ಖರ್ಚುಮಾಡಿರಿ." (ಅಲ್ ಹದೀದ್: 7)

"ಅಲ್ಲಾಹನು ನಿಮಗೆ ನೀಡಿರುವ ಸಂಪತ್ತಿನಿಂದ ಖರ್ಚು ಮಾಡಿರಿ." (ಅನ್ನೂರ್:33)

"ನಾವು ನಿಮಗೊದಗಿಸಿರುವ ಸೊತ್ತು ವಿತ್ತಗಳಿಂದ ಖರ್ಚು ಮಾಡಿರಿ."

(ಅಲ್ ಬಕರಃ:254)

ವಸ್ತುತಃ ಶ್ರೀಮಂತನ ವಶದಲ್ಲಿರುವ ಸಂಪತ್ತು ಅಲ್ಲಾಹನದ್ದೆಂದು ಈ ವಾಕ್ಯಗಳಿಂದ ವ್ಯಕ್ತವಾಗುತ್ತದೆ. ಅಲ್ಲಾಹನು ಅದನ್ನು ಆತನಿಗೆ ಕೇವಲ ವಹಿಸಿ ಕೊಟ್ಟಿರುತ್ತಾನೆ. ಅದರಲ್ಲಿ ನಿರ್ದಿಷ್ಟ ಪಾಲು ಇತರ ಕೆಲವರ ಹಕ್ಕೆಂದೂ ಅಲ್ಲಾಹ್ ಸಾರಿದ್ದಾನೆ. ಪ್ರಸ್ತುತಃ ಪಾಲು ಹಕ್ಕುದಾರರಿಗೆ ಸಿಗಲಿಕ್ಕಾಗಿ ಇಸ್ಲಾಮ್ ಕೇವಲ ಉಪದೇಶ, ಬೆದರಿಕೆ, ಆಮಿಷ ಅಥವಾ ದಾನ ನೀಡುವ ಕರೆ ನೀಡಿ ಸುಮ್ಮನಿರಲಿಲ್ಲ. ಏಕೆಂದರೆ ಅವು ಕಠೋರ ಹೃದಯ, ದುರಾಸೆ ಮತ್ತು ದುರ್ಬಲ ವಿಶ್ವಾಸವಿರುವಾಗ ಪರಿಣಾಮಕಾರಿಯಾಗುವುದಿಲ್ಲ. ಆದ್ದರಿಂದ ನಿರ್ದಿಷ್ಟಪಾಲನ್ನು, ಶ್ರೀಮಂತರಿಂದ ವಸೂಲು ಮಾಡಿ ಬಡವರಿಗೆ ವಿತರಣೆ ಮಾಡುವ ಶಾಸನಾತ್ಮಕ ಅಧಿಕಾರವನ್ನೂ ಇಸ್ಲಾಮ್, ಸರಕಾರಗಳಿಗೆ ನೀಡುತ್ತದೆ. ದೇವ ಕಾನೂನುಗಳನ್ನು ಯಾರಾದರೂ ಉಲ್ಲಂಘಿಸಿದರೆ

ಅವರು ಸ್ವತಃ ಅಥವಾ ನಿರ್ಬಂಧಿತರಾಗಿ ಅದಕ್ಕೆ ಬದ್ಧರಾಗುವ ತನಕ ಇಸ್ಲಾಮ್ ಅವರೊಂದಿಗೆ ಹೋರಾಡುವುದು.

ಇಲ್ಲಿ ಇಸ್ಲಾಮ್, ಎರಡು ಒಳಿತುಗಳನ್ನು ಸಂಯೋಜಿಸಿ ಎರಡು ಮಾರ್ಗಗಳನ್ನು ಅವಲಂಬಿಸಿದೆ- 1. ಧಾರ್ಮಿಕ ಉಪದೇಶ ಮತ್ತು ನೈತಿಕ ಪ್ರೇರಣೆ. 2. ಕಾನೂನು ಕ್ರಮ ಮತ್ತು ಸರಕಾರದ ಒತ್ತಡ. ಕುರ್‌ಆನ್‌ಗೆ ಮಣಿಯದವರಿಗೆ ಅಲ್ಲಾಹನು ಅಧಿಕಾರ ದಂಡವನ್ನು ತೋರಿಸುತ್ತಾನೆ. ಬಂಡವಾಳಶಾಹಿತ್ವ ಮತ್ತು ಬಂಡವಾಳಶಾಹೀ ಮೌಲ್ಯಗಳ ಬುನಾದಿಯಲ್ಲಿದ್ದರೂ ಸ್ವತಃ ಸೋಶಿಯಲಿಸ್ಟ್ ವೈಶಿಷ್ಟ್ಯ ಹೊಂದಿರುವ ಪ್ರಜಾಸತ್ತಾತ್ಮಕ ಸೋಶಿಯಲಿಝಮ್ ಪ್ರತಿಪಾದಿಸುವ 'ಸಾಮಾಜಿಕ ನಿಯಂತ್ರಣ' ಮತ್ತು 'ಸಾಮಾಜಿಕ ಭದ್ರತೆ'ಇತ್ಯಾದಿ ತತ್ತ್ವಗಳ ಜ್ಯಾರಿಗೆ ಸರಕಾರದ ಹಸ್ತಕ್ಷೇಪ ಕಡ್ಡಾಯವಾಗಿದೆ. ಆದರೆ ಇಸ್ಲಾಮಿನ ಈ ವ್ಯವಸ್ಥೆಯು ಅವುಗಳಿಗಿಂತ ಎಷ್ಟೋ ಪಾಲು ಉತ್ತಮ ಮತ್ತು ಉಪಯುಕ್ತವಾಗಿದೆ. ಹಾಗೆಯೇ ಇತರ ವ್ಯವಸ್ಥೆಗಳಿಗಿಲ್ಲದ ಮತ್ತು ಕೇವಲ ಇಸ್ಲಾಮಿಗೆ ಮಾತ್ರ ಸೀಮಿತವಾಗಿರುವ ಸ್ವಂತ ವೈಶಿಷ್ಟ್ಯಗಳು ಅದನ್ನು ಆಧುನಿಕ ತತ್ತ್ವ ಸಿದ್ಧಾಂತಗಳಿಗಿಂತ ಶ್ರೇಷ್ಠ ಮತ್ತು ಉತ್ಕೃಷ್ಟಗೊಳಿಸುತ್ತದೆ.

ಆ ಪೈಕಿ ಇಸ್ಲಾಮಿನ ಪ್ರಾಚೀನತೆಯು ಪ್ರಮುಖವಾಗಿದೆ. ಅದು ಹದಿನಾಲ್ಕು ಶತಮಾನಗಳ ಹಿಂದೆಯೇ ಬಡವರ ಹಕ್ಕುಗಳನ್ನು ನಿರ್ಣಯಿಸಿ ಅದರ ಈಡೇರಿಕೆಗಾಗಿ ಹೋರಾಟ ನಡೆಸಿತು. ಈ ಹಕ್ಕುಗಳನ್ನು ಮೂಲತತ್ತ್ವಗಳಲ್ಲಿ ಸೇರಿಸಿರುವುದು ಅದರ ಇನ್ನೊಂದು ವೈಶಿಷ್ಟ್ಯವಾಗಿದೆ. ಅವುಗಳನ್ನು ಕ್ರಾಂತಿಗಳು ಅಥವಾ ಸಾಮಾಜಿಕ ಒತ್ತಡಗಳ ಬಳಿಕ ಹೊಲಿದು ಸೇರಿಸಲಿಲ್ಲ. ಅವು ಇಸ್ಲಾಮೀ ಕಾನೂನು ಸಂಹಿತೆಯ ಕಂಬ ಮತ್ತು ಬುನಾದಿಯಾಗಿದೆ. ಅವುಗಳ ಚಿರಂತನ ಮತ್ತು ಸ್ಥಾಯೀ ಗುಣವು ಮೂರನೇಯ ವೈಶಿಷ್ಟ್ಯವಾಗಿದೆ. ಒಂದು ನಿರ್ದಿಷ್ಟ ಪರಿಸ್ಥಿತಿಯಲ್ಲಿ ಸೇರಿಸಿದ ಅಂಶಗಳನ್ನು ಹೊಸತೊಂದು ಪರಿಸ್ಥಿತಿಯಲ್ಲಿ ಕೈಬಿಡಬೇಕಾಗುತ್ತದೆ. ಆದರೆ ಇಸ್ಲಾಮ್, ಲೋಕಾಂತ್ಯದ ವರೆಗೆ ಬದಲಾವಣೆ ಅಥವಾ ಅನೂರ್ಜಿತಗೊಳಿಸಲಾಗದಂತಹ ಸುಭದ್ರ ಮತ್ತು ಶಾಶ್ವತ ದೇವ ಸಂಹಿತೆಯಾಗಿದೆ. ನಾಲ್ಕನೇಯದಾಗಿ ಅದು, ಯುಕ್ತಿಪೂರ್ಣನೂ ಸರ್ವಜ್ಞನೂ ಆದ ದೇವನ ವ್ಯವಸ್ಥೆಗೆ ಮಾತ್ರ ಅರ್ಹವಾಗಿರುವ ಸಮಗ್ರತೆ ಮತ್ತು ಸಂಪೂರ್ಣತೆಯನ್ನು ಹೊಂದಿದೆ. ಅದು ಮಾನವನ ಅಂದಾಜು ಮತ್ತು ವಿಶ್ಲೇಷಣೆಗಳನ್ನು ಸ್ವಾಭಾವಿಕವಾಗಿ ವಿಕಲ ಗೊಳಿಸಬಹುದಾದ ಸಹಜ ಇಷ್ಟಾನಿಷ್ಟಗಳ ಪ್ರಭಾವದಿಂದ ಮುಕ್ತವಾಗಿದೆ.

ಈ ಸಮಗ್ರತೆಯು ಇಲ್ಲಿ ಎರಡು ವಿಷಯಗಳಿಂದ ವ್ಯಕ್ತವಾಗುತ್ತದೆ-

1. ಆಧುನಿಕ ಪಾಶ್ಚಾತ್ಯ ಪದ್ಧತಿಯು ಪ್ರತಿಪಾದಿಸುವ ಜೀವ ವಿಮೆಯಲ್ಲಿ, ಕಾರ್ಮಿಕನು ಪಾವತಿಸುವ ಹಣದ ಪ್ರಮಾಣದನ್ವಯ ಪಾಲುದಾರನಿಗೆ ಪ್ರತಿಫಲ ನೀಡುವ ನೀತಿಯು ಆಧಾರವಾಗಿದೆ. ಕಾರ್ಮಿಕನ ಬೇಡಿಕೆಗಳು ಅದಕ್ಕೆ ಆಧಾರವಾಗಿಲ್ಲ. ಅಧಿಕ ಹಣವನ್ನು ಪಾವತಿಸುವವರಿಗೆ ಅಧಿಕ ಪರಿಹಾರ ದೊರೆಯುತ್ತದೆ. ಕಡಿಮೆ ಹಣ ಪಾವತಿಸುವವರಿಗೆ -

ಅವರ ಬೇಡಿಕೆಗಳು ಎಷ್ಟೇ ದೊಡ್ಡದಾಗಿದ್ದರೂ- ಅದರ ನಿಷ್ಪತ್ತಿಯಲ್ಲಿ ಲಭಿಸುವುದು. ಆದರೆ ಇಸ್ಲಾಮ್ ರೂಪಿಸಿರುವ ಸಾಮಾಜಿಕ ಭದ್ರತೆಯ ವ್ಯವಸ್ಥೆಗೆ ಪಾಲುದಾರನು ಪಾವತಿಸಿದ ಹಣದ ನಿಷ್ಪತ್ತಿಯಲ್ಲಿ ಪರಿಹಾರ ನೀಡುವ ನೀತಿ ಆಧಾರವಾಗಿಲ್ಲ. ಅದು ಬೇಡಿಕೆಗಳ ಈಡೇರಿಕೆಗೆ ಅಗತ್ಯವಿರುವ ಪ್ರಮಾಣದಲ್ಲಿ ಆರ್ಥಿಕ ನೆರವು ನೀಡುತ್ತದೆ.

2. ಸಾಮಾಜಿಕ ಭದ್ರತೆಯೆಂಬ ಪಾಶ್ಚಾತ್ಯ ನೀತಿಯಲ್ಲಿ ಎರಡು ದೋಷಗಳಿವೆ- a) ಅದರಲ್ಲಿ ಸಮಾಜದ ಎಲ್ಲರೂ ಸೇರಿಲ್ಲ. b) ಝಕಾತ್ ಮತ್ತಿತರ ವ್ಯವಸ್ಥೆಯಲ್ಲಿ ಇಸ್ಲಾಮ್ ನಿರ್ಣಯಿಸಿರುವಂತಹ ನಿರ್ದಿಷ್ಟ ಅಂಶವನ್ನು ಅದು ನಿಗದಿ ಪಡಿಸಿಲ್ಲ. (ಝಕಾತ್‌ನ ವಿವರಣೆ ಮುಂದೆ ಬರಲಿದೆ) ಅದು ಬಹಳ ಪರಿಮಿತ ಆರ್ಥಿಕ ನೆರವು ನೀಡಿ ಕೈ ತೊಳೆಯುತ್ತದೆ. ಅದರಿಂದ ಬೇಡಿಕೆ ಈಡೇರಬಹುದು ಅಥವಾ ಈಡೇರದಿರಲೂ ಬಹುದು.

## ಕಮ್ಯೂನಿಝಮ್

ಮಾರ್ಕ್ಸಿಸ್ಟ್ ಸಿದ್ಧಾಂತವು, ಬಡತನದ ನಿರ್ಮೂಲನಕ್ಕೆ ಈ ಕೆಳಗಿನ ಮಾರ್ಗವು ಅನಿವಾರ್ಯವೆಂದು ಪ್ರತಿಪಾದಿಸುತ್ತದೆ: ಶ್ರೀಮಂತ ವರ್ಗವನ್ನು ಸಂಪೂರ್ಣವಾಗಿ ಅಳಿಸಬೇಕು, ಅವರ ಸಂಪತ್ತನ್ನು ಜಪ್ತಿ ಮಾಡಬೇಕು, ಖಾಸಗೀ ಒಡೆತನವನ್ನು ರದ್ದು ಪಡಿಸಬೇಕು, ಬಡವರಲ್ಲಿ ಶ್ರೀಮಂತರ ವಿರುದ್ಧ ವೈರ ವಿದ್ವೇಷವನ್ನು ಪ್ರಚೋದಿಸಿ ಅವರನ್ನು ಸಂಘಟಿಸಬೇಕು, ಅವರು ಶ್ರೀಮಂತರ ವಿರುದ್ಧ ವರ್ಗ ಸಂಘರ್ಷ ನಡೆಸಬೇಕು. ಕಾರ್ಮಿಕರು ಗೆದ್ದು ಪ್ರೋಲಿಟೇರಿಯನ್‌ನ ಆಧಿಪತ್ಯ ಸ್ಥಾಪನೆಯಾಗುವ ತನಕ ವರ್ಗ ಹೋರಾಟ ಮುಂದುವರಿಸಬೇಕು. ಈ ದೃಷ್ಟಿಕೋನವನ್ನು ಇಸ್ಲಾಮ್ ಆಮೂಲಾಗ್ರವಾಗಿ ವಿರೋಧಿಸುತ್ತದೆ. ಅವು ಇಸ್ಲಾಮಿನ ಮೂಲ ತತ್ತ್ವಗಳಿಗೆ ವಿರುದ್ಧವಾಗಿದೆ.

1. ಆರ್ಥಿಕ ಸುಸ್ಥಿಯು ಕೆಲವರನ್ನು ಕೆಡಿಸಿ ದುಷ್ಟರನ್ನಾಗಿ ಮಾಡಿರಬಹುದು. ಬಡವರ-ನಿರ್ಗತಿಕರ ಹಕ್ಕುಗಳನ್ನು ಅವರು ದಮನಿಸಿರಬಹುದು. ಆದರೆ ಶ್ರೀಮಂತರಲ್ಲಿ ದೇವಾನುಗ್ರಹಕ್ಕೆ ಕೃತಜ್ಞತೆ ಸಲ್ಲಿಸುವ, ದೇವ ಮತ್ತು ಜನರೊಂದಿಗಿನ ಕರ್ತವ್ಯಗಳನ್ನು ನಿರ್ವಹಿಸುವ ಇನ್ನೊಂದು ವರ್ಗ ಇದೆ. ಆದ್ದರಿಂದ, ಸಮಾಜದಲ್ಲಿರುವ ಕೆಲವು ಮಂದಿಯ ಅಪರಾಧಕ್ಕಾಗಿ ಇಡೀ ಸಮಾಜವೇ ಶಿಕ್ಷಿಸಲ್ಪಡಬೇಕೆಂದು ಇಸ್ಲಾಮ್ ಭಾವಿಸುವುದಿಲ್ಲ. ಪ್ರತಿಯೊಬ್ಬನೂ ತನ್ನ ಮತ್ತು ತನ್ನ ಆಶ್ರಯದಲ್ಲಿರುವವರ ಬಗ್ಗೆ ಮಾತ್ರ ಹೊಣೆಗಾರನಾಗಿರುತ್ತಾನೆ.

"ಪ್ರತಿಯೊಬ್ಬನೂ ತನ್ನ ದುಡಿಮೆಯ ಬದಲಿಗೆ ಅಡವಿರಿಸಲ್ಪಟ್ಟಿದ್ದಾನೆ." (ಅತ್ತೂರ್:21)

ಪ್ರತಿಯೊಬ್ಬನೂ ತಾನು ಸಂಪಾದಿಸುತ್ತಿರುವುದಕ್ಕೆ ತಾನೇ ಹೊಣೆಗಾರನಾಗಿರುತ್ತಾನೆ. ಯಾವ ಹೊರೆ ಹೊರುವಾತನೂ ಇನ್ನೊಬ್ಬನ ಹೊರೆಯನ್ನು ಹೊರುವುದಿಲ್ಲ.

(ಅನ್‌ಆಮ್: 164)

ಈ ತತ್ತ್ವಗಳನ್ನು ಹಿಂದಿನ ಕಾಲದ ಧರ್ಮಗಳು ಅಂಗೀಕರಿಸಿದ್ದುವೆಂದು ಕುರ್‌ಆನ್‌ಸ್ಪಷ್ಟಪಡಿಸಿದೆ.

ಯಾವ ಹೊರೆ ಹೊರುವಾತನೂ ಇನ್ನೊಬ್ಬನ ಹೊರೆ ಹೊರಲಾರನು. ಮಾನವನಿಗೆ ತಾನೇ ಪರಿಶ್ರಮಿಸಿದುದರ ಹೊರತು ಬೇರೇನೂ ದೊರೆಯುವುದಿಲ್ಲ- ಎಂಬಿತ್ಯಾದಿ ಮೂಸಾರ ಮತ್ತು ನಿಷ್ಠೆಯಿಂದ ತನ್ನ ಹೊಣೆ ನಿರ್ವಹಿಸಿದ ಇಬ್ರಾಹೀಮ್‌ರ ಗ್ರಂಥಗಳಲ್ಲಿ ತಿಳಿಸಲಾದ ವಿಷಯಗಳ ಬಗ್ಗೆ ಅವನಿಗೆ ಸುದ್ದಿ ತಲಪಿಲ್ಲವೇ? (ಅನ್ನಜ್ಮ್:36-39)

ಇದು ಎಲ್ಲ ನಿಷ್ಕಳಂಕ ಕಾನೂನು ಸಂಹಿತೆಗಳೂ ನಿಷ್ಪಕ್ಷಮತಿಗಳೂ ಒಪ್ಪಿರುವ ವಿಷಯಗಳಾಗಿವೆ.

2. ಇಸ್ಲಾಮ್ ಖಾಸಗಿ ಒಡೆತನವನ್ನು ಅಂಗೀಕರಿಸುತ್ತದೆ. ಅದರಲ್ಲಿ ಸಹಜ ಮತ್ತು ನೈಸರ್ಗಿಕ ಬಯಕೆಯೊಂದರ ಈಡೇರಿಕೆಯಿದೆ. ಸಾಮಾಜಿಕ ಪ್ರಗತಿ ಮತ್ತು ಆರ್ಥಿಕ ಬೆಳವಣಿಗೆಯಲ್ಲಿ ಖಾಸಗಿ ಒಡೆತನದ ಪಾತ್ರವನ್ನು ಇಸ್ಲಾಮ್ ಪರಿಗಣಿಸುತ್ತದೆ. ಮಾತ್ರವಲ್ಲ, ಅದು ರಾಜಕೀಯ ಮತ್ತು ನಾಗರಿಕ ಸ್ವಾತಂತ್ರ್ಯದ ಲೌಕಿಕ ಉಪಾಧಿಯಾಗಿದೆ. ಆದರೆ, ಖಾಸಗಿ ಒಡೆತನಕ್ಕೆ ಇಸ್ಲಾಮ್ ಕೆಲವು ಮಿತಿ ಮತ್ತು ನಿಯಂತ್ರಣಗಳನ್ನು ಏರ್ಪಡಿಸಿದೆ. (ವಿವರ ಮುಂದೆ ಬರಲಿದೆ) ಒಟ್ಟಿನಲ್ಲಿ ಇಸ್ಲಾಮ್ ಖಾಸಗಿ ಒಡೆತನವನ್ನು ಸಂರಕ್ಷಿಸಿ ಗೌರವಿಸುತ್ತದೆ. ಅದನ್ನು ಆರ್ಥಿಕ ವ್ಯವಸ್ಥೆಯ ಮೂಲವೆಂದು ಪರಿಗಣಿಸುತ್ತದೆ.

ಖಾಸಗಿ ಒಡೆತನವನ್ನು ಯಾರಾದರೂ ದುರುಪಯೋಗಿಸಿದರೆ ಅಥವಾ ಅದರ ಕಾನೂನು ಮಿತಿಗಳನ್ನು ಉಲ್ಲಂಘಿಸಿದರೆ, ಆ ಇಡೀ ನೀತಿಯೇ ದೋಷಪೂರ್ಣವೆನ್ನಲಾಗುವುದಿಲ್ಲ. ದೋಷವು ಮಾನವನ ಮನಸ್ಸಿನಲ್ಲಿಯೇ ಇರುತ್ತದೆ. ಮನಸ್ಸು ಉತ್ತಮವಾಗಿದ್ದರೆ ಒಡೆತನದಲ್ಲಿರುವ ಹಣವನ್ನೂ ಉತ್ತಮ ರೀತಿಯಲ್ಲಿ ವ್ಯಯಿಸಬಹುದು. "ಸಜ್ಜನ ದಾಸನ ಒಳ್ಳೆಯ ಹಣವು ಎಷ್ಟೊಂದು ಉತ್ತಮ" ಎಂಬ ಪ್ರವಾದಿವಚನದ ತಾತ್ಪರ್ಯವೂ ಅದೇ ಆಗಿದೆ. ಆದ್ದರಿಂದಲೇ ಇಸ್ಲಾಮ್ ಧರ್ಮವು ವ್ಯಕ್ತಿಯ ಸುಧಾರಣೆ ಮತ್ತು ಆಂತರಿಕ ಶುದ್ಧಿಗೆ ಹೆಚ್ಚಿನ ಪ್ರಾಮುಖ್ಯ ನೀಡಿದೆ. ಅಗತ್ಯ ಕಂಡರೆ ಅದಕ್ಕಾಗಿ ಕಾನೂನು ಮತ್ತು ಅಧಿಕಾರವನ್ನೂ ಬಳಸುತ್ತದೆ.

3. ವ್ಯಕ್ತಿ ಮತ್ತು ಸಮಾಜದ ಪರಸ್ಪರ ಸಂಬಂಧಗಳನ್ನು ಸಹಕಾರ ಮತ್ತು ಸಹೋದರತೆಯ ಬುನಾದಿಯಲ್ಲಿ ಸುಭದ್ರಗೊಳಿಸಬೇಕೆಂದು ಇಸ್ಲಾಮ್ ಬಯಸುತ್ತದೆ. ಅದು ವ್ಯಕ್ತಿ ಮತ್ತು ಸಮಾಜಗಳಲ್ಲಿ ಪರಸ್ಪರ ವೈರ, ವಿದ್ವೇಷವಿರುವುದನ್ನು ಮೆಚ್ಚುವುದಿಲ್ಲ. ಬೆಂಕಿಯು ಸೌದೆಯನ್ನು ನಾಶಪಡಿಸುವಂತೆ ವೈರ ವಿದ್ವೇಷಗಳು ಸತ್ಕರ್ಮಗಳನ್ನು ನಾಶ ಪಡಿಸುವುದೆಂದು ಅದು ಬೋಧಿಸುತ್ತದೆ. ಪ್ರವಾದಿಯವರು(ಸ) ಅದನ್ನು ಜನ ಸಮುದಾಯಗಳಿಗೆ ಬಾಧಿಸುವ ರೋಗವೆಂದು ವರ್ಣಿಸಿದ್ದಾರೆ. ಜನರ ಪರಸ್ಪರ ಸಂಬಂಧಗಳಲ್ಲಿ ಬಿರುಕುಂಟಾದರೆ, ಮಧ್ಯೆ ಪ್ರವೇಶಿಸಿ ಸಮಸ್ಯೆಯನ್ನು ಬಗೆಹರಿಸಿ ಒಡಕನ್ನು ಸರಿಪಡಿಸಬೇಕಾದುದು ಸಮಾಜದ ಕರ್ತವ್ಯವೆಂದು ಇಸ್ಲಾಮ್ ಆದೇಶಿಸಿದೆ. ಅದನ್ನು ನಮಾಝ್, ಉಪವಾಸ ವ್ರತಗಳಿಗಿಂತ ಶ್ರೇಷ್ಠವಾದ ಕರ್ಮವೆಂದು ಪರಿಗಣಿಸುತ್ತದೆ. ಏಕೆಂದರೆ ಅದು, ಸತ್ಯವಿಶ್ವಾಸದ ಮತ್ತು ಇಸ್ಲಾಮ್ ಕರ್ತವ್ಯಗೊಳಿಸಿರುವ ಸಹೋದರತ್ವಕ್ಕೆ ಅನಿವಾರ್ಯವಾಗಿದೆ.

"ಸತ್ಯವಿಶ್ವಾಸಿಗಳು ಪರಸ್ಪರ ಸಹೋದರರು; ಸಹೋದರರ ಪರಸ್ಪರ ಸಂಬಂಧಗಳನ್ನು

ಉತ್ತಮ ಪಡಿಸಿರಿ."

ಈ ಹಿನ್ನೆಲೆಯಲ್ಲಿ ಬಡವರು ಮತ್ತು ಶ್ರೀಮಂತರು ಅಥವಾ ಇತರ ಜನ ವಿಭಾಗಗಳ ಮಧ್ಯೆ ವೈರ-ವಿದ್ವೇಷ, ಸಂಘರ್ಷಗಳನ್ನು ಬೆಳೆಸುವ ವಿಚಾರ ಧಾರೆಗಳನ್ನು ಇಸ್ಲಾಮ್ ಸಂಪೂರ್ಣವಾಗಿ ತಿರಸ್ಕರಿಸುತ್ತದೆ. ಸಹೋದರತೆಯು ಇಸ್ಲಾಮಿನ ಅನಿವಾರ್ಯ ಫಲ ಮತ್ತು ಸತ್ಯವಿಶ್ವಾಸದ ಒಡನಾಡಿಯಾಗಿರುತ್ತಾ ಅವುಗಳನ್ನು ತಿರಸ್ಕರಿಸದಿರಲು ಸಾಧ್ಯವಿದೆಯೇ? ಅಬ್ದುರ್ರಹ್ಮಾನ್ ಬಿನ್ ಔಫ್, ಉಸ್ಮಾನ್ ಬಿನ್ ಅಫ್ಫಾನ್ ಮುಂತಾದ ಶ್ರೀಮಂತ ಸಹಾಬಿಗಳೂ ಅಬೂ ಹುರೈರಾ, ಅಬೂದರ್ರ್, ಬಿಲಾಲ್‌ರಂತಹ ಬಡ ಸಹಾಬಿಗಳೂ ಸಹೋದರ ವಾತ್ಸಲ್ಯದಿಂದ ಬಾಳಿದರೆಂದು ಇತಿಹಾಸವು ಕಲಿಸುತ್ತದೆ. ಬಡವನು, ಶ್ರೀಮಂತನನ್ನು ದ್ವೇಷಿಸಲಿಲ್ಲ. ಶ್ರೀಮಂತನು ಬಡವನ ಮೇಲೆ ದಬ್ಬಾಳಿಕೆ ನಡೆಸಲಿಲ್ಲ. ಇಸ್ಲಾಮ್, ಅದರ ವಿಶಾಲತೆಯಲ್ಲಿ ಎಲ್ಲರನ್ನೂ ಒಂದು ಗೂಡಿಸಿತು. ದೇವಾಜ್ಞೆಯಂತೆ ಅವರೆಲ್ಲರೂ ಸಹೋದರರಾಗಿದ್ದರು.

4. ಒಂದು ಸಮಸ್ಯೆಯ ಪರಿಹಾರವು ಇನ್ನೊಂದು ಗಂಭೀರ ಸಮಸ್ಯೆಗೆ ಕಾರಣವಾಗುವಂತಹ ಪರಿಹಾರವನ್ನು ಇಸ್ಲಾಮ್ ಅಂಗೀಕರಿಸುವುದಿಲ್ಲ. ಕಮ್ಯುನಿಸ್ಟರು ಮತ್ತು ಸೋಶಿಯಲಿಷ್ಟರು, ಬಡತನ ಮತ್ತು ಆರ್ಥಿಕ ಸಮಾನತೆಗಳಿಗೆ ಅಂತಹ ಪರಿಹಾರವನ್ನು ಸೂಚಿಸುತ್ತಿದ್ದಾರೆ. ಹಾಗೆಯೇ ಬಡತನದ ನಿರ್ಮೂಲನಕ್ಕಾಗಿ ಸಮಾಜವು ಅದರ ಅಮೂಲ್ಯ ಸ್ವಾತಂತ್ರ್ಯವನ್ನು ಬಲಿ ನೀಡಬೇಕು. ಸಂಪತ್ತು ಮತ್ತು ಆಹಾರವನ್ನು ನಿಯಂತ್ರಿಸುವ ನಿರಂಕುಶ ಪ್ರೋಲಿಟೇರಿಯಲ್ ಆಳ್ವಿಕೆಯಲ್ಲಿ ಬಾಳಬೇಕು. ಉದ್ಯೋಗ, ಸಂಪಾದನೆ ಮತ್ತು ವಹಿವಾಟುಗಳಿಗೆ ಅದು ಸ್ವಾತಂತ್ರ್ಯ ನೀಡುವುದಿಲ್ಲ. ಇನ್ನೊಂದರ್ಥದಲ್ಲಿ ಅದು ಇಡೀ ಸಮಾಜವನ್ನು ಗುಲಾಮಗೊಳಿಸುತ್ತದೆ. ಸಮಾಜದಲ್ಲಿ ಕೇವಲ ಒಬ್ಬನೇ ನಾಯಕನ ಪ್ರಾಬಲ್ಯವಿರುವುದು ಜೈಲು, ಸೇನೆ ಮತ್ತು ಪೊಲೀಸ್ ಬಲದಿಂದ ಜನರ ಮೇಲೆ ನಿರಂಕುಶಾಧಿಪತ್ಯವನ್ನು ಹೇರುವ ಕಾರ್ಮಿಕ ಪಕ್ಷವೇ ಆ ನಾಯಕ! ಅದರ ಸರ್ವಾಧಿಕಾರೀ ಬೆದರಿಕೆ ಮತ್ತು ಆಜ್ಞೆಗಳಿಗೆ ಮಣಿಯಬೇಕು ಮಾತ್ರವಲ್ಲ, ಅದಕ್ಕೆ ಬೆಂಬಲ ಮತ್ತು ಪ್ರೋತ್ಸಾಹ ನೀಡಲೂ ಜನರು ನಿರ್ಬಂಧಿತರಾಗುತ್ತಾರೆ. 'ಇಲ್ಲ'ವೆಂದು ಹೇಳುವುದಂತಿರಲಿ, 'ಯಾಕೆ' ಎಂದು ಪ್ರಶ್ನಿಸುವ ಧೈರ್ಯ ಕೂಡಾ ಅವರಿಗಿರಲಾರದು. ಖಾಸಗಿಯಾಗಿ ಏನೂ ಇಲ್ಲದಿರುವಾಗ, ತಮ್ಮ ಮತ್ತು ತಮ್ಮ ಸಂತಾನಗಳ ಜೀವನ ಸಂಪನ್ಮೂಲಗಳನ್ನು ಸ್ವಾಧೀನವಿರಿಸಿರುವವರ ವಿರುದ್ಧ ಬಾಯಿ ತೆರೆಯಲು ಅವರಿಗೆ ಸಾಧ್ಯವಾದೀತೇ? ಈ ಸ್ಥಿತಿಯನ್ನು ಕುರ್‌ಆನ್ ಉದಾಹರಣೆ ಸಹಿತ ವಿವರಿಸುವುದನ್ನು ನೋಡಿರಿ:

"ಒಬ್ಬನು ಗುಲಾಮನಾಗಿದ್ದು ಪರಾಧೀನನಾಗಿರುತ್ತಾನೆ. ಅವನಿಗೆ ಸ್ವಂತ ಅಧಿಕಾರವೇನೂ ಇಲ್ಲ. ಇನ್ನೊಬ್ಬನಿಗೆ ನಾವು ನಮ್ಮ ಕಡೆಯಿಂದ ಉತ್ತಮ ಜೀವನಾಧಾರವನ್ನು ನೀಡಿದ್ದೇವೆ ಅವನು ಅದರಿಂದ ರಹಸ್ಯವಾಗಿಯೂ ಬಹಿರಂಗವಾಗಿಯೂ ಚೆನ್ನಾಗಿ ಖರ್ಚು ಮಾಡುತ್ತಾನೆ ಇವರಿಬ್ಬರು ಸರಿಸಮಾನರಾಗಿರುವರೇ?" (ಅನ್ನಹ್ಲ್:75)

ಅನ್ಯರ ಅಧೀನದಲ್ಲಿರುವ ಗುಲಾಮನಲ್ಲಿ ಖಾಸಗಿಯಾಗಿ ಏನೂ ಇಲ್ಲದಿರುವುದರಿಂದಲೇ ಅವನಿಗೆ ಯಾವ ಸಾಮರ್ಥ್ಯವೂ ಇಲ್ಲವೆಂದು ವರ್ಣಿಸಲಾಗಿದೆ. ಏನಾದರೂ ಇರುತ್ತಿದ್ದರೆ ಅದನ್ನು ವ್ಯಯಿಸಿ ಏನಾದರೂ ಮಾಡುವ ಸಾಮರ್ಥ್ಯ ದೊರೆಯುತ್ತಿತ್ತು. ಆದರೆ, ಸ್ವತಂತ್ರನು ಕುರ್‌ಆನ್‌ನ ದೃಷ್ಟಿಯಲ್ಲಿ, ದೇವಾನುಗ್ರಹದಿಂದ ರಹಸ್ಯವಾಗಿಯೂ ಬಹಿರಂಗವಾಗಿಯೂ ವ್ಯಯಿಸುತ್ತಾನೆ. ಆತನು ಹಲವು ರೀತಿಯಿಂದ ಸ್ವಾಯತ್ತಗೊಳಿಸುತ್ತಾನೆ. ಸತ್ಯ ಸಂಧ, ಆತ್ಮಸಾಕ್ಷಿ ಮತ್ತು ಸತ್ಯವಿಶ್ವಾಸದ ಬೇಡಿಕೆಯನ್ವಯ ಗುಪ್ತವಾಗಿಯೂ ಬಹಿರಂಗವಾಗಿಯೂ ತನ್ನ ಸಂಪಾದನೆಯನ್ನು ಬಳಸುತ್ತಾನೆ.

5. ಕಮ್ಯುನಿಸ್ಟರು ಮತ್ತು ಸೋಶಿಯಲಿಷ್ಟರು, ಸಾಮೂಹಿಕ ಹಿತ ಮತ್ತು ಸಾಮೂಹಿಕ ಒಡೆತನದ ಹೆಸರಲ್ಲಿ ಸಮಾಜದ ಸ್ವಾತಂತ್ರ್ಯವನ್ನು ದಮನಿಸಿ ಅದಕ್ಕೆ ಕೋಳ ತೊಡಿಸಿ, ಯಂತ್ರೋಪಕರಣಗಳನ್ನು ಸಾರ್ವಜನಿಕ ಒಡೆತನಕ್ಕೆ ಒಳಪಡಿಸಿದರು. ಆದರೂ ಅವರಿಗೆ ಒಡೆತನದ ನಿರ್ಮೂಲನ ಅಥವಾ ಆ ಆಂದೋಲನಗಳ ಪ್ರಾರಂಭ ದೆಸೆಯಲ್ಲಿ ಪ್ರಚುರ ಪಡಿಸಿದ್ದಂತೆ ಬಡವರ ಜೀವನ ಮಟ್ಟವನ್ನು ಸುಧಾರಿಸಲು ಸಾಧ್ಯವಾಗಲಿಲ್ಲವೆಂಬುದು ವಿಚಿತ್ರವಾಗಿದೆ. ಅವರಿಗೆ ಶ್ರೀಮಂತರನ್ನು ಬಡವರನ್ನಾಗಿಸಲು ಸಾಧ್ಯವಾಯಿತು. ಆದರೆ ಬಡವರನ್ನು ಸಂಪನ್ನಗೊಳಿಸಲಾಗಲಿಲ್ಲ!

ಜೀವನ ಮಟ್ಟದ ಕುಸಿತ, ಜೀವನ ಸಂಪನ್ಮೂಲಗಳ ಕೊರತೆ ಮತ್ತು ಉತ್ಪಾದನಾರಂಗದ ಮಾಂದ್ಯವು ರಶ್ಯಾ, ಚೀನಾ ಮುಂತಾದ ಕಮ್ಯೂನಿಸ್ಟ್ ರಾಷ್ಟ್ರಗಳನ್ನು ಕಾಡುತ್ತಿದೆ. ಇದಕ್ಕೆ ತತ್ತ್ವ ಸಿದ್ಧಾಂತದ ವ್ಯವಹಾರ ದೋಷ ಕಾರಣವಲ್ಲ. ಅದು ಖಾಸಗೀ ಒಡೆತನವನ್ನು ವಿರೋಧಿಸಿ, ವ್ಯಕ್ತಿಯ ಪ್ರತಿಭೆ ಮತ್ತು ಪ್ರಾವೀಣ್ಯತೆಯನ್ನು ನಿಷ್ಫಲಗೊಳಿಸುವ ಸೈದ್ಧಾಂತಿಕ ದೌಲ್ಯಕ್ಕೆ ಸಂಬಂಧಿಸಿದ ಸ್ಥಿತಿಯಾಗಿದೆ. ಸಹಜ ಆಶೆ-ಅಭಿಲಾಷೆಗಳನ್ನೂ ಪ್ರೇರಣೆಗಳನ್ನೂ ಹತ್ತಿಕ್ಕುವ ಸಿದ್ಧಾಂತಗಳ ಸಹಜ ಪರಿಣಾಮವಾಗಿದೆ. ವ್ಯಕ್ತಿ ಸ್ವಾತಂತ್ರ್ಯದ ನಿರಂತರ ಬೆಂಬಲ ಮತ್ತು ಪ್ರೋತ್ಸಾಹವಿರುವ ಬಂಡವಾಳಶಾಹೀ ಪದ್ಧತಿಗೆ ಹೋಲಿಸಿದಾಗ ಸೋಶಿಯಲಿಸ್ಟ್ ರಾಷ್ಟ್ರಗಳ ಉತ್ಪಾದನಾ ಶಕ್ತಿ ಸ್ವಲ್ಪ ಕಡಿಮೆಯಿದೆ. ಅದಕ್ಕೆ ಅಲ್ಲಿನ ವ್ಯಕ್ತಿ ಸ್ವಾತಂತ್ರ್ಯದ ಪರಿಮಿತಿಯೇ ಪ್ರಮುಖ ಕಾರಣವಾಗಿದೆ. ಉತ್ಪಾದನಾ ರಂಗದಲ್ಲಾಗಬಹುದಾದ ಮಾಂದ್ಯದ ಬಗ್ಗೆ ಮಾರ್ಕ್ಸಿಸ್ಟ್ ಆಚಾರ್ಯರೇ ಭವಿಷ್ಯ ನುಡಿದಿದ್ದರು. ಆದ್ದರಿಂದ ಅವರು ಮಾರ್ಕ್ಸಿಝಮ್‌ನ ಮೂಲ ಸಿದ್ಧಾಂತಗಳಿಂದ ದೂರ ಸರಿದು ಈ ತನಕ ವಿರೋಧಿಸುತ್ತಿದ್ದ ಬಂಡವಾಳಶಾಹೀ ಸಿದ್ಧಾಂತಗಳತ್ತ ಮರಳಿ, ಉತ್ಪಾದನಾ ಶಕ್ತಿಯನ್ನು ಹೆಚ್ಚಿಸಲು ಪೇಚಾಡುತ್ತಿದ್ದಾರೆ.

6.ಮಾರ್ಕ್ಸಿಝಮ್, ಸಮಾಜದ ದುರ್ಬಲ ನಿರ್ಗತಿಕ ವರ್ಗಗಳನ್ನು ಗಮನಿಸುವುದಿಲ್ಲ. ಅದು ತನ್ನೆಲ್ಲ ಗಮನವನ್ನು ರೈತರು ಮತ್ತು ಕಾರ್ಮಿಕರಾದ ಪ್ರೋಲಿಟೇರಿಯಲ್‌ನಲ್ಲಿ ಮಾತ್ರ ಕೇಂದ್ರೀಕರಿಸುತ್ತದೆ. ಅವರನ್ನು ಬಳಸಿ ಪ್ರಚಲಿತ ವ್ಯವಸ್ಥೆಯನ್ನು ಬುಡಮೇಲುಗೊಳಿಸಿ ಇತರ ವರ್ಗಗಳನ್ನು ಅಳಿಸಿ ಹಾಕುವುದೇ ಅದರ ಧ್ಯೇಯವಾಗಿದೆ. ಹಾಗಾದರೆ, ಕಾರ್ಮಿಕರ ದುಡಿಮೆಗೆ ತಕ್ಕ ಪ್ರತಿಫಲ ನೀಡಿ, "ದುಡಿಯದವ ಹಸಿವೆಯಿಂದ ಸಾಯಲಿ" ಎಂಬ ತತ್ತ್ವದಂತೆ ಸಾಗುವ

ಮಾರ್ಕ್ಸಿಸ್ಟ್ ಸಮಾಜದಲ್ಲಿ ನಿರ್ಗತಿಕರು, ದುರ್ಬಲರು, ವಿಧವೆಯರು, ಮುದುಕರು ಹಾಗ ಮಾನಸಿಕವಾಗಿಯೂ ದೈಹಿಕವಾಗಿಯೂ ಅಂಗವಿಕಲರಾದವರ ಸ್ಥಿತಿ ಹೇಗಿದ್ದೀತು? ಯಾರೋ ಎಸೆಯುವ ರೊಟ್ಟಿ ಚೂರುಗಳ ಹೊರತು ಅವರಿಗೆ ಬೇರೇನು ದೊರೆತೀತು?

## ಸಾರಾಂಶ

ಕಳೆದ ಅಧ್ಯಾಯಗಳಲ್ಲಿ ಪ್ರತಿಪಾದಿಸಿದ ವಿಷಯಗಳನ್ನು ಹೀಗೆ ಸಂಕ್ಷೇಪಿಸಬಹುದು ಇಸ್ಲಾಮ್ ಬಡತನವನ್ನು ಬಗೆಹರಿಸ ಬೇಕಾದ ಸಮಸ್ಯೆಯೆಂದು ಪರಿಗಣಿಸಿದೆ. ಅದ ಮುಂಜಾಗ್ರತೆ ಮತ್ತು ಪ್ರತಿರೋಧ ಅಗತ್ಯವಿರುವ ವಿಪತ್ತಾಗಿದೆ. ಅದರ ಪರಿಹಾರ ಸಾಧ್ಯ ಅದಕ್ಕಾಗಿ ಹಣೆಬರಹ ಅಥವಾ ದೇವ ವಿಧಿಯ ವಿರುದ್ಧ ಹೋರಾಡಲು ಪ್ರಯತ್ನಿಸಬೇಕಾಗಿಲ್ಲ ಬಡತನವನ್ನು ಪಾವನವೆಂದು ತಿಳಿದು ಅದರ ಆಗಮನಕ್ಕಾಗಿ ಸಂತೋಷಪಟ್ಟು ಐಶ್ವರ್ಯವನ ಶಿಕ್ಷಾರ್ಹ ಪಾಪವೆಂದು ಭಾವಿಸುವುದನ್ನು ಇಸ್ಲಾಮ್ ಒಪ್ಪುವುದಿಲ್ಲ. ಬಡತನವನ ವಿಮೋಚನೆಯಿಲ್ಲದ ದೇವ ವಿಧಿಯೆಂದು ಭಾವಿಸಿ ಅದರಿಂದ ಸಂತೃಪ್ತರಾಗಬೇಕೆಂದ ಇಸ್ಲಾಮ್ ಅಪೇಕ್ಷಿಸುವುದಿಲ್ಲ. ವ್ಯಕ್ತಿಗಳು ಸ್ವಇಚ್ಛೆಯಿಂದ ನೀಡುವ ದಾನಧರ್ಮಗಳಿಂ ಮಾತ್ರ ಬಡತನ ನಿರ್ಮೂಲನವಾಗುವುದೆಂದು ಇಸ್ಲಾಮ್ ವಾದಿಸುವುದಿಲ್ಲ. ಬಡತನ ಹಾಗ ಶ್ರೀಮಂತರು ಮತ್ತು ಸರಕಾರಕ್ಕೆ ಬಡವರೊಂದಿಗಿರುವ ಹೊಣೆಯ ಬಗ್ಗೆ ಹಳೆಯ ಬಂಡವಾ ಶಾಹಿತ್ವವು ಅಂಗೀಕರಿಸಿದ ಧೋರಣೆ ಇಸ್ಲಾಮಿಗಿಲ್ಲ. ಆಧುನಿಕ ಬಂಡವಾಳಶಾಹೀ ಪದ್ಧ ಮತ್ತು ತತ್ಸಮಾನ ಸಿದ್ಧಾಂತಗಳು ತೋರಿಸುವ ಪರಿಹಾರೋಪಾಯಗಳು ಇಸ್ಲಾಮಿ ಅಂಗೀಕಾರಾರ್ಹವಲ್ಲ. ಶ್ರೀಮಂತರ ಸರ್ವನಾಶವೇ ಬಡತನಕ್ಕೆ ಪರಿಹಾರ, ಅದಕ್ಕಾ ಶ್ರೀಮಂತರು ಮತ್ತು ಬಡವರ ಮಧ್ಯೆ ವರ್ಗ ಸಂಘರ್ಷ ಅನಿವಾರ್ಯವೆಂದು ವಾದಿಸುವವರನ ಇಸ್ಲಾಮ್ ಬಲವಾಗಿ ವಿರೋಧಿಸುತ್ತದೆ.

ಮೇಲೆ ಹೇಳಿದ ತಪ್ಪು ದೃಷ್ಟಿಕೋನಗಳನ್ನೂ ಸಿದ್ಧಾಂತಗಳನ್ನೂ ವಿರೋಧಿಸು ಇಸ್ಲಾಮ್, ಬಡತನದ ನಿರ್ಮೂಲನಕ್ಕೆ ರಚನಾತ್ಮಕ ಮತ್ತು ವಾಸ್ತವಿಕ ಪ್ರಜ್ಞೆಂ ಬುನಾದಿಯಲ್ಲಿರುವ ಕೆಲವು ವ್ಯಾವಹಾರಿಕ ಆದೇಶಗಳನ್ನು ಸೂಚಿಸುತ್ತದೆ. ಮುಂದಿ ಅಧ್ಯಾಯಗಳಲ್ಲಿ ಅದನ್ನು ಓದಿರಿ.

6

# ಉದ್ಯೋಗದ ಮಹತ್ವ

ವಿಶ್ವಾಸ, ನೈತಿಕ ಪ್ರಜ್ಞೆ ಮತ್ತು ಕುಟುಂಬ ಸಂಬಂಧಗಳ ರಕ್ಷಣೆ; ಸಾಮಾಜಿಕ ಭದ್ರತೆ ಮತ್ತು ಸುರಕ್ಷಿತತೆ, ಮಾನವೀಯ ಸಹೋದರತೆ ಮತ್ತು ಪ್ರೀತಿಯನ್ನು ಬಲಪಡಿಸುವುದು ಇತ್ಯಾದಿಗಳಿಗಾಗಿ ಬಡತನದ ವಿರುದ್ಧ ಹೋರಾಟ ಮತ್ತು ಅದರ ತಡೆಗಾಗಿ ಪ್ರಯತ್ನ ಅಗತ್ಯವೆಂದು ಇಸ್ಲಾಮ್ ಭಾವಿಸುತ್ತದೆ. ಆದ್ದರಿಂದ ಜೀವನದ ಮೂಲ ಬೇಡಿಕೆಗಳನ್ನು ಕನಿಷ್ಠ ರೀತಿಯಲ್ಲಾದರೂ ಈಡೇರಿಸಿ ಪ್ರತಿಯೊಬ್ಬರಿಗೂ ಅರ್ಹವಾದ ರೀತಿಯಲ್ಲಿ ಬದುಕಲು ಅಗತ್ಯವಿರುವ ಆಹಾರ, ವಸತಿ, ಬಟ್ಟೆ ಬರೆ, ಉದ್ಯೋಗ ಸಲಕರಣೆಗಳು ಮತ್ತು ವಾಹನ ಸೌಲಭ್ಯಗಳನ್ನು ಗಳಿಸುವುದು ಸ್ವಂತ ಕರ್ತವ್ಯವೆಂದು ಅದು ಭಾವಿಸುತ್ತದೆ. ಅಲ್ಲಾಹನೊಂದಿಗಿನ ಕರ್ತವ್ಯಗಳ ಈಡೇರಿಕೆಗೆ ನೆರವಾಗುವ ಬಡತನ-ಸಂಕಷ್ಟಗಳಿಲ್ಲದ ಸರಾಸರಿ ಜೀವನಮಟ್ಟ ಎಲ್ಲರಿಗೂ ಇರಬೇಕು. ಇಸ್ಲಾಮೀ ಸಮಾಜದಲ್ಲಿ ಯಾರೊಬ್ಬರೂ- ದಿಮ್ಮಿ (ಮುಸ್ಲಿಮೇತರ ಪ್ರಜೆ) ಕೂಡಾ ಆಹಾರ, ಬಟ್ಟೆ, ಮನೆಯಿಲ್ಲದೆ, ವಿವಾಹಕ್ಕೆ ಗತಿಯಿಲ್ಲದೆ ಅಥವಾ ಕುಟುಂಬ ಜೀವನ ನಿರ್ವಹಿಸಲಾಗದಂತಹ ಸ್ಥಿತಿಯಲ್ಲಿ ಇರುವುದನ್ನು ಇಸ್ಲಾಮ್ ಸಹಿಸಲಾರದು. ಇಸ್ಲಾಮೀ ಕಲ್ಪನೆಯ ಕಲ್ಯಾಣ ರಾಷ್ಟ್ರ ಸ್ಥಾಪನೆಗೆ ಸೂಚಿಸಿರುವ ಮಾರ್ಗೋಪಾಯಗಳನ್ನು ನೋಡೋಣ.

ದುಡಿಮೆಯು ಇಸ್ಲಾಮೀ ಸಮಾಜದಲ್ಲಿ ಪ್ರತಿಯೊಬ್ಬರ ಕರ್ತವ್ಯವಾಗಿದೆ- "ನಿಮಗಾಗಿ ಭೂಮಿಯನ್ನು ಅಧೀನಗೊಳಿಸಿದವನು ಅವನೇ. ಅದರ ಹಾದಿಗಳಲ್ಲಿ ನಡೆದಾಡಿರಿ ಮತ್ತು ಅಲ್ಲಾಹನ ಅನ್ನವನ್ನು ಉಣ್ಣಿರಿ." (ಅಲ್‌ಮುಲ್ಕ್:15)

ಪ್ರತಿಯೊಬ್ಬರೂ ಭೂಮಿಯ ದಿಕ್ಕುಗಳಲ್ಲಿ ಸಂಚರಿಸಿ ಅಲ್ಲಾಹನು ಸಿದ್ಧಗೊಳಿಸಿರುವ ಆಹಾರ ಪದಾರ್ಥಗಳನ್ನು ಸಂಪಾದಿಸಬೇಕೆಂದು ಈ ವಾಕ್ಯದಲ್ಲಿ ಆದೇಶಿಸಲಾಗಿದೆ. ದುಡಿಮೆಯೇ ಬಡತನದ ವಿರುದ್ಧ ಪ್ರಮುಖ ಆಯುಧವಾಗಿದೆ. ಸಂಪಾದನೆಯ ಮೊದಲ ಉಪಾಧಿಯೂ ಆಗಿದೆ. ಮಾನವನಿಗೆ ಪ್ರಾತಿನಿಧ್ಯವಿರುವ ಭೂಮಿಯ ಪರಿಪಾಲನಾ ಮಾರ್ಗವೂ ಅದೇ ಆಗಿದೆ. ಪ್ರವಾದಿ ಸಾಲಿಹ್‌ರು(ಸ) ತಮ್ಮ ಸಮುದಾಯದೊಡನೆ ಹೇಳಿದ ವಿಷಯವನ್ನು ಉದ್ಧರಿಸಿ ಅಲ್ಲಾಹನು ಭೂಮಿಯನ್ನು ಸಂರಕ್ಷಿಸುವಂತೆ ಆಜ್ಞಾಪಿಸಿದ್ದಾನೆ: "ನನ್ನ ಸಮುದಾಯವೇ ಅಲ್ಲಾಹನ ದಾಸ್ಯ-ಆರಾಧನೆ ಮಾಡಿರಿ. ಆತನ ಹೊರತು ನಿಮಗೆ ಬೇರೆ ಆರಾಧ್ಯರಿಲ್ಲ. ಆತನು ನಿಮಗಾಗಿ ಭೂಮಿಯನ್ನು ಸೃಷ್ಟಿಸಿ ಅದರ ಪರಿಪಾಲಕರಾಗಿ ನೆಲೆಗೊಳಿಸಿದ್ದಾನೆ."

(ಹೂದ್ : 61)

ಪ್ರತಿಯೊಬ್ಬರಿಗೂ ತಮ್ಮ ಅಭಿರುಚಿ, ಪ್ರಕೃತಿ ಮತ್ತು ಬೇಡಿಕೆಗೆ ತಕ್ಕಂಥ ನಾನಾ ರೀತಿಯ ಉದ್ಯೋಗಗಳ ಬಾಗಿಲನ್ನು ಇಸ್ಲಾಮ್ ತೆರೆದಿದೆ. ಸಾಮಾಜಿಕ ಹಿತದೃಷ್ಟಿಯಿಂದ

ಕೆಲವು ಉದ್ಯೋಗಗಳಿಗೆ ಪ್ರಾಮುಖ್ಯ ನೀಡಿರಬಹುದಾದರೂ ನಿರ್ದಿಷ್ಟ ಉದ್ಯೋಗವನ್ನು ಮಾಡುವಂತೆ ಅದು ಒತ್ತಾಯಿಸುವುದಿಲ್ಲ. ವ್ಯಕ್ತಿ ಮತ್ತು ಸಮಾಜಕ್ಕೆ ಆಧ್ಯಾತ್ಮಿಕ ಮತ್ತು ಲೌಕಿಕ ದೃಷ್ಟಿಯಿಂದ ಹಾನಿಕರವೆಂಬ ಕಾರಣದಿಂದ ಕೆಲವು ಕವಾಟಗಳನ್ನು ಅದು ಮುಚ್ಚಿಬಿಟ್ಟಿದೆ. ಇಸ್ಲಾಮ್ ನಿಷೇಧಿಸಿರುವ ಉದ್ಯೋಗಗಳೆಲ್ಲವೂ ಈ ವರ್ಗಕ್ಕೆ ಸೇರಿದೆ.

ಇಸ್ಲಾಮೀ ರಾಜಕೀಯ -ಸಾಮಾಜಿಕ-ಆರ್ಥಿಕ ವ್ಯವಸ್ಥೆಯಿರುವ ಸಮಾಜದಲ್ಲಿ ಕಾರ್ಮಿಕನಿಗೆ ತನ್ನ ಕುಟುಂಬ ಪೋಷಣೆಗೆ ಅಗತ್ಯವಿರುವ ಪ್ರತಿಫಲ ದೊರೆಯುತ್ತದೆ. ಏಕೆಂದರೆ, ಇಸ್ಲಾಮೀ ವ್ಯವಸ್ಥೆಯು ಕಾರ್ಮಿಕರ ಶ್ರಮ ಫಲವನ್ನು ತಡೆಯುವುದಿಲ್ಲ. ಬೆವರು ಆರುವುದಕ್ಕಿಂತ ಮುಂಚೆ ವೇತನ ನೀಡಬೇಕೆಂದು ಅದು ಆಜ್ಞಾಪಿಸುತ್ತದೆ.

ವೇತನವು ಕಾರ್ಮಿಕನ ಶ್ರಮ ಮತ್ತು ಅಗತ್ಯಗಳ ಪೂರೈಕೆಗೆ ಪರ್ಯಾಪ್ತವಾಗಿರಬೇಕು. ಕಾರ್ಮಿಕನ ಹಕ್ಕನ್ನು ಪೂರ್ಣವಾಗಿ ನೀಡದಿರುವುದು ಅನ್ಯಾಯ. ಅನ್ಯಾಯವು ಇಸ್ಲಾಮ್ ನಿಷೇಧಿಸಿರುವ ಮಹಾ ಪಾಪವಾಗಿದೆ. ಅದಲ್ಲದೇ ಕಾರ್ಮಿಕನು ದುಡಿದು ಸಂಪಾದಿಸಿದ ಹಣದಿಂದ ಲಾಭ ದೊರೆಯುವ ಏನನ್ನಾದರೂ ಖರೀದಿಸುವುದನ್ನು ಇಸ್ಲಾಮ್ ವಿರೋಧಿಸುವುದಿಲ್ಲ. ಮುದಿತನ ಅಥವಾ ರೋಗ ಪೀಡಿತವಾದಾಗ ತನಗೂ ತನ್ನ ಬಳಿಕ ಮಕ್ಕಳಿಗೂ ಸಂಬಂಧಿಕರಿಗೂ ಅದರಿಂದ ಪ್ರಯೋಜನವಾಗಬಹುದು. ಅದರಿಂದ ದೊರೆಯುವ ಆದಾಯದಿಂದ ತನ್ನ ಜೀವನ ಮಟ್ಟವನ್ನೂ ಸುಧಾರಿಸಬಹುದು.

## ಭರವಸೆಯ ಹೆಸರಲ್ಲಿ

ಆಹಾರ ಸಂಪಾದನೆಗಾಗಿ ದುಡಿಯುವುದರಿಂದ ಮಾನವರನ್ನು ತಡೆಯುವ ಮಾನಸಿಕ ಪ್ರೇರಣೆ ಮತ್ತು ವ್ಯಾವಹಾರಿಕ ಅಡ್ಡಿಗಳನ್ನೂ ಇಸ್ಲಾಮ್ ನಿವಾರಿಸಿದೆ. ದೇವನಲ್ಲಿ ಭರವಸೆಯಿರಿಸಿದ್ದೇವೆಂಬ ಭಾವನೆಯಿಂದ ಆಕಾಶದಿಂದ ಆಹಾರವನ್ನು ನಿರೀಕ್ಷಿಸಿ ದುಡಿಯದವರಿದ್ದಾರೆ. ಅಂಥವರು ಹಾದಿ ತಪ್ಪಿರುವವರೆಂದು ಇಸ್ಲಾಮಿನ ಅಭಿಪ್ರಾಯವಾಗಿದೆ. ಅಲ್ಲಾಹನ ಮೇಲೆ ಭರವಸೆಯಿರಿಸಿರುವೆನೆಂದು ಒಂಟೆಯನ್ನು ಕಟ್ಟಿ ಹಾಕದ ಓರ್ವ ಅನುಚರನೊಡನೆ, "ಒಂಟೆಯನ್ನು ಕಟ್ಟಿ ಹಾಕಿರಿ. ಅನಂತರ ಭರವಸೆ (ತವಕ್ಕುಲ್) ಇರಿಸಿರಿ" ಎಂದು ಪ್ರವಾದಿ(ಸ) ಉಪದೇಶಿಸಿದ್ದರು. ಇದು 'ತವಕ್ಕುಲ್'ನ ಬಗ್ಗೆ ಮುಸ್ಲಿಮನ ಧೋರಣೆಯಾಗಿರಬೇಕು. "ಬೀಜ ಬಿತ್ತಬೇಕು, ಬೆಳೆಯನ್ನು ಅಲ್ಲಾಹನಿಂದ ನಿರೀಕ್ಷಿಸಬೇಕು."

ಓರ್ವ ಸೂಫಿವರ್ಯರ ಜೀವನದಲ್ಲಿ ನಡೆದ ಘಟನೆ ಹೀಗಿದೆ:

ಬಲ್ಕ್ ನಿವಾಸಿಯಾಗಿದ್ದ ಶಕೀಕ್ ಎಂಬೋರ್ವ ಸಾತ್ವಿಕನು, ದೇಶಾಟನೆ ನಡೆಸುವ ತಂಡವೊಂದರ ಜತೆಯಲ್ಲಿ ವ್ಯಾಪಾರಕ್ಕೆ ಹೋದರು. ತಂಡದ ಜತೆಯಲ್ಲಿ ತುಂಬಾ ದಿನ ಇರಬೇಕಾಗಿದ್ದುದರಿಂದ ಮಿತ್ರ ಮತ್ತು ಸೂಫಿವರ್ಯರಾಗಿದ್ದ ಇಬ್ರಾಹೀಮ್ ಬಿನ್ ಅದ್ಹಮ್‌ರು, ಶಕೀಕ್‌ನ ಬೀಳ್ಕೊಡುಗೆಗಾಗಿ ಬಂದಿದ್ದರು. ಆದರೆ, ಶಕೀಕ್ ಬೇಗನೆ ಮರಳಿ ಬಂದರು. ಆತನನ್ನು ಅನಿರೀಕ್ಷಿತವಾಗಿ ನೋಡಿದ ಇಬ್ರಾಹೀಮ್ ಬಿನ್ ಅದ್ಹಮ್‌ರು ಅಚ್ಚರಿಯಿಂದ

ಆತನೊಡನೆ ಕೇಳಿದರು, "ನೀವೇಕೆ ಬೇಗನೆ ಮರಳಿದಿರಿ" ಶಕೀಲ್ ಹೇಳಿದರು: "ನಾನು ಪಯಣದ ವೇಳೆ ಒಂದು ಅದ್ಭುತವನ್ನು ಕಂಡೆ. ತರುವಾಯ ಪಯಣ ನಿಲ್ಲಿಸಿದೆ." "ಏನು ಸಮಾಚಾರ?" ಇಬ್ನು ಅದ್ಹಮ್ ಕೇಳಿದರು. ನಾನು ಏಕಾಂತ ಸ್ಥಳದಲ್ಲಿ ವಿಶ್ರಾಂತಿ ಪಡೆಯುತ್ತಿದ್ದೆ, ಅಲ್ಲಿ ಒಂದು ಕುರುಡ ಮತ್ತು ಅಂಗ ವಿಕಲ ಪಕ್ಷಿಯೊಂದಿತ್ತು. ನನಗೆ ಆಶ್ಚರ್ಯವಾಯಿತು. ಕಣ್ಣು ಕಾಣದ, ಚಲಿಸಲಾಗದ ಈ ಪಕ್ಷಿಯು ಈ ನಿರ್ಜನ ಸ್ಥಳದಲ್ಲಿ ಹೇಗೆ ಬದುಕುವುದೆಂದು ಆಲೋಚಿಸಿದೆ. ಸ್ವಲ್ಪ ಸಮಯ ಕಳೆದ ಬಳಿಕ ಒಂದು ಪಕ್ಷಿಯು ಆಹಾರ ತೆಗೆದುಕೊಂಡು ಅಲ್ಲಿಗೆ ಬಂದಿತು. ಅದಕ್ಕೆ ಬೇಕಾದಷ್ಟು ಆಹಾರವನ್ನು ನೀಡಿತು. ಆಗ ನಾನು ಭಾವಿಸಿದೆ. ಆ ಪಕ್ಷಿಗೆ ಈ ಪ್ರದೇಶದಲ್ಲಿ ಆಹಾರ ಒದಗಿಸಲು ಶಕ್ತನಾಗಿರುವ ಅಲ್ಲಾಹನಿಗೆ ನನಗೂ ಆಹಾರ ಒದಗಿಸಲು ಸಾಧ್ಯವಿದೆ. ಆ ಕೂಡಲೇ ನಾನು ಮರಳಿದೆ." ಇದನ್ನು ಕೇಳಿ ಇಬ್ನು ಅದ್ಹಮ್ ಹೇಳಿದರು: "ಶಕೀಕ್ ಅದ್ಭುತ! ಕುರುಡ ಮತ್ತು ಅಂಗ ವಿಕಲವಾದ ಪಕ್ಷಿಯಂತಾಗಲು ನೀವು ಬಯಸುತ್ತೀರಾ? ತನಗಾಗಿಯೂ ಕುರುಡ ಮತ್ತು ಅಸಹಾಯಕರಾದ ಇತರರಿಗಾಗಿಯೂ ಶ್ರಮಿಸುವ ಇನ್ನೊಂದು ಪಕ್ಷಿಯಂತಾಗಲು ನೀವೇಕೆ ಬಯಸುವುದಿಲ್ಲ? ಮೇಲಿನ ಕೈಯು ಕೆಳಗಿನ ಕೈಗಿಂತ ಉತ್ತಮವೆಂಬುದು ನಿಮಗೆ ತಿಳಿದಿಲ್ಲವೇ? "ಮಾತು ಮುಗಿಯುವುದಕ್ಕಿಂತ ಮುಂಚೆಯೇ ಇಬ್ನು ಅದ್ಹಮ್‌ರ ಕರಗಳನ್ನು ಚುಂಬಿಸಿ ಶಕೀಕ್ ಹೇಳಿದರು: "ಅಬೂ ಇಸ್ಹಾಕ್, ನೀವು ನಮ್ಮ ಗುರು".

ಶಕೀಲ್ ಪುನಃ ವ್ಯಾಪಾರಕ್ಕೆ ಹೋದರು.

"ಅರ್ಹ ರೀತಿಯಲ್ಲಿ ಅಲ್ಲಾಹನ ಮೇಲೆ ಭರವಸೆಯಿರಿಸಿದರೆ ಹಕ್ಕಿಗಳಿಗೆ ಆಹಾರ ನೀಡುವಂತೆ ಅಲ್ಲಾಹನು ನಿಮಗೆ ಆಹಾರ ನೀಡುವನು. ಅವು ಬರಿ ಹೊಟ್ಟೆಯಲ್ಲಿ ಬೆಳಗಾತ ಗೂಡುಗಳಿಂದ ಹೊರಟು ಸಂಜೆಯ ವೇಳೆ ಹೊಟ್ಟೆ ತುಂಬಿಸಿ ಮರಳುತ್ತವೆ" ಎಂಬ ಪ್ರವಾದಿ ವಚನವನ್ನು ಕೆಲವರು ದುಡಿಯದಿರುವುದಕ್ಕೆ ಸಮರ್ಥನೆಯಾಗಿ ಉದ್ಧರಿಸುತ್ತಾರೆ. ಆದರೆ ಈ ವಚನವೇ ಅದನ್ನು ಖಂಡಿಸುತ್ತದೆ. ಬೆಳಗಾತ ಗೂಡಿನಿಂದ ಅವು ಹೊರಟಿರುವುದರಿಂದಲೇ ಸಂಜೆಗೆ ಹೊಟ್ಟೆ ತುಂಬಿಸಿ ಮರಳಲು ಅವುಗಳಿಗೆ ಸಾಧ್ಯವಾಗುತ್ತದೆ. ಗೂಡಿನಿಂದ ಹೊರ ಹೋಗುವುದು ಆಹಾರ ಹುಡುಕಲಿಕ್ಕಾಗಿ ತಾನೇ! ಈ ದೃಷ್ಟಿಯಿಂದ ಪ್ರಸ್ತುತ ವಚನವು ದುಡಿಮೆ ಮತ್ತು ಆಹಾರ ಸಂಪಾದನೆಗೆ ಪ್ರೇರಣೆ ನೀಡುತ್ತದೆ.

ಇಮಾಮ್ ಅಹ್ಮದ್ ಬಿನ್ ಹಂಬಲ್‌ರೊಡನೆ ಓರ್ವರು ಪ್ರಶ್ನಿಸಿದರು: "ಆಹಾರ ದೊರೆಯುವ ತನಕ ಯಾವ ಕೆಲಸವನ್ನೂ ಮಾಡುವುದಿಲ್ಲವೆಂದು ಹಠದಿಂದ ಮನೆಯಲ್ಲಿ ಅಥವಾ ಮಸೀದಿಯಲ್ಲಿಯೇ ಬಿದ್ದುಕೊಳ್ಳುವವರ ಬಗ್ಗೆ ನಿಮ್ಮ ಅಭಿಪ್ರಾಯವೇನು?" ಅವರು ಹೇಳಿದರು: "ಆತ ಶತಮೂರ್ಖ. ನನ್ನ ಆಹಾರವು ನನ್ನ ಬಾಣದ ನೆರಳಿನಲ್ಲಿದೆ ಮತ್ತು ಹಕ್ಕಿಗಳು ಬೆಳಗಾತ ಬರಿ ಹೊಟ್ಟೆಯಲ್ಲಿ ಹಾರಿ ಹೋಗಿ ಸಂಜೆ ತುಂಬಿದ ಹೊಟ್ಟೆಯಲ್ಲಿ ಮರಳುವುದೆಂಬ ಪ್ರವಾದಿ ವಚನವನ್ನು ಆತ ಕೇಳಿರಲಾರನೇ? ಹಕ್ಕಿಗಳು ಪ್ರಭಾತದಲ್ಲಿ ಆಹಾರ ಹುಡುಕಲಿಕ್ಕಾಗಿ ಗೂಡಿನಿಂದ ಹೊರ ಹೋಗುತ್ತವೆಂದು ಪ್ರವಾದಿ(ಸ) ಹೇಳಿದ್ದರು.

ಅವರ ಅನುಯಾಯಿಗಳು ನೆಲ ಜಲಗಳಲ್ಲಿ ವ್ಯಾಪಾರ ನಡೆಸುತ್ತಿದ್ದರು. ಅವರು ಖರ್ಜೂರದ ತೋಟಗಳಲ್ಲಿ ಕೆಲಸ ಮಾಡುತ್ತಿದ್ದರು.

ದೇವನು ಭೂಮಿಯನ್ನು ಸೃಷ್ಟಿಸಿದನು. ಅದರಲ್ಲಿ ಹೊರಗೂ ಒಳಗೂ ಆಹಾರವಸ್ತುಗಳನ್ನು ಇರಿಸಿದನು. "ನಾವು ನಿಮ್ಮನ್ನು ಜಗತ್ತಿನಲ್ಲಿ ಸಾಮರ್ಥ್ಯಕೊಟ್ಟು ನೆಲೆಗೊಳಿಸಿದೆವು. ಮತ್ತು ಇಲ್ಲಿ ನಿಮಗೆ ಜೀವನ ಸಾಧನಗಳನ್ನು ಒದಗಿಸಿದೆವು. ಆದರೆ ನೀವು ಅತ್ಯಲ್ಪವೇ ಕೃತಜ್ಞರಾಗುತ್ತೀರಿ."

(ಅಲ್‌ರಾಫ್:10)

"ನಿಶ್ಚಯವಾಗಿಯೂ ನಾವು ಆದಮರ ಸಂತತಿಗೆ ಶ್ರೇಷ್ಠತೆಯನ್ನು ದಯಪಾಲಿಸಿದ್ದೇವೆ. ನೆಲ ಜಲಗಳಲ್ಲಿ ನಾವು ಅವರನ್ನು ಸಾಗಿಸಿದ್ದೇವೆ. ಅವರಿಗೆ ಶುದ್ಧವಾದ ಆಹಾರ ವಸ್ತುಗಳನ್ನು ನಾವು ನೀಡಿದ್ದೇವೆ." (ಬನೀಇಸ್ರಾಈಲ್ :70)

ಮಾನವ ಜೀವನವನ್ನು ಸಮೃದ್ಧಗೊಳಿಸಲಿಕ್ಕಾಗಿ ಭೂಮಿಯಲ್ಲಿ ಅಲ್ಲಾಹನು ಸಂಪತ್ತು, ಆಹಾರ ಸಂಪನ್ಮೂಲಗಳನ್ನು ನಿಕ್ಷೇಪಿಸಿದ್ದಾನೆ.

"ಅಲ್ಲಾಹನೇ ಭೂಮಿಯನ್ನು ನಿಮ್ಮ ಪಾಲಿಗೆ ವಾಸಸ್ಥಾನವಾಗಿ ಮಾಡಿದನು ಮತ್ತು ಮೇಲೆ ಆಕಾಶದ ಗುಂಬಜವನ್ನು ಮಾಡಿದನು. ಅವನು ನಿಮಗೆ ರೂಪ ಕೊಟ್ಟನು. ಬಹಳ ಸುಂದರ ರೂಪವನ್ನೇ ಕೊಟ್ಟನು. ಅವನು ನಿಮಗೆ ಶುದ್ಧ ವಸ್ತುಗಳಿಂದ ಆಹಾರ ನೀಡಿದನು. ಅವನೇ ನಿಮ್ಮ ಪ್ರಭು. ಅಗಣಿತ ಸಮೃದ್ಧಿಯುಳ್ಳವನು. ಅವನು ಸಕಲ ಲೋಕಗಳ ಪ್ರಭು."

(40:64)

ಅಲ್ಲಾಹನು ತನ್ನ ವಿಧೇಯ ದಾಸರಿಗೆ ಮಾತ್ರವಲ್ಲ ಸಕಲ ಜೀವಜಾಲಗಳಿಗೂ ಆಹಾರ ನೀಡುವ ಹೊಣೆಯನ್ನು ವಹಿಸಿದ್ದಾನೆ.

"ಅಲ್ಲಾಹನು ಆಹಾರ ಒದಗಿಸುವ ಹೊಣೆ ವಹಿಸದ ಯಾವೊಂದು ಜೀವಿಯೂ ಈ ಭೂಮಿಯಲ್ಲಿಲ್ಲ." (ಹೂದ್:6)

"ಅಲ್ಲಾಹನು ಸ್ವಯಂ ಮಹಾ ಅನ್ನದಾತನು. ಮಹಾ ಶಕ್ತಿಶಾಲಿ ಮತ್ತು ಪ್ರಚಂಡನಾಗಿದ್ದಾನೆ." (51:58)

ಆದರೆ, ಅಲ್ಲಾಹನು ನಿಕ್ಷೇಪಿಸಿರುವ ಆಹಾರ ಪದಾರ್ಥ ಮತ್ತು ಸಂಪನ್ಮೂಲಗಳನ್ನು ದುಡಿಯದೆ ಮತ್ತು ಶ್ರಮಿಸದೆ ಗಳಿಸಲಾಗುವುದಿಲ್ಲವೆಂಬುದು ದೇವ ನೀತಿಯಾಗಿದೆ. ಆದ್ದರಿಂದಲೇ ಅಲ್ಲಾಹನು ಒದಗಿಸಿರುವ ಸಂಪನ್ಮೂಲಗಳಿಗಾಗಿ ಭೂಮಿಯಲ್ಲಿ ಸಂಚರಿಸುವಂತೆ ಆಜ್ಞಾಪಿಸಲಾಗಿದೆ. ಹುಡುಕುವಾತನಿಗೆ ಅದು ಸಿಗುತ್ತದೆ. ಸಾಮರ್ಥ್ಯವಿದ್ದೂ ಸಂಪಾದಿಸದೆ ಸುಮ್ಮನಿರುವಾತನು ತಿನ್ನದಿರುವುದೇ ಉತ್ತಮ. ಅಲ್ಲಾಹನು ಹೇಳಿದ್ದಾನೆ:

"ನಮಾಝ್ ಮುಗಿದ ಬಳಿಕ ಭೂಮಿಯ ಮೇಲೆ ಚದುರಿ ಬಿಡಿರಿ ಮತ್ತು ಅಲ್ಲಾಹನ ಅನುಗ್ರಹವನ್ನರಸಿರಿ." (62:10)

ಅಲ್ಲಾಹನ ಅನುಗ್ರಹ ಮತ್ತು ಸಂಪನ್ಮೂಲಗಳ ಸಂಪಾದನೆಗಾಗಿ ಭೂಮಿಯಲ್ಲಿ ಸಂಚರಿಸಿ ಶ್ರಮಿಸುವಾತನಿಗೆ ಅದು ಸಿಗುವುದು. ಸೋಮಾರಿಯಾಗಿ ಕೈ ಕಟ್ಟಿ ಕುಳಿತಿರುವಾತನಿಗೆ

ದೊರೆಯುವುದಿಲ್ಲ.

ಹ. ಉಮರ್‌ರ(ರ) ಕಾಲದಲ್ಲಿ ನಡೆದ ಘಟನೆ:

ನಮಾಝ್ ಮುಗಿದ ಬಳಿಕವೂ ಕೆಲವರು ತವಕ್ಕುಲ್‌ನ ಪ್ರಾರ್ಥನೆ ಮಾಡುತ್ತಾ ಮಸೀದಿಯಲ್ಲಿ ಕುಳಿತಿರುವುದನ್ನು ಅವರು ನೋಡಿದರು. ಆ ಜನರಿಗೆ ಬೆತ್ತ ತೋರಿಸುತ್ತಾ ಅವರು ಪ್ರಶ್ನಿಸಿದರು- "ಆಕಾಶದಿಂದ ಚಿನ್ನ-ಬೆಳ್ಳಿ ಸುರಿಯುವುದಿಲ್ಲವೆಂದು ನಿಮಗೆ ತಿಳಿದಿದೆಯಲ್ಲವೇ. ಆಹಾರವನ್ನು ಹುಡುಕದೆ ಅಲ್ಲಾಹನೇ ನನಗೆ ಆಹಾರ ನೀಡೆಂದು ಪ್ರಾರ್ಥಿಸಬಾರದು. ನಮಾಝ್‌ನ ಬಳಿಕ ಅಲ್ಲಾಹನ ಅನುಗ್ರಹಗಳನ್ನು ಹುಡುಕುತ್ತಾ ಭೂಮಿಯಲ್ಲಿ ಹಬ್ಬಿರಿ" ಎಂದು ಅಲ್ಲಾಹನು ಆಜ್ಞಾಪಿಸಿದ್ದಾನೆ. ಉಮರ್‌ರ ಬೆತ್ತವು; ಕಾನೂನಿನ ಆಜ್ಞಾಶಕ್ತಿಗೂ ಸರಕಾರ ಮತ್ತು ಅಧಿಕಾರಗಳಿಗೂ, ಇಸ್ಲಾಮೀ ಕಾನೂನು ಜ್ಯಾರಿಗೊಳಿಸುವ ಬಗ್ಗೆ ಅವುಗಳ ಪಾತ್ರಕ್ಕೂ ಸ್ಪಷ್ಟ ಉದಾಹರಣೆಯಾಗಿದೆ. ಕುರ್‌ಆನ್‌ನ ಉಪದೇಶವು ಪರಿಣಾಮ ಬೀರದ ಪರಿಸ್ಥಿತಿಯಲ್ಲಿ ಆಡಳಿತಗಾರನ ಕ್ರಮವು ಉಪಯುಕ್ತವಾಗುತ್ತದೆ.

## ಉದ್ಯೋಗ ಮತ್ತು ಆರಾಧನೆ (ಇಬಾದತ್)

ಇಡೀ ಜೀವನವನ್ನು ಆರಾಧನೆಯಲ್ಲಿಯೇ ಕಳೆಯಲಿಕ್ಕಾಗಿ ಕೆಲವರು ದುಡಿಮೆಯನ್ನು ತೊರೆಯುತ್ತಾರೆ. ಅದಕ್ಕೆ ಆಧಾರವಾಗಿ ಅವರು, "ನನ್ನ ಆರಾಧನೆಗಾಗಿಯೇ ಹೊರತು ಜಿನ್ನ್ ಮತ್ತು ಮಾನವ ವರ್ಗವನ್ನು ನಾನು ಸೃಷ್ಟಿಸಿಲ್ಲ" ಎಂಬ ಕುರ್‌ಆನ್ ವಾಕ್ಯವನ್ನು ಉಲ್ಲೇಖಿಸುತ್ತಾರೆ. ಆರಾಧನೆಯನ್ನು ಕೈ ಬಿಟ್ಟು ದೇಹದ ಬೇಡಿಕೆಗಳಲ್ಲಿಯೇ ನಿರತರಾಗಿರುವುದು ಸಮ್ಮತಾರ್ಹವಲ್ಲ. ಆದ್ದರಿಂದ ಮಠ ಮತ್ತು ಕಾಡುಗಳಲ್ಲಿ ಬಾಳುವ ಋಷಿ ಮತ್ತು ಸನ್ಯಾಸಿಗಳಂತೆ ದೇವನೊಂದಿಗಿನ ಕರ್ತವ್ಯದ ಈಡೇರಿಕೆಗಾಗಿ ಎಲ್ಲ ಕೆಲಸಗಳನ್ನು ಬಿಟ್ಟು ಆರಾಧನೆಯಲ್ಲಿ ತಲ್ಲೀನರಾಗಿರದೆ ಗತ್ಯಂತರವಿಲ್ಲವೆಂದು ಈ ಮಂದಿ ಭಾವಿಸುತ್ತಾರೆ.

ಇಸ್ಲಾಮಿನಲ್ಲಿ ಸನ್ಯಾಸವೆಂಬುದಿಲ್ಲ. ಸಂಕಲ್ಪ ಶುದ್ಧಿ ಮತ್ತು ವಿಧಿಬದ್ಧವಾಗಿ ನಿರ್ವಹಿಸುವ ಎಲ್ಲ ಕರ್ಮಗಳೂ ಆರಾಧನೆಯಾಗಿದೆಯೆಂದು ಪ್ರವಾದಿ(ಸ) ಕಲಿಸಿದ್ದಾರೆ. ಗೌರವದ ಬಾಳ್ವೆ, ಕುಟುಂಬದ ಪೋಷಣೆ, ನೆರೆಕರೆಯವರು ಮತ್ತು ಸಂಬಂಧಿಕರಿಗೆ ನೆರವು ಮತ್ತು ಧರ್ಮ ಸೇವೆಗಾಗಿ ಶ್ರಮಿಸುವುದು ದೇವ ಮಾರ್ಗದಲ್ಲಿ ಜಿಹಾದ್ ಮಾಡುವುದಕ್ಕೆ ಸಮಾನವಾಗಿದೆ. ಆದ್ದರಿಂದಲೇ ದೇವ ಮಾರ್ಗದಲ್ಲಿ ಹೋರಾಟ ಮತ್ತು ದೇವಾನುಗ್ರಹಗಳ ಅರಸುವಿಕೆಯನ್ನು ಅಲ್ಲಾಹನು ಸಮಾನವಾಗಿ ಪರಿಗಣಿಸಿದ್ದಾನೆ: "ನಿಮ್ಮಲ್ಲಿ ಕೆಲವರು ಅಲ್ಲಾಹನ ಅನುಗ್ರಹವನ್ನರಸಿಕೊಂಡು ಪ್ರಯಾಣದಲ್ಲಿರುತ್ತಾರೆ. ಮತ್ತೆ ಕೆಲವರು ಅಲ್ಲಾಹನ ಮಾರ್ಗದಲ್ಲಿ ಯುದ್ಧ ಮಾಡುತ್ತಿದ್ದಾರೆಂದು ಅಲ್ಲಾಹನಿಗೆ ತಿಳಿದಿದೆ." (73:20)

ಉಮರ್(ರ) ಒಮ್ಮೆ ಹೀಗೆ ಹೇಳಿದ್ದರು: ದೇವ ಮಾರ್ಗದಲ್ಲಿ ಹೋರಾಡುತ್ತಿರುವಾಗ ಮರಣ ಹೊಂದುವುದನ್ನು ನಾನು ಬಯಸುತ್ತೇನೆ ಮತ್ತು ಅಲ್ಲಾಹನ ಅನುಗ್ರಹವನ್ನು

ಹುಡುಕುವ ವೇಳೆಯಲ್ಲಿಯೂ. ತರುವಾಯ ಅವರು ಮುಝ್ಝಮ್ಮಿಲ್ ಅಧ್ಯಾಯದ ಮೇಲಿನ ವಾಕ್ಯವನ್ನು ಪಠಿಸಿದರು.

"ಸತ್ಯಸಂಧ ಮತ್ತು ಪ್ರಾಮಾಣಿಕನಾದ ವ್ಯಾಪಾರಿಯು- ಪ್ರವಾದಿಗಳು, ಪುಣ್ಯಾತ್ಮರು ಮತ್ತು ಹುತಾತ್ಮರ ಜತೆಯಲ್ಲಿರುತ್ತಾರೆ." (ತಿರ್ಮಿದಿ)

ಪ್ರವಾದಿಯವರು(ಸ) ರೈತ ಕೆಲಸವನ್ನು ಪ್ರೋತ್ಸಾಹಿಸಿ ಹೀಗೆಂದಿದ್ದಾರೆ: "ಓರ್ವ ಮುಸ್ಲಿಮನು ಬೇಸಾಯ ಮಾಡಿ ಅಥವಾ ಗಿಡನೆಟ್ಟು ಅದರ ಬೆಳೆಯಿಂದ ಪ್ರಾಣಿ, ಪಕ್ಷಿ ಅಥವಾ ಮಾನವನು ಸ್ವಲ್ಪ ತಿಂದು ಬಿಟ್ಟರೆ, ಅದು ಆ ರೈತನಿಗೆ ಪ್ರತಿಫಲಾರ್ಹ ದಾನವಾಗಿ ಪರಿಣಮಿಸುತ್ತದೆ." (ಬುಖಾರಿ)

ಈ ಕೆಳಗಿನ ಪ್ರವಾದಿ ವಚನಗಳು ದುಡಿಮೆಯ ಮಹತ್ವವನ್ನು ಸಾರುತ್ತವೆ-

"ಸ್ವಕರಗಳಿಂದ ದುಡಿದು ಸಂಪಾದಿಸಿರುವುದಕ್ಕಿಂತ ಉತ್ತಮವಾದ ಆಹಾರವನ್ನು ಈ ತನಕ ಯಾರೂ ತಿಂದಿಲ್ಲ." (ಬುಖಾರಿ)

"ಧರ್ಮಬದ್ಧ ಆಹಾರ ಸಂಪಾದನೆಗಾಗಿ ಒಂದು ರಾತ್ರಿಯ ಕಷ್ಟ ಸಹಿಸಿದಾತನು ಪಾಪ ವಿಮೋಚನೆಯ ಒಂದು ರಾತ್ರಿಯನ್ನು ಕಳೆದನು." (ಇಬ್ನು ಅಸಾಕಿರ್)

"ಸಂಜೆಯ ತನಕ ದುಡಿಯುವಾತನು ಆ ಸಂಜೆ ಪಾಪ ಮುಕ್ತವಾಗುವನು." (ತಬ್ರಾನಿ)

ಇಬ್ರಾಹೀಮ್ ನಖ್ಈ (ತಾಬಿಈ)ಯವರೊಡನೆ ಓರ್ವರು ಪ್ರಶ್ನಿಸಿದರು: "ನೀವು ಯಾರನ್ನು ಮೆಚ್ಚುತ್ತೀರಿ? ಸತ್ಯಸಂಧ ವ್ಯಾಪಾರಿಯನ್ನೋ ಆರಾಧನೆಯಲ್ಲಿಯೇ ತಲ್ಲೀನನಾಗಿರುವ ಭಕ್ತನನ್ನೋ" ಅವರು ಹೇಳಿದರು, "ಸತ್ಯ ಸಂಧನಾದ ವ್ಯಾಪಾರಿಯನ್ನು- ಆತನು ಜಿಹಾದ್ ಮಾಡುತ್ತಿದ್ದಾನೆ. ಅಳತೆ, ತೂಕ, ಕೊಡುಕೊಳ್ಳುವಿಕೆಗಳಲ್ಲಿ ಪಿಶಾಚಿಯು ಆತನನ್ನು ಪ್ರಲೋಭಿಸುತ್ತದೆ. ವ್ಯಾಪಾರಿಯು ಅದರ ವಿರುದ್ಧ ಹೋರಾಡಬೇಕಾಗುತ್ತದೆ." ಸೂಫೀವರ್ಯರಾದ ಶೈಕ್ ಶಅ್‌ರಾನಿಯವರು ದುಡಿಯುವವರಿಗೆ ಆರಾಧಕನಿಗಿಂತ ಹೆಚ್ಚಿನ ಸ್ಥಾನವನ್ನು ನೀಡಿದ್ದಾರೆ. ಏಕೆಂದರೆ ಆರಾಧನೆಯ ಫಲವು ವ್ಯಕ್ತಿಗೆ ಸೀಮಿತವಾಗಿದೆ. ದುಡಿಮೆಯ ಫಲವು ಇಡೀ ಸಮುದಾಯಕ್ಕೆ ದೊರೆಯುತ್ತದೆ.

"ದರ್ಜಿಯು ತನ್ನ ಸೂಜಿಯನ್ನು, ಬಡಗಿಯು ತನ್ನ ಉಳಿಯನ್ನು ಜಪಸರವನ್ನಾಗಿ ಮಾಡುವುದು ಎಷ್ಟೊಂದು ಸುಂದರ" ಎಂದು ಅವರು ಹೇಳುತ್ತಿದ್ದರು.

## ಉದ್ಯೋಗ ಮತ್ತು ಅಭಿಮಾನ

ದುಡಿಮೆಯು ಅಪಮಾನ ಮತ್ತು ನೀಚಕಾರ್ಯವೆಂದು ಭಾವಿಸುವ ಕೆಲವ ಸೋಮಾರಿಗಳಿದ್ದಾರೆ. ಅರಬರಲ್ಲಿ ಬಹುಮಂದಿ ಆ ವರ್ಗಕ್ಕೆ ಸೇರಿದ್ದಾರೆ. ಓರ್ವ ಅರಬಿ ಕವಿಯು ಆತನ ಪ್ರತಿಸ್ಪರ್ಧಿಯ ಮುತ್ತಾತನು ಕಮ್ಮಾರನೆಂದು ಹೀಯ್ಯಾಳಿಸಿದ್ದು ಕಂಡು ಬರುತ್ತದೆ. ಆ ವೃತ್ತಿಯು ಇಡೀ ಗೋತ್ರಕ್ಕೆ ಕಳಂಕವೆಂದು ಕವಿಯ ಭಾವನೆಯಾಗಿದೆ. ತಾನು ನೀಚವೆಂದು ಭಾವಿಸುವ ಕೆಲಸವನ್ನು ಇತರರಿಂದ ಮಾಡಿಸುವುದನ್ನು ಹೆಮ್ಮೆಯ ಕೆಲಸವೆಂದು ಪರಿಗಣಿಸಲಾಗುತ್ತಿತ್ತು. ಇಸ್ಲಾಮಿನ ಆಗಮನದ ಬಳಿಕ ಈ ತಪ್ಪು ಭಾವನೆ ಅಳಿಯಿತು. ಎಲ್ಲ

ರೀತಿಯ ಉದ್ಯೋಗಗಳ ಬೆಲೆಯನ್ನು ಅದು ಹೆಚ್ಚಿಸಿತು. ಉದ್ಯೋಗ ಮಾಡದೆ ಪರಾವಲಂಬಿಯಾಗಿರುವುದು ಅಪಮಾನವೆಂದು ಅದು ತಿಳಿಸಿತು. ಜನರ ದೃಷ್ಟಿಯಲ್ಲಿ ತುಚ್ಛ ಮತ್ತು ಅರೋಚಕವಾಗಿದ್ದರೂ ಧರ್ಮಬದ್ಧ ರೀತಿಯಲ್ಲಿ ಮಾಡುವ ಸಂಪಾದನೆಯು ಶ್ರೇಷ್ಠವೆಂದು ಅದು ಕಲಿಸಿತು.

"ಸೌದೆ ಕಡಿದು ಅದನ್ನು ಹೊತ್ತು ನಡೆದು ಮಾರಾಟ ಮಾಡುವುದು ಬಿಕ್ಷಾಟನೆಗಿಂತ ಎಷ್ಟೋ ಉತ್ತಮ - ಜನರು ದಾನ ನೀಡಿದರೂ ನೀಡದಿದ್ದರೂ" ಎಂದು ಪ್ರವಾದಿವರ್ಯರು ಹೇಳಿದ್ದರು. ಸೌದೆ ಸಂಗ್ರಹಿಸುವ ಕೆಲಸವು ತ್ರಾಸದಾಯಕ ಮತ್ತು ಅದರ ಫಲವು ತುಚ್ಛವಾಗಿದೆ. ಜನರೂ ಗೇಲಿ ಮಾಡಬಹುದು. ಹಾಗಿದ್ದರೂ ಆ ವೃತ್ತಿಯು ಭಿಕ್ಷಾಟನೆಗಿಂತ, ನಿರುದ್ಯೋಗಕ್ಕಿಂತ ಉತ್ತಮವೆಂದು ಪ್ರವಾದಿ(ಸ) ವಿವರಿಸಿದ್ದರು. ಅಲ್ಲದೇ, ತಮ್ಮ ಪೂರ್ವ ಪ್ರವಾದಿಗಳ ಮಾದರಿಯನ್ನು ವಿವರಿಸುತ್ತಾ ಪ್ರವಾದಿ(ಸ) ಹೀಗೆ ಹೇಳಿದ್ದರು: "ಆಡು ಮೇಯಿಸದ ಯಾವೊಬ್ಬರನ್ನೂ ಅಲ್ಲಾಹನು ಪ್ರವಾದಿಯಾಗಿ ನೇಮಿಸಿಲ್ಲ." ಒಬ್ಬರು ಪ್ರಶ್ನಿಸಿದರು: "ಪ್ರವಾದಿಗಳೇ ತಾವು?" ಪ್ರವಾದಿ(ಸ) ಹೇಳಿದರು: "ಹೌದು, ಸಣ್ಣ ಸಂಬಳಕ್ಕಾಗಿ ನಾನೂ ಮಕ್ಕಾದವರ ಆಡನ್ನು ಮೇಯಿಸಿದ್ದೆ." ಪ್ರವಾದಿ ಮುಂದುವರಿಸಿದರು: "ಸ್ವಕರಗಳಿಂದ ಸಂಪಾದಿಸಿದ್ದಕ್ಕಿಂತ ಉತ್ತಮವಾದ ಆಹಾರವನ್ನು ಈ ತನಕ ಯಾರೂ ತಿಂದಿಲ್ಲ. ಪ್ರವಾದಿ ದಾವೂದ್‌ರು(ಅ) ಸ್ವತಃ ದುಡಿದು ಸಂಪಾದಿಸಿದುದರಿಂದಲೇ ತಿನ್ನುತ್ತಿದ್ದರು." ಇಬ್ನು ಅಬ್ಬಾಸ್‌ರನ್ನು ಉಲ್ಲೇಖಿಸಿ ಹಾಕಿಮ್ ಹೇಳಿದ್ದಾರೆ: ದಾವೂದ್‌ರು(ಅ) ಯುದ್ಧ ಉಡುಪು ತಯಾರಕರಾಗಿದ್ದರು. ಪ್ರವಾದಿ ಆದಮ್‌ರು ರೈತ, ಪ್ರವಾದಿ ನೂಹ್ ಬಡಗಿ, ಪ್ರವಾದಿ ಇದ್ರೀಸ್ ದರ್ಜಿ ಮತ್ತು ಪ್ರವಾದಿ ಮೂಸಾ(ಅ) ಕುರಿಗಾಹಿಯಾಗಿದ್ದರು."

ಖ್ಯಾತ ಹಾಗೂ ಸ್ವಂತ ಪಾಂಡಿತ್ಯ-ಸಾಹಿತ್ಯ ಕೃತಿಗಳಿಂದ ಪ್ರಸಿದ್ಧರಾದ ಇಸ್ಲಾಮೀ ನಾಯಕರು ಮತ್ತು ವಿದ್ವಾಂಸರನ್ನು ಅವರ ತಂದೆ, ತಾತ ಅಥವಾ ಗೋತ್ರಗಳ ಹೆಸರಲ್ಲಿ ಕರೆಯಲಾಗಿಲ್ಲ; ಬದಲಾಗಿ ಅವರ ಅಥವಾ ಅವರ ಹಿರಿಯರು ನಿರ್ವಹಿಸುತ್ತಿದ್ದ ಕಸುಬಿನ ಹೆಸರಲ್ಲಿ ಕರೆಯಲಾಗಿತ್ತು. ಶತಮಾನಗಳ ಬಳಿಕವೂ ತಮ್ಮ ಕಸುಬನ್ನು ಹೆಸರಿನೊಂದಿಗೆ ಜೋಡಿಸಿ ಹೇಳುವುದನ್ನು ಇಸ್ಲಾಮೀ ಸಮಾಜವು ಅರೋಚಕವೆಂದು ಭಾವಿಸುವುದಿಲ್ಲ. ವಿದ್ವಾಂಸರೂ ಅದಕ್ಕೆ ಅಪವಾದವಾಗಿಲ್ಲ. ತನ್ಮೂಲಕ, ಇಸ್ಲಾಮೀ ನಾಗರಿಕತೆಯ ವಿವಿಧ ರಂಗಗಳಲ್ಲಿ ನಿಪುಣರಾದ ವಿದ್ವಾಂಸರು, ಸಾಹಿತಿಗಳು ಮತ್ತು ಕರ್ಮಶಾಸ್ತ್ರಜ್ಞರು ಅವರ ವೃತ್ತಿ ಹೆಸರುಗಳಿಂದಲೇ ಪ್ರಸಿದ್ಧರಾಗಿದ್ದಾರೆ. ಉದಾ: ಅಲ್ ಬಸ್ಸಾರ್[1], ಅಲ್ ಕಪ್ಪಾರ್[2], ಅಝ್ಝುಜಾಜ್[3], ಅಲ್ ಕಸ್ಸಾರ್[4], ಅಲ್ ಜಸ್ಸಾಸ್[5], ಅಲ್ ಕವ್ವಾಸ್[6], ಅಲ್ ಖಯ್ಯಾತ್[7], ಅಸ್ಸಬ್ಬಾನ್[8], ಅಲ್ ಕತ್ತಾನ್[9] ಇತ್ಯಾದಿ.

1. ಜವುಳಿ ವ್ಯಾಪಾರಿ 2. ಬೀಗದ ವ್ಯಾಪಾರಿ 3. ಸ್ಫಟಿಕದ ವ್ಯಾಪಾರಿ 4. ರತ್ನ ವ್ಯಾಪಾರಿ 5. ಗಾರೆ ಕೆಲಸದವ 6.ಸೋಗೆ ವ್ಯಾಪಾರಿ 7. ದರ್ಜಿ 8. ಸಾಬೂನು ವ್ಯಾಪಾರಿ 9. ಹತ್ತಿ ವ್ಯಾಪಾರಿ.

## ಪಯಣಿಸಿರಿ - ಶ್ರೀಮಂತರಾಗಬಹುದು

ಊರಿನಲ್ಲಿ ಯೋಗ್ಯ ಕೆಲಸ ದೊರೆಯದೆ ಕೆಲವರು ನಿರುದ್ಯೋಗಿಗಳಾಗಿ ಉಳಿಯುತ್ತಾರೆ. ಅವರಿಗೆ ಪಯಣಿಸಿ ಪರವೂರಿನಲ್ಲಿ ಕೆಲಸ ಮಾಡಲು ಮನಸ್ಸಿರುವುದಿಲ್ಲ. ಅವರಿಗೆ ಊರಲ್ಲಿಯೇ ಉಳಿದು ಹೊಟ್ಟೆಗಿಲ್ಲದೆ ಬಾಳುವುದೇ (ಪರ ಊರಿನಲ್ಲಿ ಹೋಗಿ ಶ್ರೀಮಂತರಾಗುವುದಕ್ಕಿಂತ) ಪ್ರಿಯವಾಗಿರುತ್ತದೆ. ಆದರೆ ಸ್ವದೇಶದಲ್ಲಿಯೇ ಉದ್ಯೋಗ ವಿಲ್ಲದವರಿಗೆ ದೇಶ ತೊರೆಯುವಂತೆ ಇಸ್ಲಾಮ್ ಪ್ರೇರೇಪಿಸುತ್ತದೆ. ಅಲ್ಲಾಹನ ಭೂಮಿಯು ವಿಶಾಲವಾಗಿದೆ. ಭೂಮಿಯಲ್ಲಿ ದೇವನು ಸಿದ್ಧಗೊಳಿಸಿದ ಸಂಪನ್ಮೂಲಗಳು ಒಂದೆಡೆಯಲ್ಲಿಯೇ ಶೇಖರವಾಗಿಲ್ಲ. ಅಥವಾ ನಿರ್ದಿಷ್ಟ ಪ್ರದೇಶಕ್ಕೆ ಸೀಮಿತವಾಗಿ ಉಳಿಯುವುದಿಲ್ಲವೆಂದು ಅದು ಜ್ಞಾಪಿಸುತ್ತದೆ. ಪ್ರವಾದಿ(ಸ) ಹೇಳಿರುವರು: "ನೀವು ಸಂಚರಿಸಿರಿ- ನಿಮಗೆ ಐಶ್ವರ್ಯ ಪ್ರಾಪ್ತವಾಗುವುದು." (ತಬ್ರಾನಿ)

ಅಲ್ಲಾಹ್ ಹೇಳಿರುವನು: "ಅಲ್ಲಾಹನ ಮಾರ್ಗದಲ್ಲಿ ವಲಸೆ ಹೋಗುವವನು ಭೂಮಿಯಲ್ಲಿ ಆಶ್ರಯ ಪಡೆಯಲು ಅನೇಕ ಸ್ಥಳಗಳನ್ನೂ ಜೀವನ ಸಾಗಿಸಲು ಸಾಕಷ್ಟು ಅವಕಾಶವನ್ನೂ ಕಾಣುವನು." (ಅನ್ನಿಸಾ :100)

"ಇನ್ನೊಂದು ವಿಭಾಗವು ಅಲ್ಲಾಹನ ಅನುಗ್ರಹವನ್ನು ಹುಡುಕುತ್ತಾ ಭೂಮಿಯಲ್ಲಿ ಸಂಚರಿಸುತ್ತಾರೆ." (ಅಲ್ ಮುಝ್ಝಮ್ಮಿಲ್ :20)

ಅಬ್ದುಲ್ಲಾ ಬಿನ್ ಉಮರ್‌ರು ಒಂದು ಘಟನೆಯನ್ನು ವರದಿ ಮಾಡಿದ್ದಾರೆ: ಓರ್ವ ಮದೀನಾ ನಿವಾಸಿಯು ಸ್ವದೇಶದಲ್ಲಿಯೇ ಮರಣ ಹೊಂದಿದನು. ಪ್ರವಾದಿಯವರು(ಸ) ಆತನ ಜನಾಝ ನಮಾಝ್ ನಿರ್ವಹಿಸಿದ ಬಳಿಕ ಹೀಗೆಂದರು: "ಇವರು ಬೇರೆ ದೇಶದಲ್ಲಿ ಮರಣ ಹೊಂದಿರುತ್ತಿದ್ದರೆ!" ಆಗ ಯಾರೋ ಒಬ್ಬರು ಪ್ರಶ್ನಿಸಿದರು: "ಪ್ರವಾದಿಗಳೇ, ಅದರಿಂದೇನಾಗುತ್ತಿತ್ತು?" ಪ್ರವಾದಿ(ಸ) ಉತ್ತರಿಸಿದರು: "ಪರದೇಶದಲ್ಲಿ ಮರಣ ಹೊಂದುವವರಿಗೆ ಸ್ವದೇಶದಿಂದ ಮರಣ ಹೊಂದಿದ ಸ್ಥಳದ ವರೆಗಿರುವಷ್ಟು ವಿಶಾಲವಾದ ಸ್ಥಳವು ಸ್ವರ್ಗ ಲೋಕದಲ್ಲಿ ದೊರೆಯುವುದು."

ಇನ್ನೊಂದು ವರದಿಯಲ್ಲಿ ಹೀಗಿದೆ: ಪ್ರವಾದಿಯವರು(ಸ)ಓರ್ವ ಮದೀನಾ ವಾಸಿಯ ಸಮಾಧಿಯ ಬಳಿ ನಿಂತು, "ಇವರು ಪರದೇಶದಲ್ಲಿ ಮರಣ ಹೊಂದಿರುತ್ತಿದ್ದರೆ!" ಎಂದು ಹೇಳಿದರು. ಸಮ್ಮತಾರ್ಹ ಕಾರ್ಯಗಳ ಸಾಧನೆಗಾಗಿ ದೇಶಾಟನೆ ಮತ್ತು ಸ್ವದೇಶ ತ್ಯಾಗವನ್ನು ಇಷ್ಟೊಂದು ಬಲವಾಗಿ ಪ್ರೋತ್ಸಾಹಿಸುವ ಬೇರೆ ಯಾವ ತತ್ತ್ವಸಂಹಿತೆಯಿದೆ?

ಇಂತಹ ಪ್ರವಾದಿ ವಚನಗಳ ಪ್ರೇರಣೆಯಿಂದ ಪೂರ್ವ ಕಾಲದ ಮುಸ್ಲಿಮರು; ಇಸ್ಲಾಮೀ ಪ್ರಚಾರ, ಆಹಾರ ಸಂಪಾದನೆ, ವಿದ್ಯಾಭ್ಯಾಸ, ದೇವ ಮಾರ್ಗದಲ್ಲಿ ಹೋರಾಟ ಇತ್ಯಾದಿಗಳಿಗಾಗಿ ಭೂಮಿಯ ಅಷ್ಟ ದಿಕ್ಕುಗಳಲ್ಲಿಯೂ ಸಂಚರಿಸುತ್ತಿದ್ದರು. ಪರಸ್ಪರ ಬೇರ್ಪಟ್ಟು ಹೋದ ಈರ್ವರು ಸಹೋದರರ ಪೈಕಿ ಒಬ್ಬಾತನು ಪಶ್ಚಿಮ ದಿಕ್ಕಿನಲ್ಲಿಯೂ ಇನ್ನೊಬ್ಬಾತನು ಪೂರ್ವ ದಿಕ್ಕಿನಲ್ಲಿಯೂ ಮರಣ ಹೊಂದಿದರು. ಅವರ ಮುಸ್ಲಿಮ್

ಾತೆಯೊಡನೆ ಸಹೋದರರು ಪರಸ್ಪರ ಬೇರ್ಪಟ್ಟ ಕಾರಣವನ್ನು ವಿಚಾರಿಸಿದಾಗ, "ವಿಭಿನ್ನ ್ರಿಯೆಗಳು ಅವರನ್ನು ಬೇರ್ಪಡಿಸಿತ್ತು" ಎಂದು ಹೇಳಿದರು.

ಕ್ಷಾಟನೆ

ಇನ್ನು ಕೆಲವರು, ಝಕಾತ್ ಮತ್ತು ದಾನ ಧರ್ಮಗಳನ್ನು ಮಾತ್ರ ಅವಲಂಬಿಸಿ ಾವುದೇ ಕಷ್ಟನಷ್ಟವಿಲ್ಲದೇ ಬಾಳಬೇಕೆಂದು ನಿರ್ಧರಿಸಿದ್ದಾರೆ. ಇತರರಿಂದ ಬೇಡುವುದು ತ್ಮನಿಂದೆ ಮತ್ತು ನೀಚಕಾರ್ಯವೆಂದು ತಿಳಿದಿದ್ದೂ ಅವರು ಭಿಕ್ಷೆ ಬೇಡುತ್ತಾರೆ. ಅವರು ರೋಗ್ಯವಂತರೂ ದುಡಿಯಬಲ್ಲವರೂ ಆಗಿದ್ದಾರೆ. ದೌರ್ಭಾಗ್ಯವಶಾತ್, ಇಸ್ಲಾಮಿ ಾಷ್ಟ್ರಗಳಲ್ಲಿ ಭಿಕ್ಷೆಬೇಡುವ ಜನರಲ್ಲಿ ಅಂಥವರೇ ಅಧಿಕವಾಗಿದ್ದಾರೆ. ರೋಗ್ಯವಂತರಾಗಿರುವವರೇ; ರಾಜರು, ಆಡಳಿತಗಾರರು ಮತ್ತು ಶ್ರೀಮಂತರ ಬಳಿ ಹೋಗಿ ವರನ್ನು ಹಾಡಿ ಹೊಗಳಿ ಮುಖ ಸ್ತುತಿ ಮಾಡಿ ಅದರಿಂದ ಪ್ರತಿಫಲ, ಬಹುಮಾನಗಳನ್ನು ಡೆಯುತ್ತಾರೆ. ದುಡಿದು ಸಂಪಾದಿಸುವ ಸಾಮರ್ಥ್ಯವಿರುವ ತನಕ ಅಂಥವರು ಝಕಾತ್ ಥವಾ ದಾನಧರ್ಮಗಳಿಗೆ ಅರ್ಹರಲ್ಲವೆಂದು ಇಸ್ಲಾಮ್ ಸ್ಪಷ್ಟ ಪಡಿಸಿದೆ. ಝಕಾತ್ ಪೇಕ್ಷಿಸಿದ ಇಬ್ಬರೊಡನೆ ಪ್ರವಾದಿವರ್ಯರು ಹೀಗೆ ಹೇಳಿದ್ದರು:

"ಸ್ಥಿತಿವಂತ ಮತ್ತು ದುಡಿದು ಸಂಪಾದಿಸಬಲ್ಲವರಿಗೆ ಝಕಾತ್‌ನಲ್ಲಿ ಪಾಲಿಲ್ಲ."

(ಅಹ್ಮದ್,ಅಬೂ ದಾವೂದ್)

"ಸ್ಥಿತಿವಂತ, ಸುಶಕ್ತ ಮತ್ತು ಆರೋಗ್ಯವಂತ ಅಂಗಾಂಗಗಳಿರುವವರಿಗೆ ಝಕಾತ್ ರ್ಮ ಬದ್ಧವಲ್ಲ."

(ಬುಖಾರಿ, ಮುಸ್ಲಿಮ್ ಹೊರತು ಇತರ ಐವರು ಹದೀಸ್ ವಿದ್ವಾಂಸರಿಂದ ಉಲ್ಲೇಖಿತ)

ದುಡಿಯದೆ ಸೋಮಾರಿಗಳಾಗಿದ್ದವರಿಗೆ ಝಕಾತ್‌ನಲ್ಲಿ ಪಾಲು ನೀಡುತ್ತಿರಲಿಲ್ಲ. ಡಿದು ಜೀವನಾವಶ್ಯಕತೆಗಳನ್ನು ಪೂರೈಸಲು ಪ್ರೇರೇಪಿಸುವುದೇ ಅದರ ಉದ್ದೇಶವಾಗಿದೆ.

ಇಸ್ಲಾಮ್, ಭಿಕ್ಷೆ ಬೇಡುವುದನ್ನು ಕಟುವಾಗಿ ನಿಷೇಧಿಸಿದೆ. ಭಿಕ್ಷಾಟನೆ ಬಗ್ಗೆ ಇಸ್ಲಾಮಿನ ೀರಣೆಯನ್ನು ಸ್ಪಷ್ಟಪಡಿಸುವ ಅನೇಕ ಪ್ರವಾದಿ ವಚನಗಳಿವೆ.

"ಜನರೊಡನೆ ನಿರಂತರ ಯಾಚಿಸುವವರು ತಮ್ಮ ಮುಖದಲ್ಲಿ ಮಾಂಸವೇ ಇಲ್ಲದ ಿಯಲ್ಲಿ ಅಂತ್ಯ ದಿನದಲ್ಲಿ ಪ್ರತ್ಯಕ್ಷರಾಗುವರು." (ಬುಖಾರಿ, ಮುಸ್ಲಿಮ್)

"ಸಂಪತ್ತು ಹೆಚ್ಚಲಿಕ್ಕಾಗಿ ಭಿಕ್ಷೆ ಬೇಡುವಾತನು ಬೆಂಕಿ ಕೆಂಡವನ್ನು ಬೇಡಿದವನಂತೆ. ು ಹೆಚ್ಚಲಿ ಅಥವಾ ಕಡಿಮೆಯಾಗಲಿ" (ಮುಸ್ಲಿಮ್)

"ಮೇಲಿನ ಕೈಯ್ಯು ಕೆಳಗಿನ ಕೈಗಿಂತ ಉತ್ತಮ." (ಬುಖಾರಿ, ಮುಸ್ಲಿಮ್)

"ಸ್ವಾವಲಂಬನೆ ಮತ್ತು ದಾನಿಯಾಗಲಿಕ್ಕಾಗಿ, ಸೌದೆ ಸಂಗ್ರಹಿಸಿ ಹೊತ್ತು ಮಾರುವುದು ಿ ಯಾಚಿಸುವುದಕ್ಕಿಂತ ಉತ್ತಮ. ಏಕೆಂದರೆ ಮೇಲಿನ ಕೈಯ್ಯು ಕೆಳಗಿನ ಕೈಗಿಂತ ಉತ್ತಮ."

(ಮುಸ್ಲಿಮ್)

"ಭಿಕ್ಷಾಟನೆಯ ಬಾಗಿಲನ್ನು ತೆರೆಯುವಾತನಿಗೆ ಅಲ್ಲಾಹನು ಬಡತನದ ಬಾಗಿಲನ ತೆರೆಯುವನು." (ಅಹ್ಮದ

ಒಬ್ಬರು ಪ್ರವಾದಿಯವರ(ಸ) ಬಳಿ ಬಂದು ಏನಾದರೂ ಕೊಡುವಂತೆ ಬೇಡಿದರ ಪ್ರವಾದಿಯವರು ಕೊಟ್ಟರು. ಅವರು ಮರಳಿ ಹೋಗುತ್ತಾ ಬಾಗಿಲ ಬಳಿಗೆ ತಲಪಿದಾ ಪ್ರವಾದಿಯವರು ಹೀಗೆಂದರು: "ಭಿಕ್ಷಾಟನೆಯ ಪರಿಣಾಮವನ್ನು ತಿಳಿದರೆ ಯಾರ ಬೇಡುತ್ತಿರಲಿಲ್ಲ." (ನಸಾಈ

"ಭಿಕ್ಷೆ ಬೇಡುವುದೆಂದರೆ ಸ್ವಂತ ಮುಖವನ್ನು ಗಾಯಗೊಳಿಸಿದಂತೆ; ಅದನ ಬಯಸುವವರು ಹಾಗೆ ಮಾಡಲಿ. ತನ್ನ ಮುಖಕ್ಕೆ ಗಾಯವಾಗಬಾರದೆಂದು ಬಯಸುವವ ಭಿಕ್ಷೆ ಬೇಡದಿರಲಿ. ಆದರೆ ಆಡಳಿತಗಾರನಿಂದ ಯಾಚಿಸುವುದು ಇದರಲ್ಲಿ ಸೇರಿಲ್ಲ. ಹಾಗೆಯೆ ಅನಿವಾರ್ಯ ಅಗತ್ಯಕ್ಕಾಗಿ ಯಾಚಿಸುವುದು ಕೂಡಾ." (ಅಬೂ ದಾವೂದ್, ನಸಾಈ, ತಿರ್ಮಿ

ಮುಖವು ಗೌರವ ಮತ್ತು ಮಾನವೀಯತೆಯ ಪ್ರತಿಬಿಂಬವಾಗಿದೆ. ಅದನ್ನು ಯಾಚನೆಯ ವಿರೂಪ ಗೊಳಿಸುತ್ತದೆ. ಆದರೆ ಎರಡು ಸಂದರ್ಭಗಳಲ್ಲಿ ಭಿಕ್ಷಾಟನೆ ಆಕ್ಷೇಪಾರ್ಹವಾಗುವುದೀ 1. ಆಡಳಿತಗಾರನೊಂದಿಗೆ 2. ಅನಿವಾರ್ಯ ಪರಿಸ್ಥಿತಿಗಳಲ್ಲಿ. ಭಿಕ್ಷೆ ಅಥವಾ ಯಾಚನೆಯ ಇಷ್ಟೊಂದು ಕಟುವಾಗಿ ನಿಷೇಧಿಸಿರುವುದಕ್ಕೆ ಕೆಲವು ಕಾರಣಗಳಿವೆ. ಬೇಡುವವನು, ಅಲ್ಲಾಹ ಹೊರತು ಇತರರ ಮುಂದೆ ತನ್ನ ಬೇಡಿಕೆಗಳನ್ನು ಸಮರ್ಪಿಸಿ ಅದರ ಪರಿಹಾರವನ್ನು ಅವರಿಂ ಅಪೇಕ್ಷಿಸುತ್ತಾನೆ. ಆತನು ಅನರ್ಹರಾದವರೊಡನೆ ತನ್ನ ಬೇಡಿಕೆಗಳನ್ನು ಸಲ್ಲಿಸಿ ಅವರಿಂ ಪರಿಹಾರ ಯಾಚಿಸುತ್ತಾನೆ. ಇದು ಸ್ವಂತ ವಿಶ್ವಾಸ ಮತ್ತು ಪ್ರಾಮಾಣಿಕತೆಗೆ ದ್ರೋ ಬಗೆಯುವುದಾಗಿದೆ. ಎರಡನೆಯದಾಗಿ, ಬೇಡುವುದು ಬೇಡಲ್ಪಡುವವನಿಗೆ ಮಾಡು ಅನ್ಯಾಯವಾಗಿದೆ. ಬೇಡುವಾತನಿಗೆ ಏನಾದರೂ ಕೊಡದಿದ್ದರೆ ಅಥವಾ ಕೊಡಲು ಸಾಧ್ಯವಿಲ್ಲದಿದ್ದ ಆತನು ಆಕ್ಷೇಪಕ್ಕೆ ಗುರಿಯಾಗುತ್ತಾನೆ. ಕೆಲವೊಮ್ಮೆ ದಾನ ನೀಡುವುದೇ ಮನಸ್ಸಿನಿಂದಾಗಿರಬಹುದು. ನೀಡದಿರುವುದರಿಂದ ನಾಚಿಕೆ ಮತ್ತು ಮನಸ್ಸಿಗೆ ನೋವಾಗಬಹು ಮೂರನೇಯದಾಗಿ ಬೇಡುವುದು ಕೆಲವೊಮ್ಮೆ ಸ್ವತಃ ಅನ್ಯಾಯವಾಗಬಹುದು. ತನ್ನೊ ಆತ ಸ್ವಯಂ ಅವಮಾನಿತನಾಗುತ್ತಾನೆ. ಆತನು ತನ್ನ ಸೃಷ್ಟಿಕರ್ತರಲ್ಲದವರಿಗೆ ವಿಧೇಯ ತೋರಿಸುತ್ತಾನೆ. ಅಪಮಾನವನ್ನು ಸ್ವಯಂ ಸ್ವೀಕರಿಸಿ ಅದರಿಂದ ಸಂತೃಪ್ತನಾಗುತ್ತಾನೆ. ತ ಸ್ವಾಭಿಮಾನ ಗೌರವಗಳನ್ನು ಸ್ವಯಂ ಕಳೆದುಕೊಳ್ಳುತ್ತಾನೆ. ತನ್ನ ತಾಳ್ಮೆ, ಸಂತೃಪ್ತಿ ಮ ತವಕ್ಕುಲ್‌ಗಳನ್ನು ಭಿಕ್ಷೆಗೆ ಮಾರುತ್ತಾನೆ.

ಈ ಹಿನ್ನಲೆಯಲ್ಲಿ ಭಿಕ್ಷೆಯನ್ನು ವೃತ್ತಿಯಾಗಿ ಮಾಡಿಕೊಂಡು, ಸಮಾಜಕ್ಕೆ ಭಾರವಾಗಿರ ಆರೋಗ್ಯ ಮತ್ತು ದೇಹ ಬಲವಿರುವ ಜನರಿಗೆ ಬುದ್ಧಿ ಕಲಿಸಬೇಕಾದುದು ಇಸ್ಲಾಮಿ ದೃಷ್ಟಿಯಲ್ಲಿ ಸರಕಾರಗಳ ಹೊಣೆಯಾಗಿದೆ. ಝಕಾತ್‌ನಲ್ಲಿ ತಮಗಿದೆಯೆಂದು ಸ್ವ ಭಾವಿಸುವ ಹಕ್ಕನ್ನು ಅವಲಂಬಿಸಿ ಜೀವನ ಸಾಗಿಸಬಹುದೆಂದು ಅವರು ತಿಳಿದಿರುತ್ತಾ ಅವರು ಝಕಾತ್‌ನಲ್ಲಿ ಪಾಲು ಕೇಳುವುದೇ ತಪ್ಪು. ಎಲ್ಲಾ ಅಪರಾಧಗಳಿಗೂ ನಿರ್ದಿಷ್ಟ

ಅಥವಾ ಪ್ರಾಯಶ್ಚಿತ್ತವನ್ನು ಆದೇಶಿಸಿಲ್ಲ. ಆದ್ದರಿಂದ, ಇಂತಹ ಅಪರಾಧಗಳಿಗೆ ಸ್ವಂತ ಅಭಿಪ್ರಾಯಗಳನ್ವಯ ಶಿಕ್ಷಾ ವಿಧಾನಗಳನ್ನು ಸ್ವೀಕರಿಸುವ ಸ್ವಾತಂತ್ರ್ಯ ಆಡಳಿತಗಾರರಿಗಿದೆ.

## ಭಿಕ್ಷಾಟನೆಯ ನಾನಾ ರೂಪಗಳು

ಭಿಕ್ಷಾಟನೆಯ ವೈವಿಧ್ಯಮಯ ರೂಪ ಮತ್ತು ಶೈಲಿಗಳಿವೆ. ಕೆಲವರ ಮಟ್ಟಿಗೆ ಅದು ಯಶಸ್ವಿಯಾಗುತ್ತದೆ. ಅದನ್ನು ಅವರು ಜೀವನೋಪಾಯದ ವೃತ್ತಿಯೆಂದು ಭಾವಿಸುತ್ತಾರೆ. ಆದರೆ ಅದು ವೃತ್ತಿಯ ಸೋಗು ಹಾಕಿದ ಹೀನ ಭಿಕ್ಷಾಟನೆಯಾಗಿದೆ. ಈ ಬಗ್ಗೆ ಇಮಾಮ್ ಗಝ್ಝಾಲಿಯವರು ತನ್ನ 'ಇಹ್ಯಾ'ದಲ್ಲಿ ಹೇಳಿರುವ ಮಾತುಗಳು ಬಹಳ ಪ್ರಸ್ತುತವಾಗಿವೆ. ಇಂತಹ ನೀಚ ವೃತ್ತಿಯನ್ನು ಅವರು ಭಿಕ್ಷಾಟನೆಯೆಂದು ಕರೆದಿದ್ದಾರೆ. ಜೀವನಾವಶ್ಯಕತೆಗಳ ಸಂಪಾದನೆಗಾಗಿ ಕೈ ಕಸುಬು ಇತ್ಯಾದಿಗಳ ಪ್ರಾಮುಖ್ಯವನ್ನು ವಿವರಿಸುತ್ತಾ ಹಲವು ರೀತಿಯ ಉದ್ಯೋಗಗಳನ್ನು ವಿಮರ್ಶಿಸಿದ ಬಳಿಕ ಅವರು ಬರೆಯುತ್ತಾರೆ-

ಪ್ರಾಥಮಿಕ ಹಂತದಲ್ಲಿ ಶಿಕ್ಷಣ ದೊರೆತು ಕಷ್ಟ ಸಹಿಸಿದರೆ ಮಾತ್ರ ಇಂತಹ ಉದ್ಯೋಗಗಳಿಗೆ ಹೊಂದಿಕೊಳ್ಳಬಹುದು. ಚಿಕ್ಕಂದಿನಲ್ಲಿ ಅಸಡ್ಡೆಯಿಂದ ಅಥವಾ ಇತರ ಅಡ್ಡಿಗಳಿಂದಾಗಿ ಅವುಗಳಲ್ಲಿ ನಿರತರಾಗಲು ಕೆಲವರಿಗೆ ಸಾಧ್ಯವಾಗುವುದಿಲ್ಲ. ಆದ್ದರಿಂದ ಜೀವನಾಧಾರದ ಗಳಿಕೆಯಲ್ಲಿ ಅವರು ವಿಫಲರಾಗುತ್ತಾರೆ. ಈ ಮಂದಿ ಇತರರು ದುಡಿದು ಸಂಪಾದಿಸಿದುದನ್ನು ತಿನ್ನಬೇಕಾಗುತ್ತದೆ. ಈ ಪರಿಸ್ಥಿತಿಯಿಂದಾಗಿ ಎರಡು ನೀಚ ವೃತ್ತಿಗಳು ಜನ್ಮ ತಾಳುತ್ತವೆ; ಕಳ್ಳತನ ಮತ್ತು ಭಿಕ್ಷಾಟನೆ. ಅನ್ಯರ ಶ್ರಮಫಲವೇ ಉಭಯ ವರ್ಗದ ಆಹಾರವೆಂಬುದು ಅವರಲ್ಲಿರುವ ಸಮಾನ ಅಂಶವಾಗಿದೆ. ಆದರೆ ಇವರ ಬಗ್ಗೆ ಜನರು ಎಚ್ಚರಿಕೆ ವಹಿಸಿ ಅವರ ಸುಲಿಗೆಯಿಂದ ತಮ್ಮ ಸಂಪತ್ತನ್ನು ಭದ್ರಗೊಳಿಸಿದ್ದರಿಂದಾಗಿ ಅವರು ಬೇರೆ ಮಾರ್ಗೋಪಾಯಗಳನ್ನು ಕಂಡು ಹಿಡಿಯಬೇಕಾಯಿತು. ಕಳ್ಳರಲ್ಲಿ ಬಲಾಢ್ಯರೂ ದುರ್ಬಲರೂ ಇರುತ್ತಾರಷ್ಟೆ. ಬಲಾಢ್ಯರು ತಂಡ ರಚಿಸಿ ದಾರಿ ಹೋಕರನ್ನು ಅಡ್ಡಗಟ್ಟಿ ಲೂಟಿ-ದರೋಡೆ ಮಾಡಿದರು. ದುರ್ಬಲರು ಜನರ ಅಸಡ್ಡೆಯನ್ನು ಬಳಸಿ ಗೋಡೆ ಹಾರಿ ಅಥವಾ ಕನ್ನ ಕೊರೆದು ಕಳ್ಳತನ ನಡೆಸಿದರು.

ಆದರೆ, ಭಿಕ್ಷುಕರಿಗೆ ಜನರು ಹೀಗೆ ಉತ್ತರಿಸಿದರು:' "ಇತರರಂತೆ ನಿಮಗೆ ದುಡಿಯಲು ಆಗುವುದಿಲ್ಲವೇ? ನೀನು ಏನಾದರೂ ಕೆಲಸ ಮಾಡದೆ ತಿರುಗುವುದೇಕೆ? ಇದರಿಂದಾಗಿ ಅನ್ಯರ ಹಣವನ್ನು ಲಪಟಾಯಿಸುವ ಬಗ್ಗೆ ಹಾಗೂ ದುಡಿಯದಿರುವುದಕ್ಕೆ ಸಮರ್ಥನೆಯ ಕುರಿತು ಆಲೋಚಿಸ ತೊಡಗಿದರು. ಅಂತೆಯೇ ಒಂದು ವರ್ಗವು ಕುರುಡರ ಸೋಗು ಹಾಕಿ ಅಥವಾ ತಮ್ಮ ಮಕ್ಕಳನ್ನು ಕುರುಡರಂತೆ ಮಾಡಿ, ಭಿಕ್ಷಾಟನೆ ಮತ್ತು ಉದ್ಯೋಗ ಮಾಡದಿರುವುದಕ್ಕೆ ಸಮರ್ಥನೆಯನ್ನು ಜನರ ಮುಂದಿಟ್ಟರು. ಹಾಗಾಗಿ ಜನರು ಏನಾದರೂ ಕೊಡುತ್ತಾರೆ. ಇನ್ನು ಕೆಲವರು ವಾಸಿಯಾಗದ ಕೃತಕ ಹುಣ್ಣುಗಳನ್ನು ತೋರಿಸಿ, ಪಕ್ಷವಾತ ಪೀಡಿತರಂತೆ ನಟಿಸಿ ಅಥವಾ ಹುಚ್ಚರ ಅಭಿನಯದಿಂದ ರಂಗಕ್ಕಿಳಿಯುತ್ತಾರೆ. ಇತರ ಕೆಲವರು ಜನರನ್ನು

ರಂಜಿಸುವ ಭಾವನೆಯಿಂದ ಕೆಲವು ಚಮತ್ಕಾರಗಳೊಂದಿಗೆ ಬರುತ್ತಾರೆ. ಅದನ್ನು ನೋಡಿ ಖುಷಿಪಟ್ಟು ಜನರು ಅವರಿಗೆ ಸಾಕಷ್ಟು ನೀಡುತ್ತಾರೆ. ಆದರೆ ಮೋಜು ಮುಗಿದಾಗ ಅವರು ವ್ಯಥೆ ಪಡುತ್ತಾರೆ. ಆಗ ವ್ಯಥೆ ಪಟ್ಟು ಏನು ಪ್ರಯೋಜನ? ಜನರನ್ನು ನಗಿಸಲಿಕ್ಕಾಗಿ ಕೆಲವರು ವಿದೂಷಕ ನಟನೆ, ಹಾಸ್ಯ ಚಟಾಕಿ, ಅಪೂರ್ವ ಹಾಡುಗಳು ಅಥವಾ ಪ್ರಾಸ ಬದ್ಧವಾದ ಮಾತುಗಳು, ಆಕರ್ಷಕ ತಾಳಬದ್ಧ ಕವಿತೆಗಳನ್ನೋ ಬಳಸುತ್ತಾರೆ. ಅವುಗಳಲ್ಲಿ ಪಕ್ಷಪಾತದ ಛಾಯೆ ಇದ್ದರೆ ಹೆಚ್ಚು ಜನಪ್ರಿಯವಾಗುತ್ತದೆ. ಕೆಲವು ಬೀದಿ ಗಾಯಕರು ಯುವಕರ ಲೈಂಗಿಕ ಅಭಿರುಚಿಯನ್ನು ಕೆದಕುವಂತಹ ಪ್ರೇಮ ಗೀತೆಗಳನ್ನು ಹಾಡುತ್ತಾರೆ. ಔಷಧಗಳೆಂದು ಏನೇನನ್ನೋ ಮಾರಾಟ ಮಾಡಿ ಪಾಮರರನ್ನೂ ಮಕ್ಕಳನ್ನೂ ವಂಚಿಸುವ ಬೀದಿ ವೈದ್ಯರೂ ಮಂತ್ರವಾದಿಗಳೂ ಈ ವರ್ಗಕ್ಕೆ ಸೇರಿದ್ದಾರೆ. ಗಿಳಿ ಲಕ್ಷಣ, ಹಸ್ತಲಕ್ಷಣಗಳೂ ಅದರ ಇನ್ನೊಂದು ರೂಪವಾಗಿದೆ. ಯಾವುದೇ ತಿಳುವಳಿಕೆಯಿಲ್ಲದೆ ಉಪದೇಶ ಭಾಷಣ ಮಾಡುವವರೂ ನಿಲುವಂಗಿ ಧರಿಸಿ ಮಿಂಬರ್‌ನಲ್ಲಿ(ಭಾಷಣ ವೇದಿಕೆಯಲ್ಲಿ) ಪ್ರತ್ಯಕ್ಷವಾಗುವವರೂ ಇದೆ ಗುಂಪಿನವರಾಗಿದ್ದಾರೆ. ಭಿಕ್ಷಾಟನೆಯ ವಿವಿಧ ರೂಪಗಳಿಂದ ಜನರನ್ನು ಮರುಳುಗೊಳಿಸಿ ಅವರ ಹಣ ಕಬಳಿಸುವುದೇ ಈ ಮಂದಿಯ ಧ್ಯೇಯ. ಇಂತಹ ಭಿಕ್ಷಾಟನೆಯ ರೂಪಗಳು ಸಾವಿರ ಗಟ್ಟಲೆಯಿವೆ..."

(ಇಹ್ಯಾ ಉಲೂಮುದ್ದೀನ್, ಭಾಗ3, ಪುಟ 197-98

ಭಿಕ್ಷಾಟನೆಯ ಸಹಸ್ರಾರು ರೂಪಗಳನ್ನು ಕಳ್ಳತನದೊಡನೆ ಹೋಲಿಸಿದ ಇಮಾಮ ಗಝ್ಝಾಲಿಯವರ ಮನಮುಟ್ಟುವ ವಿಶ್ಲೇಷಣೆಯನ್ನು ನಾವು ನೋಡಿದೆವು. ಈ ಎರಡು ನೀಚ ವೃತ್ತಿಗಳಿಂದ, ಅನ್ಯರ ಶ್ರಮ ಫಲವನ್ನು ಅಪಹರಿಸಿ, ಇಸ್ಲಾಮ್ ಅಥವಾ ಮಾನವ ಬುದ್ಧಿಯ ಒಪ್ಪದ ಕುಟಿಲೋಪಾಯಗಳನ್ನು ಬಳಸಿ ಅನ್ಯರ ಸಂಪತ್ತನ್ನು ದೋಚಲಾಗುತ್ತದೆ. ಅದ ಪಿಶಾಚಿಯ ಆಡಳಿತ ವ್ಯವಸ್ಥೆಯಲ್ಲಿ ಮಾತ್ರ ಸಮ್ಮತಾರ್ಹವಾದೀತು! ಇಮಾಮ ಗಝ್ಝಾಲಿಯವರು ಪ್ರಸ್ತುತ ವಿಶ್ಲೇಷಣೆಯನ್ನು ಎಷ್ಟೊಂದು ಸೂಕ್ಷ್ಮ ಮತ್ತು ಜಾಣ್ಮೆಯಿಂದ ನಡೆಸಿರುವರೆಂಬುದನ್ನು ನೋಡಿರಿ. ಭಿಕ್ಷಾಟನೆಯ ಅತಿ ಸಣ್ಣ ರೂಪಾಂತರವೂ ಅವರ ಶೋ ದೃಷ್ಟಿಯಿಂದ ತಪ್ಪಿ ಹೋಗಿಲ್ಲ. ಪ್ರಾಸಬದ್ಧ ಮಾತುಗಳನ್ನು ಹೇಳುವುದನ್ನೂ ತಿಳುವಳಿಕೆಯಿಲ್ಲದವರ ಮಾಡುವ ಭಾಷಣ ಪ್ರಹಸನಗಳನ್ನೂ ಅವರು ಭಿಕ್ಷಾಟನೆಯ ಯಾದಿಯಲ್ಲಿ ಸೇರಿಸಿದ್ದಾರೆ

## ಉದ್ಯೋಗ ಮತ್ತು ಆರೋಗ್ಯ

ಉದ್ಯೋಗ ಮಾಡುವಷ್ಟು ಆರೋಗ್ಯವಿದ್ದರೂ ಇತರ ದೌರ್ಬಲ್ಯಗಳಿಂದಾ ಉದ್ಯೋಗದಲ್ಲಿ ವಿಫಲರಾಗಿ ಅದರಿಂದ ದೂರವಿರುವವರಿದ್ದಾರೆ. ಅವರು ತಮ್ಮ ಸ್ವಂ ಕುಟುಂಬ ಪೋಷಣೆಯ ಹೊಣೆಯನ್ನು ಆಡಳಿತಗಾರನಿಗೆ ಒಪ್ಪಿಸಿ ಅವಶ್ಯಕ ನೆರವನ ಸರಕಾರದಿಂದ ಪಡೆದು ಉದ್ಯೋಗದಿಂದ ದೂರವುಳಿಯುವುದೇ ಕೆಲವೊಮ್ಮೆ ಅವರಿ ಯೋಗ್ಯವಾಗಿರುತ್ತದೆ. ಆದರೆ, ಈ ಮಂದಿಗೆ ಸಾಧ್ಯವಿರುವ ಉದ್ಯೋಗವನ್ನು ಒದಗಿ

ಅದನ್ನು ನಿರ್ವಹಿಸುವಂತೆ ಸಹಕರಿಸುವುದು ಸಮಾಜದ ವಿಶೇಷತಃ ಕುಟುಂಬ ಸಂಬಂಧಿಕರ ಹೊಣೆಯೆಂದು ಇಸ್ಲಾಮ್ ಆದೇಶಿಸಿದೆ. ಅನಸ್ ಬಿನ್ ಮಾಲಿಕ್ ವರದಿ ಮಾಡಿದ ಘಟನೆಯೊಂದರಿಂದ ಅದು ವ್ಯಕ್ತವಾಗುತ್ತದೆ.

ಓರ್ವ ಅನ್ಸಾರಿ ಪ್ರವಾದಿಯವರ(ಸ) ಬಳಿ ಬಂದರು: "ಮನೆಯಲ್ಲಿ ಏನಿದೆ?" ಎಂದು ಪ್ರವಾದಿ(ಸ) ವಿಚಾರಿಸಿದರು. ಅನ್ಸಾರಿ ಹೇಳಿದರು: "ಒಂದು ಚದ್ದರವಿದೆ, ಅದನ್ನು ಕೆಲವೊಮ್ಮೆ ಲುಂಗಿಯಾಗಿ ಬಳಸುತ್ತೇನೆ, ಕೆಲವೊಮ್ಮೆ ಒಂಟೆಯ ಬೆನ್ನಿಗೆ ಹಾಸುತ್ತೇನೆ. ಅದಲ್ಲದೇ ನಾವು ನೀರು ಕುಡಿಯುವ ಒಂದು ಪಾತ್ರೆಯಿದೆ." ಪ್ರವಾದಿಯವರು(ಸ) ಆ ವಸ್ತುವನ್ನು ತರುವಂತೆ ತಿಳಿಸಿದರು. ಅನ್ಸಾರಿ ಅವುಗಳನ್ನು ತಂದರು. ಅವೆರಡನ್ನೂ ಎತ್ತಿ ತೋರಿಸಿ ಪ್ರವಾದಿಯವರು(ಸ) "ಇದನ್ನು ಖರೀದಿಸುವವರು ಯಾರಿದ್ದಾರೆ?" ಎಂದು ಪ್ರಶ್ನಿಸಿದರು- ಒಬ್ಬರು ಅದನ್ನು ನಾನು ಒಂದು ದಿರ್ಹಮ್‌ಗೆ ಖರೀದಿಸುತ್ತೇನೆ ಎಂದು ಹೇಳಿದರು. "ಅದಕ್ಕಿಂತ ಹೆಚ್ಚು ಯಾರಾದರೂ ನೀಡುವವರಿದ್ದಾರೆಯೇ?" ಎಂದು ಪ್ರವಾದಿ(ಸ) ಕೇಳಿದರು. ಎರಡು ದಿರ್ಹಮ್ ಕೊಡುತ್ತೇನೆಂದು ಇನ್ನೊಬ್ಬರು ಹೇಳಿದರು. ಆ ಎರಡು ವಸ್ತುಗಳನ್ನೂ ಅವರಿಗೆ ಮಾರಿದ ಬಳಿಕ ಪ್ರವಾದಿವರ್ಯರು ಅನ್ಸಾರಿಯೊಡನೆ ಹೇಳಿದರು:

"ಇದರಲ್ಲಿ ಒಂದು ದಿರ್ಹಮ್‌ನಿಂದ ಆಹಾರ ಪದಾರ್ಥಗಳನ್ನು ಖರೀದಿಸಿ ನಿನ್ನ ಮನೆಯವರಿಗೆ ಕೊಡು, ಉಳಿದ ಹಣದಿಂದ ಒಂದು ಕೊಡಲಿ ಖರೀದಿಸು."

ಅನ್ಸಾರಿ ಕೊಡಲಿ ಖರೀದಿಸಿ ತಂದರು. ಅದಕ್ಕೊಂದು ಕೈ ಜೋಡಿಸಿದ ಬಳಿಕ ಪ್ರವಾದಿ(ಸ) ಹೀಗೆಂದರು: "ಹೋಗಿ ಸೌದೆ ಕಡಿದು ಮಾರಾಟ ಮಾಡು. ಹದಿನೈದು ದಿನಗಳ ತನಕ ನೀನು ಇಲ್ಲಿಗೆ ಬರಬಾರದು." ಅವರು ಸೌದೆ ಕಡಿದು ಮಾರಾಟ ಆರಂಭಿಸಿದರು. 15 ದಿನಗಳ ಬಳಿಕ ಮರಳಿದಾಗ ಹತ್ತು ದಿರ್ಹಮ್ ಸಂಪಾದನೆಯಾಗಿತ್ತು. ಪ್ರವಾದಿ(ಸ) ಹೇಳಿದರು, "ಅಂತ್ಯದಿನದಲ್ಲಿ ಭಿಕ್ಷಾಟನೆಯು ನಿನ್ನ ಮುಖವನ್ನು ಕಳಂಕಿತ ಗೊಳಿಸದಿರಲಿಕ್ಕಾಗಿ ನಿನಗೆ ಇದೇ ಉತ್ತಮ, ಮೂರು ವರ್ಗದ ಜನರಿಗೆ ಮಾತ್ರ ಭಿಕ್ಷೆ ಬೇಡುವುದನ್ನು ಅನುಮತಿಸಲಾಗಿದೆ. ಕಡು ಬಡವ, ಭಾರೀ ಸಾಲಗಾರ ಮತ್ತು ಅಪರಾಧಕ್ಕೆ ದಂಡ ತೆರಬೇಕಾದವ-".

ದುಡಿಯುವ ಸಾಮರ್ಥ್ಯವಿದ್ದುದರಿಂದ ಪ್ರವಾದಿಯವರು(ಸ) ಆ ಅನ್ಸಾರಿಗೆ ಝಕಾತ್ ನೀಡಲು ಮುಂದಾಗಲಿಲ್ಲವೆಂದು ಈ ಘಟನೆಯಿಂದ ವ್ಯಕ್ತವಾಗುತ್ತದೆ. ಜೀವನೋಪಾಯವೆಲ್ಲವೂ ಮುಚ್ಚಿ, ಉದ್ಯೋಗದೊರಕಿಸಲಸಾಧ್ಯವಾದವರು ಮಾತ್ರ ಝಕಾತ್‌ಗೆ ಅರ್ಹರಾಗುತ್ತಾರೆ. ಆದರೆ, ಅಂತಹ ಸಂದರ್ಭದಲ್ಲಿ ಉದ್ಯೋಗ ದೊರಕಿಸಿ ಕೊಡಬೇಕಾದುದು ಸರಕಾರದ ಕರ್ತವ್ಯವಾಗಿದೆ.

ಪ್ರವಾದಿಯವರು(ಸ) ಅಂಗೀಕರಿಸಿದ ಈ ವಿಧಾನವನ್ನು ಅನೇಕ ಶತಮಾನಗಳ ಬಳಿಕ ಇತರ ತತ್ತ್ವ ಸಿದ್ಧಾಂತಗಳು ಜಾರಿಗೊಳಿಸಿತೆಂಬುದನ್ನು ಇಲ್ಲಿ ಗಮನಿಸಬೇಕಾಗಿದೆ. ಇತರ ಹಲವರು ಮಾಡುವಂತೆ ತಾತ್ಕಾಲಿಕ ನೆರವು ನೀಡಿ ಭಿಕ್ಷಾಟನೆ ಸಮಸ್ಯೆಯನ್ನು ಬಗೆಹರಿಸಬಹುದೆಂದು

ಇಸ್ಲಾಮ್ ಭಾವಿಸುವುದಿಲ್ಲ. ಹಾಗೆಯೇ ಉಪದೇಶ ಅಥವಾ 'ಭಿಕ್ಷಾಟನೆ ನಿಷೇಧಿತ ವಲಯ'ಗಳನ್ನು ರಚಿಸಿ ಅದನ್ನು ಪರಿಹರಿಸಲು ಯತ್ನಿಸಲಿಲ್ಲ. ಬದಲಾಗಿ ಅದು ಭಿಕ್ಷುಕನೊಂದಿಗೆ ಸಹಕರಿಸಿ ಸಮಸ್ಯೆಯನ್ನು ಸಮರ್ಥವಾಗಿ ಬಗೆಹರಿಸಿತು. ಅವನ ಸಾಮರ್ಥ್ಯವು ಎಷ್ಟೇ ತುಚ್ಛವಾಗಿದ್ದರೂ ಅದನ್ನು ಸಂಪೂರ್ಣವಾಗಿ ಬಳಸಬೇಕೆಂದು ಇಸ್ಲಾಮ್ ಕಲಿಸಿತು. ಉಪಾಯಗಳು ಎಷ್ಟೇ ದುರ್ಬಲವಾಗಿದ್ದರೂ ಅದನ್ನು ಪ್ರಯೋಗಿಸಲು ಪ್ರೇರೇಪಿಸಿತು. ಮಾಡಬಹುದಾದ ಕೆಲಸವನ್ನು, ದೊರಕಿಸುವ ಅವಕಾಶವಿದ್ದರೆ ಭಿಕ್ಷೆಯನ್ನು ಅವಲಂಬಿಸಬಾರದೆಂದು ಪ್ರವಾದಿಯವರು(ಸ) ಅನ್ಸಾರ್‌ನಿಗೆ ಮನವರಿಕೆ ಮಾಡಿಸಿದ್ದನ್ನು ನಾವು ಮೇಲಿನ ಘಟನೆಯಲ್ಲಿ ನೋಡಿದೆವು. ಸಮ್ಮತಾರ್ಹ ಸಂಪನ್ಮೂಲಗಳ ಗಳಿಕೆಗಾಗಿ ಮಾಡುವ ಯಾವುದೇ ಉದ್ಯೋಗವು- ಸೌದೆ ಒಡೆದು ಮಾರುವುದು ಕೂಡಾ-ಅಭಿಮಾನಾರ್ಹವೆಂದು ಸೂಚಿಸಿದರು. ತನ್ನ ಪರಿಸರ, ದೈಹಿಕ ಸಾಮರ್ಥ್ಯಕ್ಕೆ ತಕ್ಕುದಾದ ಕೆಲಸವನ್ನು ಅವರು ತಿಳಿಸಿದರು. ಆ ಕೆಲಸವು ಆತನಿಗೆ ಹಿಡಿಸುವುದೇ ಎಂಬುದನ್ನು ತಿಳಿಯಲಿಕ್ಕಾಗಿ 15 ದಿನಗಳ ಅವಧಿಯನ್ನೂ ನಿರ್ಣಯಿಸಿದರು. ಯೋಗ್ಯವಾದರೆ ಮುಂದುವರಿಯಬಹುದು. ಅಲ್ಲದಿದ್ದರೆ ಆ ಅವಧಿಯಲ್ಲಿ ಬೇರೆ ಕೆಲಸ ಮಾಡಬಹುದಾಗಿತ್ತು. ಸಮಸ್ಯೆಯನ್ನು ಕಾರ್ಯತಃ ಬಗೆಹರಿಸಿದ ಬಳಿಕ ಭಿಕ್ಷಾಟನೆಯನ್ನು ತೊರೆಯುವ ಮತ್ತು ಆ ಬಗ್ಗೆ ಜಿಗುಪ್ಸೆ ಮೂಡಿಸುವಂತಹ ಮನಮುಟ್ಟುವ ಉಪದೇಶವನ್ನೂ ಆತನಿಗೆ ನೀಡಿದರು. ಕೊನೆಯಲ್ಲಿ ಭಿಕ್ಷಾಟನೆಯು ಅನಿವಾರ್ಯವಾದ ಮೂರು ವರ್ಗಗಳನ್ನೂ ತಿಳಿಸಿದರು.

ಪ್ರವಾದಿವರ್ಯರು(ಸ) ತೋರಿಸಿದ ವಿವೇಕಪೂರ್ಣ ವಿಧಾನಗಳನ್ನು ನಾವು ಅವಲಂಬಿಸಿದ್ದರೆ! ಉಪದೇಶ ಮತ್ತು ಭಾಷಣಗಳಿಂದ ಭಿಕ್ಷಾಟನೆಯ ವಿರುದ್ಧ ಯುದ್ಧ ಸಾರುವುದಕ್ಕಿಂತ ಮುಂಚೆ ನಿರುದ್ಯೋಗಿಗೆ ಉದ್ಯೋಗಾವಕಾಶವನ್ನು ಒದಗಿಸಿ ಈ ಸಮಸ್ಯೆಯ ಪರಿಹಾರಕ್ಕೆ ಪ್ರಯತ್ನಿಸಬೇಕು.

## ಸಾರಾಂಶ

ಈ ವರೆಗೆ ಪ್ರತಿಪಾದಿಸಿದ ವಿಷಯಗಳನ್ನು ಹೀಗೆ ಸಂಕ್ಷೇಪಿಸಬಹುದು. ಆಹಾರ ಸಂಪಾದನೆಗಾಗಿ ಆಕಾಶದ ಕೆಳಗೆ ಭೂಮಿಯ ಮೂಲೆ ಮೂಲೆಗಳಿಗೆ ಹೋಗಿ ದುಡಿಯುವುದು, ಶ್ರಮಿಸುವುದು ಮುಸ್ಲಿಮನ ಕರ್ತವ್ಯವಾಗಿದೆ. ಬೇಸಾಯ, ಕೈಗಾರಿಕೆ, ವ್ಯಾಪಾರ, ಬರವಣಿಗೆ ಇತ್ಯಾದಿ ಯಾವ ಕೆಲಸಗಳಾದರೂ ಸರಿ. ಉದ್ಯೋಗವು ಸ್ವಂತದ್ದಾಗಿರಲಿ ಅಥವಾ ಇತರರ ಆಶ್ರಯದಲ್ಲಿರಲಿ.

ಉದ್ಯೋಗದಿಂದ ವ್ಯಕ್ತಿಯು ಸ್ವಾವಲಂಬಿಯಾಗುತ್ತಾನೆ. ತನ್ನ ಮತ್ತು ಕುಟುಂಬದ ಜೀವನಾವಶ್ಯಕತೆಗಳ ಪೂರೈಕೆ ಸಾಧ್ಯವಾಗುತ್ತದೆ. ಸರಕಾರ, ಸಂಸ್ಥೆ ಅಥವಾ ವ್ಯಕ್ತಿಗಳ ನೆರವಿಲ್ಲದೆ ಆತ ಬಾಳಬಹುದು. ತನ್ಮೂಲಕ ಬಡತನದಿಂದ ಸ್ವಯಂ ಮುಕ್ತನಾಗಿ ಸಮಾಜವನ್ನು ಅದರಿಂದ ಮುಕ್ತಗೊಳಿಸಲಿಕ್ಕಾಗಿ ತನ್ನ ಪಾತ್ರವನ್ನು ನಿರ್ವಹಿಸಿದಂತಾಗುವುದು.

ಜನಸಂಖ್ಯಾ ಹೆಚ್ಚಳ, ನಿರುದ್ಯೋಗ ಅಥವಾ ಆಹಾರದ ಕೊರತೆಯಿಂದ ಸ್ವದೇಶದಲ್ಲಿ ಬಡತನಕ್ಕೆ ಗುರಿಯಾದರೆ ಅಲ್ಲಾಹನ ಅನುಗ್ರಹವನ್ನು ಹುಡುಕುತ್ತಾ ಭೂಮಿಯಲ್ಲಿ

ಸಂಚರಿಸಬೇಕು. ಅಲ್ಲಾಹನ ಭೂಮಿಯು ವಿಶಾಲವಾಗಿದೆ.

ದುಡಿಯ ಬಲ್ಲವನಿಗೆ, ಗೌರವಾರ್ಹ ಜೀವನ ನಿರ್ವಹಣೆಗಾಗಿ ಅವಶ್ಯಕ ಸಹಾಯ ಸಲಕರಣೆಗಳನ್ನು ಒದಗಿಸಬೇಕಾದುದು ಮುಸ್ಲಿಮ್ ಸಮುದಾಯದ ಕರ್ತವ್ಯವಾಗಿದೆ." ಒಳಿತು ಮತ್ತು ದೇವ ಭಕ್ತಿಯ ವಿಷಯದಲ್ಲಿ ನೀವು ಪರಸ್ಪರ ಸಹಕರಿಸಿರಿ" ಎಂಬ ದಿವ್ಯ ವಚನದ ತಾತ್ಪರ್ಯವೂ ಅದೇ ಆಗಿದೆ.

ಸೂಕ್ತ ಉದ್ಯೋಗ ದೊರಕಿಸಿಕೊಳ್ಳಲು ಸಾಧ್ಯವಾಗದವರಿಗೆ ಅದನ್ನು ಒದಗಿಸಬೇಕಾದುದು ಆಡಳಿತಗಾರರ ಕರ್ತವ್ಯವಾಗಿದೆ. ಯಾಕೆಂದರೆ, ಆತನು ತನ್ನ ಪ್ರಜೆಗಳ ಬಗ್ಗೆ ಹೊಣೆಗಾರನಾಗಿದ್ದಾನೆ. ಉದ್ಯೋಗ ನಿರ್ವಹಿಸ ಬಯಸುವವರಿಗೆ ಅಗತ್ಯವಿರುವ ಸವಲತ್ತುಗಳನ್ನು ಒದಗಿಸಬೇಕಾದುದು ಮುಸ್ಲಿಮ್ ಸಮುದಾಯ ಮತ್ತು ಸರಕಾರದ ಹೊಣೆಯಾಗಿದೆ. ವ್ಯಾಪಾರ ಅಥವಾ ಬೇಸಾಯಕ್ಕೆ ಮೂಲಧನ ಅಥವಾ ಉಪಕರಣಗಳ ಅಗತ್ಯವಿದ್ದಾಗ ಝಕಾತ್ ಅಥವಾ ರಾಷ್ಟ್ರದ ಇತರ ಆದಾಯಗಳಿಂದ ಆಡಳಿತಗಾರರು ನೆರವು ನೀಡಬೇಕು.

ಹಾಗೆಯೇ, ಬಡತನ ನಿವಾರಣೆಗಾಗಿ ಸಕಲ ಸಾಮರ್ಥ್ಯಗಳನ್ನೂ ಬಳಸಿ, ಎಲ್ಲಾ ಜನ ಬಲ ಮತ್ತು ಧನ ಬಲವನ್ನು ಉಪಯೋಗಿಸಿ ದೇಶಕ್ಕೆ ಬೇಕಾದ ಸಂಪನ್ಮೂಲಗಳನ್ನು ಉತ್ಪಾದಿಸಬೇಕಾದುದು ಆಡಳಿತಗಾರರೂ ಪ್ರಜೆಗಳೂ ಸೇರಿರುವ ಮುಸ್ಲಿಮ್ ಸಮುದಾಯದ ಸಾಮೂಹಿಕ ಹೊಣೆಗಾರಿಕೆಯಾಗಿದೆ. ಬಡತನ ನಿರ್ಮೂಲನದಲ್ಲಿ ಉತ್ಪಾದನೆಯ ಕಾರ್ಯದಕ್ಷತೆ ಮತ್ತು ಉತ್ಪಾದನೆಗಳ ಹೆಚ್ಚಳಕ್ಕೆ ವಿಶೇಷ ಪ್ರಾಮುಖ್ಯವಿದೆ.

ಮುಸ್ಲಿಮ್ ಸಮಾಜವೆಂಬ ಈ ಕಟ್ಟಡದ ಎಲ್ಲ ಬಿರುಕುಗಳನ್ನೂ ಸಾಮೂಹಿಕ ಪ್ರಜ್ಞೆಯಿಂದ ಮುಚ್ಚಿ, ಸರ್ವತೋಮುಖ ಅಭಿವೃದ್ಧಿಗೆ ಅಗತ್ಯವಿರುವ ಕೈಗಾರಿಕೆ ಮತ್ತಿತರ ಯೋಜನೆಗಳ ಬಗ್ಗೆ ಸಮಾಲೋಚಿಸಿ ಕಾರ್ಯಕ್ರಮಗಳನ್ನು ರೂಪಿಸುವುದು ಸಮುದಾಯದ ಸಾಮೂಹಿಕ ಕರ್ತವ್ಯವಾಗಿದೆ. ಸಮಾಜದ ಒಂದು ವರ್ಗವು ಆ ಕಾರ್ಯವನ್ನು ಮಾಡಿದರೆ ಇತರೆಲ್ಲರೂ ಅದನ್ನು ಮಾಡದಿರುವ ತಪ್ಪಿನಿಂದ ಮುಕ್ತರಾಗುತ್ತಾರೆ. ಯಾರೂ ಮಾಡದಿದ್ದರೆ ಸಮಾಜವೂ ವಿಶೇಷತಃ ಆಡಳಿತಗಾರರೂ ಅಪರಾಧಿಗಳಾಗುತ್ತಾರೆ.

7

# ಕುಟುಂಬ ಸಂಬಂಧಿಕರ ಹೊಣೆ

ಉದ್ಯೋಗ ಮತ್ತು ದುಡಿಮೆಯೆಂಬ ಅಸ್ತ್ರಗಳಿಂದ ಬಡತನದ ವಿರುದ್ಧ ಹೋರಾಟ- ಇದು ಬಡತನ ನಿರ್ಮೂಲನಕ್ಕೆ ಇಸ್ಲಾಮ್ ಅಂಗೀಕರಿಸಿದ ಪ್ರಥಮ ಮಾರ್ಗ. ಆದರೆ ಉದ್ಯೋಗ ಮಾಡುವ ಶಕ್ತಿಸಾಮರ್ಥ್ಯವಿಲ್ಲದವರು ಏನು ಮಾಡಬೇಕು? ನಿರ್ಗತಿಕ ವಿಧವೆಯರ, ವಯೋವೃದ್ಧರ, ಪುಟಾಣಿ ಮಕ್ಕಳ ಗತಿಯೇನು? ರೋಗಿಗಳು ಮತ್ತು ಅಂಗವಿಕಲರು ಬದುಕುವ ದಾರಿ ಯಾವುದು? ಅವರನ್ನು ಕಾಲದ ತುಳಿತಕ್ಕೆ ಬಿಟ್ಟು ಬಿಡಬೇಕೆ? ಗಾಳಿಯ ಧೂಳಿನಂತೆ ಕಡೆಗಣಿಸಬೇಕೆ?

ಅಲ್ಲ, ಅವರನ್ನೂ ಬಡತನದಿಂದ ವಿಮೋಚನೆಗೊಳಿಸಿ, ನಿರಾಶ್ರಯ, ಭಿಕ್ಷಾಟನೆ ಮತ್ತು ಅಪಮಾನದಿಂದ ಮುಕ್ತಗೊಳಿಸಿ ಸ್ವಾವಲಂಬಿಗಳಾಗುವ ಮಾರ್ಗಗಳನ್ನು ಇಸ್ಲಾಮ್ ಸೂಚಿಸಿದೆ. ಒಂದನೆಯದಾಗಿ, ಶ್ರೀಮಂತರು ತಮ್ಮ ಕುಟುಂಬದ ಹಿಂದುಳಿದ ವಿಭಾಗದ ಹೊಣೆಯನ್ನು ವಹಿಸಬೇಕು. ಬಲಶಾಲಿಯು ದುರ್ಬಲನ ಮತ್ತು ಶ್ರೀಮಂತನು ಬಡವನ ಬಗ್ಗೆ ಅರಿತಿರಬೇಕಾದಷ್ಟರ ಮಟ್ಟಿಗೆ ಕುಟುಂಬ ಸಂಬಂಧಿಕರು ಪರಸ್ಪರ ಸಂರಕ್ಷಣೆಯ ಹೊಣೆಗಾರರೆಂದು ಇಸ್ಲಾಮ್ ಕಲಿಸುತ್ತದೆ. ಯಾಕೆಂದರೆ ಕುಟುಂಬ ಸಂಬಂಧವು ಸಂಬಂಧಗಳ ಪೈಕಿ ಅತಿ ಬಲಿಷ್ಠವಾಗಿದೆ. ಪರಸ್ಪರ ಸಹಾಯ ಸರಕಾರದ ಪ್ರೇರಕವೂ ಅತಿ ಪ್ರಬಲವಾಗಿರುತ್ತದೆ. ಅವರು ರಕ್ತ ಸಂಬಂಧಿಕರು- ಇದೊಂದು ನೈಸರ್ಗಿಕ ಸತ್ಯವಾಗಿದೆ. ಕುರ್‌ಆನ್‌ನ ಘೋಷಣೆಯು ಅದನ್ನು ದೃಢೀಕರಿಸುತ್ತದೆ:

"ಅಲ್ಲಾಹನ ಕಾನೂನಿನಲ್ಲಿ ರಕ್ತ ಸಂಬಂಧಿಕರು ಪರಸ್ಪರ ಸಂರಕ್ಷಣೆಯ ಹೊಣೆಗಾರರಾಗಿದ್ದಾರೆ." (ಅಲ್ ಅನ್ಫಾಲ್ :75)

ಕುಟುಂಬ ಸಂಬಂಧಗಳ ಮಹತ್ವವನ್ನು ಇಸ್ಲಾಮ್ ಒತ್ತಿ ಹೇಳಿದೆ. ಪರಸ್ಪರ ಉಪಕಾರ ಮತ್ತು ಕರುಣೆಗೆ ಕುಟುಂಬ ಸಂಬಂಧಿಕರನ್ನು ಪರಸ್ಪರ ಪ್ರೇರೇಪಿಸಬೇಕೆಂದೂ ಅದು ಕಲಿಸುತ್ತದೆ. ಸಂಬಂಧಗಳನ್ನು ಕಡಿಯುವುದು, ಸಂಬಂಧಿಕರೊಡನೆ ಕೆಟ್ಟ ರೀತಿಯಲ್ಲಿ ವರ್ತಿಸುವುದನ್ನು ಶಿಕ್ಷಾರ್ಹವೆಂದು ಅದು ಎಚ್ಚರಿಸಿದೆ:

"ನೀವೆಲ್ಲರೂ ಅಲ್ಲಾಹನ ದಾಸ್ಯ-ಆರಾಧನೆ ಮಾಡಿರಿ. ಅವನೊಂದಿಗೆ ಯಾರನ್ನೂ ಸಹಭಾಗಿಯನ್ನಾಗಿ ಮಾಡದಿರಿ. ಮಾತಾಪಿತರೊಂದಿಗೆ ಸೌಜನ್ಯದಿಂದ ವರ್ತಿಸಿರಿ. ಸಂಬಂಧಿಕರೊಂದಿಗೂ ಅನಾಥರೊಂದಿಗೂ ನಿರ್ಗತಿಕರೊಂದಿಗೂ ಆಪ್ತರಾದ ನೆರೆಹೊರೆಯವರೊಂದಿಗೂ ಅಪರಿಚಿತ ನೆರೆಹೊರೆಯವರೊಂದಿಗೂ ಅನುಚರರೊಂದಿಗೂ ಉತ್ತಮ ರೀತಿಯಲ್ಲಿ ವರ್ತಿಸಿರಿ. ದುರಹಂಕಾರ ಹೊಂದಿರುವ ಗರ್ವಿಷ್ಠನನ್ನೂ ಆತ್ಮ ಸ್ತುತಿ ಗೈಯುವವನನ್ನೂ ಅಲ್ಲಾಹ್ ಮೆಚ್ಚುವುದಿಲ್ಲ." (4:36)

"ಅಲ್ಲಾಹ್ ನ್ಯಾಯ, ಪರೋಪಕಾರ ಹಾಗೂ ಸಂಬಂಧಿಕರಿಗೆ ದಾನ ನೀಡುವಂತೆ ಆಜ್ಞಾಪಿಸಿರುತ್ತಾನೆ." (ಅನ್ನಹ್ಲ್:90)

"ಯಾರ ಹೆಸರನ್ನೆತ್ತಿ ನೀವು ಪರಸ್ಪರ ಹಕ್ಕು ಬಾಧ್ಯತೆಗಳನ್ನು ಕೇಳುತ್ತೀರೋ ಆ ಅಲ್ಲಾಹನನ್ನು ಭಯಪಡಿರಿ. ಕುಟುಂಬ ಸಂಬಂಧಗಳನ್ನು ಕೆಡಿಸಬೇಡಿರಿ. ಅಲ್ಲಾಹ್ ನಿಮ್ಮ ಮೇಲ್ನೋಟವನ್ನು ಇರಿಸಿ ಕೊಂಡಿರುವನೆಂಬುದನ್ನು ಚೆನ್ನಾಗಿ ಅರಿತು ಕೊಳ್ಳಿರಿ." (4:1)

"ಸಂಬಂಧಿಕನಿಗೆ ಆತನ ಹಕ್ಕುಗಳನ್ನು ನೀಡಿರಿ. ಹಾಗೆಯೇ ನಿರ್ಗತಿಕರಿಗೂ ಯಾತ್ರಿಕರಿಗೂ ನೀಡಿರಿ. ದುರ್ವ್ಯಯ ಮಾಡಬೇಡಿರಿ"- (ಬನೀಇಸ್ರಾಈಲ್ :26) 'ಕುಟುಂಬ ಸಂಬಂಧಿಕನಿಗೆ ಆತನ ಹಕ್ಕುಗಳನ್ನು ನೀಡಿರಿ. ಹಾಗೆಯೇ ನಿರ್ಗತಿಕನಿಗೂ ಯಾತ್ರಿಕನಿಗೂ ನೀಡಿರಿ. ಅಲ್ಲಾಹನ ಮುಖ ದರ್ಶನವನ್ನು ಬಯಸುವವರಿಗೆ ಅದೇ ಉತ್ತಮ." (ಅರ್ರೂಮ್:38)

ಪ್ರವಾದಿ(ಸ) ಹೇಳಿದರು: "ಕುಟುಂಬ ಸಂಬಂಧವು 'ಅರ್ಶ್'ನ ಕಾಲಿಗೆ ಜೋಡಿಸಲ್ಪಟ್ಟಿದೆ. ಅದು ಹೇಳುವುದು: ನನ್ನನ್ನು ಪಡೆದವನು ದೇವನನ್ನು ಪಡೆದನು. ನನ್ನನ್ನು ತೊರೆದವನು ದೇವನನ್ನು ತೊರೆದನು." (ಬುಖಾರಿ, ಮುಸ್ಲಿಮ್)

"ತಂದೆ ತಾಯಂದಿರು ಮತ್ತು ಸಂಬಂಧಿಕರಿಗೆ ಹಿತವುಂಟು ಮಾಡುವುದನ್ನು ಪ್ರವಾದಿಯವರು(ಸ) ಕಡ್ಡಾಯಗೊಳಿಸಿದ್ದಾರೆ. ನಿನ್ನ ತಾಯಿ, ತಂದೆ, ಸಹೋದರ, ಸಹೋದರಿ ಮತ್ತು ಅವರ ಹತ್ತಿರದ ಆಶ್ರಿತರು- ಎಲ್ಲರೊಡನೆಯೂ ನಿನಗೆ ಕೆಲವು ಕಡ್ಡಾಯ ಸಂಬಂಧ ಮತ್ತು ಕರ್ತವ್ಯಗಳಿವೆ." (ಅಬೂ ದಾವೂದ್)

ಮೇಲಿನ ಕುರ್‌ಆನ್ ವಾಕ್ಯ ಮತ್ತು ಪ್ರವಾದಿವಚನಗಳಿಂದ ಇತರರೊಂದಿಗಿಲ್ಲದ ಕೆಲವು ಹಕ್ಕು ಬಾಧ್ಯತೆಗಳು ಕುಟುಂಬ ಸಂಬಂಧಿಕರ ಮಧ್ಯೆಯಿದೆಯೆಂದು ವ್ಯಕ್ತವಾಗುತ್ತದೆ. ಸಂಪತ್ತು ಮಾಲಿಕನ ಮರಣಾ ನಂತರ ಆತನ ಸಂಬಂಧಿಕರಲ್ಲಿ ಹಂಚಿ ಹೋಗುತ್ತದೆ. ಆದ್ದರಿಂದ ಜೀವನಾವಧಿಯಲ್ಲಿಯೇ ಅದನ್ನು ಅವರಿಗಾಗಿ ವ್ಯಯಿಸುವುದು ನ್ಯಾಯೋಚಿತವಾಗಿದೆ.

## ಕಡ್ಡಾಯವೋ ಐಚ್ಛಿಕವೋ?

ಕುಟುಂಬ ಸಂಬಂಧಿಕರು ಮತ್ತು ಆಪ್ತೇಷ್ಟರಿಗೆ ಉಪಕಾರವೆಸಗಬೇಕೆಂಬ ಕುರ್‌ಆನ್ ವಾಕ್ಯ ಮತ್ತು ಪ್ರವಾದಿ ವಚನಗಳು ಅದನ್ನು ಕಡ್ಡಾಯ ಕರ್ಮವೆಂದು ಸೂಚಿಸಿಲ್ಲವೆಂಬುದು ಕೆಲವರ ಅಭಿಪ್ರಾಯ. ಒಂದು ಕಾರ್ಯವನ್ನು ಅಲ್ಲಾಹನು ಮಾಡಬೇಕೆಂದು ಆಜ್ಞಾಪಿಸಿ ಅದನ್ನು 'ಹಕ್ಕ್'- ಕರ್ತವ್ಯವೆಂದು ವರ್ಣಿಸಿ, ಅರ್ಹರ ಹಕ್ಕೆಂದು ಪರಿಗಣಿಸಿದ್ದಾನೆಂದಷ್ಟೇ ಅವರಿಗೆ ಉತ್ತರಿಸಬೇಕಾಗಿದೆ. ಈ ಕಾರ್ಯವನ್ನು ಪ್ರವಾದಿಯವರು, ಕುಟುಂಬದ ಶ್ರೀಮಂತರ ಕರ್ತವ್ಯ ಮತ್ತು ಬಡವರ ಹಕ್ಕೆಂದು ಪರಿಗಣಿಸಿದ್ದಾರೆ. ಕರ್ತವ್ಯವೆಂಬುದರ ತಾತ್ಪರ್ಯವು ಕುಟುಂಬ ಸಂಬಂಧ ವಿಚ್ಛೇದನಕ್ಕೆ ಸೀಮಿತವೆನ್ನುವುದನ್ನು ಇಬ್ನು ಖಯ್ಯಿಮ್ ಮಾಡಿರುವಂತೆ,ಎರಡು ರೀತಿಯಿಂದ ಖಂಡಿಸಬಹುದು-

1. ಒಬ್ಬರು ಹಸಿವು ಬಾಯಾರಿಕೆಯಿಂದ ನರಳುತ್ತಿದ್ದಾರೆ. ಬಿಸಿಲು, ಚಳಿ ಸಹಿಸಲಾಗದೆ

ಕಷ್ಟಪಡುತ್ತಿದ್ದಾರೆ. ಅವರು ಸ್ವಂತ ಸಹೋದರ ಅಥವಾ ಪಿತೃಸಹೋದರ-ಸಹೋದರಿಯ
ಪುತ್ರರೇ ಆಗಿರಲಿ, ಅವರಿಗೆ ಅನ್ನ-ನೀರು ನೀಡದೆ ಮೈ ಮುಚ್ಚಲು ಮತ್ತು ಪ್ರತಿಕೂ
ಹವಾಮಾನವನ್ನು ಎದುರಿಸಲು ಒಂದು ತುಂಡು ಬಟ್ಟೆ ನೀಡದೆ ಇರುವುದಕ್ಕಿಂತ ದೊಡ್ಡ
ಕುಟುಂಬ ಸಂಬಂಧ ವಿಚ್ಛೇದನ ಬೇರೇನಿದೆ? ಇದು ಸಂಬಂಧ ವಿಚ್ಛೇದನವಲ್ಲವೆಂದಾದ
ಅಲ್ಲಾಹನು ಆಜ್ಞಾಪಿಸಿದ ಸಂಬಂಧ ಸೇರ್ಪಡೆ ಮತ್ತು ನಿಷಿದ್ಧಗೊಳಿಸಿದ ಸಂಬಂಧ ವಿಚ್ಛೇದ
ಯಾವುದು?

2. ಕುಟುಂಬ ಸಂಬಂಧವನ್ನು ಜೋಡಿಸಬೇಕೆಂದು ಕುರ್‌ಆನ್ ಮತ್ತು ಹದೀಸ್‌ಗಳ
ಒತ್ತಿ ಹೇಳಿವೆ. ಅದನ್ನು ಬೇರ್ಪಡಿಸುವವರನ್ನು ಉಗ್ರವಾಗಿ ಖಂಡಿಸಿದೆ. ಹಾಗಾದರೆ ಒಬ್ಬನಿ
ತನ್ನ ಕುಟುಂಬ ಸಂಬಂಧಿಕರೊಡನೆ ಇತರರಿಗಿಂತ ಹೆಚ್ಚಿನ ಕರ್ತವ್ಯ ಯಾವುದು? ಪ್ರವಾದಿಯವರ
ಸಹೋದರಿ ಸಹೋದರರೊಂದಿಗಿನ ಕರ್ತವ್ಯಗಳನ್ನು, ತಂದೆ ತಾಯಿಯ ರೊಂದಿಗಿನ ಋಣ
ಜತೆಯಲ್ಲಿ ಹೇಳಿದ್ದಾರೆ. ತಂದೆ, ತಾಯಿ, ಸಹೋದರಿ, ಸಹೋದರ, ತರುವಾಯ ನಿನಗೆ ಹೆಚ್ಚು
ಹತ್ತಿರದವರೆಂದು ಹದೀಸ್‌ನಲ್ಲಿದೆ. ಅದು ಅಸಿಂಧುಗೊಂಡದ್ದು ಯಾವಾಗ? ಇದರಲ್ಲಿ
ಮೊದಲು ಹೇಳಿದವರೊಂದಿಗಿನ ಕರ್ತವ್ಯವು ಕಡ್ಡಾಯವೂ, ಕೊನೆಯಲ್ಲಿ ಹೇಳಿದವರೊಂದಿಗಿ
ಕರ್ತವ್ಯವು ಐಚ್ಛಿಕವೂ ಆಗುವುದು ಹೇಗೆ?

ಪತ್ನಿಗೆ ಪತಿ, ಮಗುವಿಗೆ ತಂದೆ, ತಂದೆ ತಾಯಂದಿರಿಗೆ ಮಕ್ಕಳು ಜೀವನಾಂ
ನೀಡುವುದನ್ನು ಕಡ್ಡಾಯಗೊಳಿಸಬಹುದೆಂಬ ಬಗ್ಗೆ ಕರ್ಮಶಾಸ್ತ್ರಜ್ಞರಲ್ಲಿ ಸಹಮತವಿದೆ. ಆದರೆ
ಇತರ ಸಂಬಂಧಿಕರ ವಿಷಯದಲ್ಲಿ, ಓರ್ವ ಬಂಧುವಿಗೆ ಜೀವನಾಂಶ ಕೊಡುವಂತ
ಆಡಳಿತಗಾರನು ಓರ್ವರ ಮೇಲೆ ಕಡ್ಡಾಯಗೊಳಿಸುವ ಬಗ್ಗೆ ಅವರಲ್ಲಿ ಭಿನ್ನಾಭಿಪ್ರಾಯವಿದೆ
ಅದೇ ವೇಳೆ ಅವರು ಪರಸ್ಪರ ಸಂಬಂಧವನ್ನು ಸಂರಕ್ಷಿಸಿ ಪರಸ್ಪರ ಉಪಕಾರ ಮಾಡಬೇಕೆಂ
ಬಗ್ಗೆ ಭಿನ್ನಾಭಿಪ್ರಾಯವಿಲ್ಲ. ಈ ವಿಷಯದಲ್ಲಿ ಇಮಾಮ್ ಅಬೂ ಹನೀಫಾ ಮತ್ತು
ಇಮಾಮ್ ಅಹ್ಮದ್ ಬಿನ್ ಹಂಬಲ್‌ರ ದೃಷ್ಟಿಕೋನಗಳು ತುಲನಾತ್ಮಕವಾಗಿ ವಿಶಾಲವಾಗಿದೆ
ಕುರ್‌ಆನ್ ಮತ್ತು ಹದೀಸ್‌ಗಳಿಂದ ಅನೇಕ ಆಧಾರಗಳನ್ನು ಉದ್ಧರಿಸಿ ಇಬ್ನು ಖಯ್ಯಿಮ
ಅದನ್ನು ದೃಢೀಕರಿಸಿದ್ದಾರೆ. ಆ ಕುರಿತು ಅವರು ಉಲ್ಲೇಖಿಸಿದ ಆಧಾರಗಳನ್ನು ನೋಡಿರಿ
(ಝಾದುಲ್ ಮಆದ್ ಭಾಗ 4, ಪುಟ:319)

ಕುಲೈಬ್ ಬಿನ್ ಮನ್‌ಫಅತುಲ್ ಹನಫೀಯವರ ಪಿತಾಮಹರು ಪ್ರವಾದಿಯವರ ಬ
ಬಂದು ವಿಚಾರಿಸಿದರು: "ಪ್ರವಾದಿಗಳೇ ನಾವು ಯಾರಿಗೆ ಹೆಚ್ಚು ಉಪಕಾರ ಮಾಡಬೇಕು?" ಪ್ರವಾದ
ಹೇಳಿದರು: ನಿನ್ನ ತಾಯಿ, ತಂದೆ, ಸಹೋದರಿ, ಸಹೋದರರು ಮತ್ತು ಅವರ ಹತ್ತಿರದ ಆಶ್ರಿತರು
ಅದು ಕಡ್ಡಾಯ ಕರ್ತವ್ಯ ಮತ್ತು ಜೋಡಿಸಬೇಕಾದ ಸಂಬಂಧವಾಗಿದೆ." (ಅಬೂ ದಾವೂದ್

ತ್ವಾರಿಕ್ ಬಿನ್ ಮಹಾರಿಬ್ ವರದಿ ಮಾಡಿದ್ದಾರೆ: ಮದೀನಕ್ಕೆ ಹೋದಾ
ಪ್ರವಾದಿಯವರು(ಸ) ಭಾಷಣ ಮಾಡುತ್ತಿದ್ದರು. ಅವರು ಹೇಳಿದರು: "ನೀಡುವಾತನ ಕರಗಳ
ಉನ್ನತವಾಗಿದೆ. ಹತ್ತಿರದ ಸಂಬಂಧಿಕರಿಂದ ಆರಂಭಿಸಬೇಕು- ನಿನ್ನ ತಾಯಿ, ತಂದೆ,

ಹೋದರಿ, ಸಹೋದರ ಅನಂತರ ನಿನಗೆ ಹೆಚ್ಚು ಆಪ್ತರಾದವರು. (ನಸಾಈ)

ಓರ್ವರು ಪ್ರವಾದಿಯವರ(ಸ) ಬಳಿ ಬಂದು ಕೇಳಿದರು: "ಜನರಲ್ಲಿ ನನ್ನ ಉತ್ತಮ ಸಹವಾಸಕ್ಕೆ ಯಾರು ಅರ್ಹರು?" "ನಿನ್ನ ತಾಯಿ" ಪ್ರವಾದಿ ಹೇಳಿದರು. 'ಅನಂತರ?' "ನಿನ್ನ ತಾಯಿ", 'ಅನಂತರ' "ನಿನ್ನ ತಂದೆ" ಅನಂತರ ಅದರ ಹತ್ತಿರದವರು. (ಬುಖಾರಿ, ಮುಸ್ಲಿಮ್)

ಮುಆವಿಯತುಲ್ ಗಶೀರಿ ಉಲ್ಲೇಖಿಸಿದ್ದಾರೆ: ನಾನು ಕೇಳಿದೆ, ಪ್ರವಾದಿಗಳೇ ನಾನು ಯಾರಿಗೆ ಉಪಕಾರ ಮಾಡಬೇಕು?" ಅವರು ಹೇಳಿದರು, 'ನಿನ್ನ ತಾಯಿಗೆ' 'ಅನಂತರ?' 'ನಿನ್ನ ತಾಯಿಗೆ' 'ಅನಂತರ?' 'ನಿನ್ನ ತಾಯಿಗೆ', 'ಅನಂತರ' 'ನಿನ್ನ ತಂದೆಗೆ' 'ಅನಂತರ' 'ನಿನ್ನ ಹತ್ತಿರದ ಸಂಬಂಧಿಕರಿಗೆ." (ತಿರ್ಮಿದಿ)

ಪ್ರವಾದಿಯವರು(ಸ) ಒಮ್ಮೆ ಹಿಂದ್‌ಳೊಡನೆ ಹೀಗೆ ಹೇಳಿದ್ದರು: "ನಿನಗೂ ನಿನ್ನ ಮಗುವಿಗೂ ಖರ್ಚಿಗೆ ಬೇಕಾಗುವಷ್ಟು ನೀನು ತೆಗೆದು ಕೋ."

ಅಮ್ರ್ ಬಿನ್ ಶುಐಬ್ ಉಲ್ಲೇಖಿಸಿದ್ದಾರೆ- ಪ್ರವಾದಿ(ಸ) ಹೇಳಿದರು: "ನೀವು ದುಡಿದು ಸಂಪಾದಿಸಿದ ಆಹಾರವೇ ನೀವು ತಿನ್ನುವುದರಲ್ಲಿ ಅತಿ ಶುದ್ಧವಾಗಿದೆ. ಮಕ್ಕಳು ನಿಮ್ಮ ಸಂಪತ್ತಾಗಿದ್ದಾರೆ. ಆದ್ದರಿಂದ ನೀವು ಅವರಿಂದ ಬೇಕಾದಷ್ಟು ತಿನ್ನಿರಿ."

(ಅಬೂ ದಾವೂದ್)

ಜಾಬಿರ್ ಬಿನ್ ಅಬ್ದುಲ್ಲಾ ವರದಿ ಮಾಡಿದ್ದಾರೆ: "ನಿನ್ನಿಂದ ನೀನು ಆರಂಭಿಸು, ನಿನಗಾಗಿ ವೆಚ್ಚ ಮಾಡು. ಉಳಿದದ್ದು ಕುಟುಂಬಕ್ಕೆ. ಮತ್ತು ಉಳಿದದ್ದು ಸಂಬಂಧಿಕರಿಗಾಗಿ ವೆಚ್ಚ ಮಾಡು ಮತ್ತು ಉಳಿದರೆ ನಿನ್ನ ಪರಿಸರದಲ್ಲಿರುವವರಿಗೆ ನೀಡು." (ನಸಾಈ)

ಮೇಲೆ ಉಲ್ಲೇಖಿಸಿದ ಎಲ್ಲ ಪ್ರವಾದಿವಚನಗಳೂ ಈ ಬಗ್ಗೆ ಅವತೀರ್ಣಗೊಂಡ ಕುರ್‌ಆನ್ ವಾಕ್ಯಗಳ ವ್ಯಾಖ್ಯಾನ ಮತ್ತು ವಿವರಣೆಯಾಗಿದೆ. ಕೆಲವು ಕುರ್‌ಆನ್ ವಾಕ್ಯಗಳನ್ನು ನೋಡಿರಿ:

"ನೀವು ಅಲ್ಲಾಹನ ದಾಸ್ಯ-ಆರಾಧನೆ ಮಾಡಿರಿ. ಆತನಲ್ಲಿ ಯಾರನ್ನೂ ಸಹಭಾಗಿ ಗೊಳಿಸಬೇಡಿರಿ. ತಂದೆ ತಾಯಂದಿರು ಮತ್ತು ಸಂಬಂಧಿಕರೊಡನೆ ಉತ್ತಮ ರೀತಿಯಲ್ಲಿ ವರ್ತಿಸಿರಿ." (ಅನ್ನಿಸಾ: 36)

"ಸಂಬಂಧಿಕನಿಗೆ ಆತನ ಹಕ್ಕುಗಳನ್ನು ನೀಡಿರಿ." (ಇಸ್ರಾಈಲ್:26, ಅರ್ರೂಮ್: 28)

ಕುರ್‌ಆನ್, ಸಂಬಂಧಿಕರೊಂದಿಗಿನ ಕರ್ತವ್ಯವನ್ನು ತಂದೆ ತಾಯಂದಿರ ಕರ್ತವ್ಯದ ಜೊತೆಯಲ್ಲಿಯೇ ಹೇಳಿದೆ. ಪ್ರವಾದಿಯವರೂ ಹಾಗೆ ಮಾಡಿದರು. ಅಲ್ಲಾಹನು ಹೀಗೆ ಹೇಳಿರುವುದಾಗಿದೆ: ಎಲ್ಲರಿಗೂ ತಮ್ಮ ಸಂಬಂಧಿಕರೊಡನೆ ಕರ್ತವ್ಯಗಳಿವೆ. ಅದನ್ನು ನೆರವೇರಿಸಲೇಬೇಕು.

ಸಂಬಂಧಿಕರೊಂದಿಗಿನ ಕರ್ತವ್ಯವೆಂದರೆ ಸಂಬಂಧಿಕನ ಜೀವನಾವಶ್ಯಕತೆಗಳನ್ನು ಪೂರೈಸುವುದರ ಹೊರತು ಬೇರೇನು? ತನ್ನ ಸಂಬಂಧಿಕನ ಜೀವನಾವಶ್ಯಕತೆಗಳನ್ನು ಪೂರೈಸುವ

ಸಾಮರ್ಥ್ಯವಿದ್ದೂ ಅದನ್ನು ನಿರ್ವಹಿಸದೆ ಆತನು ಹೊಟ್ಟೆ, ಬಟ್ಟೆಗಿಲ್ಲದೆ ಕಷ್ಟಪಡುವುದನ
ನೋಡಿ ಸುಮ್ಮನಿರುವುದಕ್ಕಿಂತ ದೊಡ್ಡ ಅಪರಾಧ ಬೇರೇನಿದೆ? ಈ ಬಗ್ಗೆ ಪ್ರವಾದಿಯವರ(
ಆದೇಶವನ್ನು ಈ ದಿವ್ಯ ವಚನ ದೃಢೀಕರಿಸುತ್ತದೆ-

"ತಮ್ಮ ಶಿಶುಗಳು ಪೂರ್ಣ ಸ್ತನಪಾನಾವಧಿಯ ವರೆಗೆ ಹಾಲು ಕುಡಿಯಬೇಕೆಂ
ಪಿತರು ಬಯಸಿದರೆ ತಾಯಂದಿರು ತಮ್ಮ ಶಿಶುಗಳಿಗೆ 2 ವರ್ಷ ಪೂರ್ತಿಯಾಗಿ ಹಾಲುಣಿಸಬೇಕ
ಆಗ ಶಿಶುವಿನ ತಂದೆಯು ಅವರಿಗೆ ನ್ಯಾಯೋಚಿತ ರೀತಿಯಿಂದ ಅನ್ನ, ಬಟ್ಟೆ ಕೊಡ
ಬಾಧ್ಯಸ್ಥನಾಗುವನು. ಆದರೆ ಅವನವನ ಶಕ್ತಿಗಿಂತ ಮೀರಿದ ಭಾರವನ್ನು ಯಾರ ಮೇಲ
ಹಾಕಬಾರದು. ಶಿಶುವು ತಾಯಿಯದ್ದು ಎಂಬ ಕಾರಣದಿಂದ ಅವಳನ
ಪೇಚಾಟಕ್ಕೊಳಪಡಿಸಬಾರದು. ಮೊಲೆ ಹಾಲುಣ್ಣಿಸುವವಳ ಈ ಹಕ್ಕು ತಂದೆಯ ಮೇಲಿರುವಂತೆಯೆ
ಅವನ ವಾರೀಸುದಾರರ ಮೇಲೆಯೂ ಇದೆ." (ಅಲ್ ಬಕರಃ : 23

ತಂದೆಗೆ ಕಡ್ಡಾಯವಾಗಿರುವ ವಿಷಯವನ್ನು, ತಂದೆಯ ವಾರೀಸುದಾರರಿಗೂ
ವಾಕ್ಯವು ಕಡ್ಡಾಯಗೊಳಿಸಿದೆ. ಹ. ಉಮರ್(ರ) ಒಂದು ಪ್ರಕರಣದಲ್ಲಿ ಇಂತಹ ತೀರ್ಪ
ನೀಡಿದ್ದರು- ಒಂದು ಮಗುವಿನ ಜೀವನಾಂಶ ನೀಡದ್ದಕ್ಕಾಗಿ ಆತನ ಕುಟುಂಬದ ಪುರುಷರನ
ಅವರು ಜೈಲಿಗೆ ಹಾಕಿದರು. ಮತ್ತೊಮ್ಮೆ ಓರ್ವ ಅನಾಥನಿಗೆ ಜೀವನಾಂಶ ನೀಡುವಂ
ಆತನ ಪೋಷಕರಿಗೆ ಆಜ್ಞಾಪಿಸಿದ ಬಳಿಕ ಅವರು ಹೇಳಿದರು: "ಒಂದು ವೇಳೆ ಮಗುವಿ
ದೂರದ ಸಂಬಂಧಿಕರು ದೊರೆತಿದ್ದರೂ ನಾನು ಈ ಕಾರ್ಯವನ್ನು ಅವರಿ
ಕಡ್ಡಾಯಗೊಳಿಸುತ್ತಿದ್ದೆ." ಇದೇ ರೀತಿಯ ತೀರ್ಪನ್ನು ಝೈದ್ ಬಿನ್ ಸಾಬಿತ್‌ರೂ ನೀಡಿದ್ದಾ
ಒಂದು ಪ್ರಕರಣದಲ್ಲಿ ತೀರ್ಪು ನೀಡುತ್ತಾ ಅವರು ಹೇಳಿದರು: "ತಾಯಿ ಅಥವಾ ಪಿ
ಸಹೋದರನಿದ್ದರೆ ತಾಯಿಗೆ ತನ್ನ ಪಾಲಿನ ಪ್ರಮಾಣದನ್ವಯ ಮತ್ತು ಪಿತೃ ಸಹೋದರ
ತನ್ನ ಪಾಲಿನ ಪ್ರಮಾಣದನ್ವಯ ಖರ್ಚಿಗೆ ನೀಡುವುದು ಕಡ್ಡಾಯವಾಗಿದೆ." ಉಮರ್ ಮತ
ಝೈದ್‌ರ ತೀರ್ಪುಗಳನ್ನು ಯಾವ ಸಹಾಬಿಯೂ ಪ್ರಶ್ನಿಸಲಿಲ್ಲ.

## ಪೂರ್ವ ವಿದ್ವಾಂಸರ ಅಭಿಪ್ರಾಯ

ಇಬ್ನು ಜುರೈಜ್ ಹೇಳುತ್ತಾರೆ: "ವಾರೀಸುದಾರರಿಗೂ ಇಂತಹ ಕರ್ತವ್ಯಗಳಿವ
ಎಂಬುದರ ತಾತ್ಪರ್ಯವೇನೆಂದು ನಾನು ಅತ್ವಾಲ್‌ರೊಡನೆ ಕೇಳಿದೆ. ಅವರು ಹೀಗೆಂದರ
"ಅನಾಥರ ತಂದೆಯ ವಾರೀಸುದಾರರು ಸೊತ್ತಿಗೆ ಹಕ್ಕುದಾರರಾಗುವಂತೆಯೇ ಅನಾಥರಿಗಾ
ವ್ಯಯಿಸಲೂ ಹಕ್ಕುದಾರರೆಂದರ್ಥ." ನಾನು ಕೇಳಿದೆ: "ಮರಣ ಹೊಂದಿದ ತಂದೆಯ
ಸೊತ್ತಿಲ್ಲದಿದ್ದರೂ ವಾರೀಸುದಾರರು ಮಗುವನ್ನು ಪೋಷಿಸಬೇಕೇ? ಪೋಷಿಸದೆ ಮಗುವನ
ಸಾಯಲು ಬಿಡುವುದೇ" ಎಂದು ಅತಾಲ್ ಮರು ಪ್ರಶ್ನೆ ಹಾಕಿದರು. ಮಗು ಸ್ವಾವಲಂಬಿಯಾಗು
ತನಕ ಜೀವನಾಂಶ ನೀಡಬೇಕಾದುದು ವಾರೀಸುದಾರರ ಹಕ್ಕೆಂದು ಈ ಬಗ್ಗೆ ಹಸನ
ಅಭಿಪ್ರಾಯ ಪಟ್ಟಿದ್ದಾರೆ. ಪೂರ್ವ ವಿದ್ವಾಂಸರಲ್ಲಿ ಹೆಚ್ಚಿನವರು ಈ ವಾಕ್ಯವನ್ನು ಅದ
ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ. ಖತಾದ, ಮುಜಾಹಿದ್, ದಹ್ಹಾಕ್, ಝೈದ್ ಬಿನ್ ಅಸ್ಲಮ

ುರೈಹ್, ಖುಬೈಸ್ ಬಿನ್ ದುಐಬ್, ಅಬ್ದುಲ್ಲಾ ಬಿನ್ ಉತ್ಬಾ ಬಿನ್ ಮಸ್‌ಊದ್, ಬ್ರಾಹೀಮುನಖ್‌ಈ, ಶಅ್‌ಬೀ, ಸುಫ್‌ಯಾನುಸ್ಸೌರಿ, ಅಬ್ದುರ್ರಝ್ಝಾಕ್, ಅಬೂ ಹನೀಫಾ, ಹ್ಮದ್ ಇಸ್ಹಾಕ್, ದಾವೂದ್ ಮುಂತಾದವರೆಲ್ಲರೂ ಇವರಲ್ಲಿ ಸೇರಿದ್ದಾರೆ.

## ಬೂ ಹನೀಫಾ

ರಕ್ತ ಸಂಬಂಧಿಕರ ಖರ್ಚು ನಿರ್ವಹಿಸುವುದು ಪ್ರತಿಯೊಬ್ಬರ ಹೊಣೆಯಾಗಿದೆಯೆಂಬುದು ಬೂ ಹನೀಫಾರ ಅಭಿಮತ. ಮಕ್ಕಳು, ಮಕ್ಕಳ ಮಕ್ಕಳು, ತಂದೆ, ಅಜ್ಜ ಮುಂತಾದವರು ುಸ್ಲಿಮೇತರರಾಗಿದ್ದರೂ ಖರ್ಚಿಗೆ ನೀಡಬೇಕು. ಇವರ ಹೊರತು ಇತರ ಸಂಬಂಧಿಕರು ಶ್ವಾಸಿಗಳಾಗಿದ್ದರೆ ಮಾತ್ರ ಖರ್ಚಿಗೆ ನೀಡಿದರೆ ಸಾಕು. ಖರ್ಚಿಗೆ ನೀಡಬೇಕಾದವನಿಗೆ ಆ ಾಮರ್ಥ್ಯವಿರಬೇಕೆಂಬುದು ಅದನ್ನು ಕಡ್ಡಾಯಗೊಳಿಸುವುದರ ಉಪಾಧಿಯಾಗಿದೆ. ಹಾಗೆಯೇ ೊರೆಯಬೇಕಾದವನಿಗೆ ಅದು ಅತ್ಯಗತ್ಯ ವಾಗಿರಬೇಕು. ಮಗುವಾಗಿದ್ದರೆ ಕೇವಲ ಅದರ ಡತನವನ್ನು ಮಾತ್ರ ಪರಿಗಣಿಸಿದರೆ ಸಾಕು. ಪ್ರೌಢ ಮಹಿಳೆಯಾದರೂ ಅಷ್ಟೇ. ಪ್ರೌಢ ುರುಷನಾಗಿದ್ದರೆ ಆತನ ದೃಷ್ಟಿ ಮತ್ತು ಪ್ರಾಯವನ್ನು ಪರಿಗಣಿಸಬೇಕು. ಆರೋಗ್ಯ ಮತ್ತು ೃಷ್ಟಿ ಸರಿಯಿರುವಾತನಿಗೆ ಖರ್ಚಿಗೆ ನೀಡಬೇಕಾಗಿಲ್ಲ. ಆತನ ಜೀವನಾಂಶವನ್ನು ಆತನ ಾರೀಸು ಸೊತ್ತಿನಿಂದ ತೆಗೆಯಬೇಕು. ಆದರೆ, ಮಗುವಿನ ಹೊಣೆಯು ತನ್ನ ಮದ್ಹಬ್‌ನಲ್ಲಿ ್ರಸಿದ್ಧವಾಗಿರುವಂತೆ, ಮಗುವಿನ ತಂದೆಗಿದೆ.

## ಹ್ಮದ್ ಬಿನ್ ಹಂಬಲ್

ಸಂಬಂಧಿಕನು ಕುಟುಂಬದ ಹಿರಿಯರಲ್ಲೋರ್ವರಾಗಿದ್ದರೆ, ಅವರಿಗೆ ವಾರೀಸು ಹಕ್ಕಿನ ರ್ಹತೆ ಇದ್ದರೂ ಇಲ್ಲದಿದ್ದರೂ ಅವರಿಗೆ ಜೀವನಾಂಶ ನೀಡುವುದು ಆರ್ಥಿಕ ಸಾಮರ್ಥ್ಯವಿರುವ ುಟುಂಬ ಸದಸ್ಯನ ಕರ್ತವ್ಯವಾಗಿದೆ. ಕುಟುಂಬದ ಹಿರಿಯರಲ್ಲದಿದ್ದರೆ ಅವನಿಗೂ ಕುಟುಂಬ ದಸ್ಯನಿಗೂ ಪರಸ್ಪರ ವಾರೀಸು ಹಕ್ಕಿನ ಸಂಬಂಧ ಇದ್ದರೆ ಮಾತ್ರ ಖರ್ಚಿಗೆ ನೀಡಿದರೆ ಾಕು. ವಾರೀಸು ಹಕ್ಕುದಾರರಲ್ಲಿ ಸಂಬಂಧಿಕರಿಗೆ ಖರ್ಚಿಗೆ ನೀಡಬೇಕಾದುದು ಡ್ಡಾಯವಲ್ಲವೆಂಬುದು ಇಬ್ನು ಹಂಬಲ್‌ರ ಸ್ಪಷ್ಟ ಅಭಿಪ್ರಾಯ. ಆದರೆ ಅವರ ಶಿಷ್ಯರಲ್ಲಿ ಲವರು ಇದನ್ನು ಅಂಗೀಕರಿಸುವುದಿಲ್ಲ. ಖರ್ಚಿಗೆ ನೀಡುವುದು ವಾರೀಸು ಹಕ್ಕಿನ ಒಂದು ಂಶವೆಂಬ ಇಬ್ನು ಹಂಬಲ್‌ರ ಅಭಿಪ್ರಾಯದ ಆಧಾರದಲ್ಲಿಯೇ ಅವರು ವಾರೀಸು ಹಕ್ಕು ಭಿಸುವ ಸಾಧ್ಯತೆಯಿಲ್ಲದ ಸಂಬಂಧಿಕರಿಗೆ ಜೀವನಾಂಶ ನೀಡುವುದು ಕಡ್ಡಾಯವೆಂದು ೇಳುತ್ತಾರೆ. ಖರ್ಚು ದೊರೆಯಬೇಕಾದವರು ವಿಶ್ವಾಸಿಗಳಾಗಿರಬೇಕೆಂಬ ಶರ್ತವನ್ನು ಇಬ್ನು ಂಬಲ್ ನಿರ್ಣಯಿಸಿದ್ದಾರೆ-ಕುಟುಂಬದ ಮುಖ್ಯಸ್ಥನ ಹೊರತು.

ಪುರುಷ ಸಂಬಂಧಿಕನಿಗೆ ಖರ್ಚಿಗೆ ನೀಡುವ ಹೊಣೆಯಿರುವಾತನು ಆತನ ಪತ್ನಿಗೂ ರ್ಚಿಗೆ ನೀಡಬೇಕಾದೀತು. ಕುಟುಂಬದ ಹಿರಿಯರು ವಿವಾಹವಾಗುವ ಅಪೇಕ್ಷೆ ವ್ಯಕ್ತಪಡಿಸಿದರೆ ದನ್ನೂ ಈಡೇರಿಸಬೇಕು. ಇದರ ಪ್ರಕಾರ ಸಹೋದರರ ಪುತ್ರ, ಪಿತೃ ಸಹೋದರ ಪುತ್ರ

ಮುಂತಾದ ಎಲ್ಲರಿಗೂ ವಿವಾಹ ಮಾಡಿಸಿ ಕೊಡಬೇಕಾದುದು ಅವರ ಖರ್ಚಿನ ಹೊಣೆಯಿರುವ
ಕರ್ತವ್ಯವೆಂದು ಅಬೂ ಯಅ್‌ಲಾ ಅಭಿಪ್ರಾಯ ಪಟ್ಟಿದ್ದಾರೆ- ಓರ್ವ ಸಂಬಂಧಿಕನ ವಿವಾ
ಮಾಡಿಸಬೇಕಾದ ಹೊಣೆ ಹೊಂದಿರುವವರು ಅವರ ಪತ್ನಿಗೂ ಖರ್ಚಿಗೆ ನೀಡಬೇಕಾಗುವು
ಅನ್ಯಥಾ ವೈವಾಹಿಕ ಜೀವನ ಸುಗಮವಾಗಲಾರದಷ್ಟೆ.

ಇದು ಹಂಬಲಿ ಮದ್ಹಬ್‌ನಲ್ಲಿರುವ ಅಭಿಪ್ರಾಯವಾಗಿದೆ. ಅದು ಅಬೂ ಹನೀಫ
ಅಭಿಪ್ರಾಯಕ್ಕಿಂತ ವಿಶಾಲವಾದ ದೃಷ್ಟಿಕೋನವನ್ನು ಹೊಂದಿದೆ- ಅಬೂ ಹನೀಫ
ಅಭಿಪ್ರಾಯವು ಇತರ ವಿಷಯಗಳಲ್ಲಿ ವಿಶಾಲವಾಗಿದ್ದರೂ ಅವರು ರಕ್ತ ಸಂಬಂಧಿಕ
ಬೇಶರತ್ ಖರ್ಚಿಗೆ ನೀಡಬೇಕೆಂದು ಅಭಿಪ್ರಾಯ ಪಟ್ಟಿದ್ದಾರಲ್ಲವೇ. ಅದು ಪ್ರ
ಸಾಕ್ಷ್ಯಾಧಾರಗಳಿರುವ ದೃಷ್ಟಿಕೋನವೂ ಆಗಿದೆ. ಅಹ್ಮದ್ ಬಿನ್ ಹಂಬಲ್‌ರು ತ
ಮದ್ಹಬ್‌ಗೆ ಆಧಾರಗೊಳಿಸಿದ ಬುನಾದಿಗಳ ಮತ್ತು ಇಸ್ಲಾಮೀ ಶರೀಅತ್‌ನ ಮ
ಸಿದ್ಧಾಂತಗಳ ಹಾಗೂ ಅಲ್ಲಾಹನು ಜೋಡಿಸಲು ಆಜ್ಞಾಪಿಸಿದ್ದನ್ನು ಕಡಿಯುವವ
ಸ್ವರ್ಗವನ್ನು ನಿಷಿದ್ಧಗೊಳಿಸಿರುವ ಕುಟುಂಬ ಸಂಬಂಧಗಳ ಸ್ಫೂರ್ತಿಯೂ ಅದೇ ಆಗಿ

## ಉಪಾಧಿಗಳು

ಸಂಬಂಧಿಕರಿಗೆ ಖರ್ಚಿಗೆ ನೀಡುವುದು ಕಡ್ಡಾಯವಾಗುವುದಕ್ಕೆ ಕರ್ಮಶಾಸ್ತ್ರಜ್ಞ
ಎರಡು ಮೂಲಭೂತ ಉಪಾಧಿಗಳನ್ನು ನಿರ್ಣಯಿಸಿದ್ದಾರೆ. ಒಂದನೇಯದು, ಬಡ
ಸಂಪಾದನೆಯಿರುವಾತನಿಗೆ ಖರ್ಚಿಗೆ ನೀಡಬೇಕಾಗಿಲ್ಲ. ಖರ್ಚಿಗೆ ನೀಡುವುದೆಂಬುದು ಒಂ
ನೆರವು ಮತ್ತು ಸಹಾನುಭೂತಿಯಾಗಿದೆಯಷ್ಟೆ. ಈ ಹಿನ್ನೆಲೆಯಲ್ಲಿ ಓರ್ವ ಸ್ಥಿತಿವಂತ
ಜೀವನಾಂಶ ಪಡೆಯುವ ಅರ್ಹತೆಯಿಲ್ಲ. ಖರ್ಚಿಗೆ ನೀಡುವಾತನು ಸ್ಥಿತಿವಂತನಾಗಿರಬೇಕೆಂಬು
ಎರಡನೇ ಉಪಾಧಿಯಾಗಿದೆ. ತನ್ನ ಮತ್ತು ತನ್ನ ಕುಟುಂಬದ ಅಗತ್ಯಗಳನ್ನು ಪೂ
ಉಳಿತಾಯ ಮಾಡುವ ಸಾಮರ್ಥ್ಯವಿರುವವನೆಂದರ್ಥ. "ಮೊದಲು ನಿನ್ನಿಂದ ಆರಂಭಿಸಬೇ
ಅನಂತರ ನಿನ್ನ ಕುಟುಂಬದವರಿಗೆ" ಎಂದು ಪ್ರವಾದಿವಚನದಲ್ಲಿದೆಯಷ್ಟೆ. ಸಂಬಂಧಿಕ
ಖರ್ಚಿಗೆ ನೀಡುವುದಕ್ಕೆ ಸಹಾನುಭೂತಿಯ ಹಿನ್ನೆಲೆಯಿರುವುದರಿಂದ ಸ್ವಂತ ಜೀವನದ ಮು
ಅವಶ್ಯಕತೆಗಳನ್ನೂ ಪೂರೈಸಿ ಉಳಿತಾಯ ವಿರುವವರಿಗೆ ಮಾತ್ರ ಅದು ಕಡ್ಡಾಯವಾಗುತ್ತ
ಸ್ವಂತ ಅವಶ್ಯಕತೆಗಳು ಮೂಲಭೂತ ಅವಶ್ಯಕತೆಗಳಲ್ಲಿ ಸೇರಿದೆ. ಪತ್ನಿಯ ವೆಚ್ಚವೂ ಅ
ಪತ್ನಿಯು ಸ್ವಂತ ಅವಶ್ಯಕತೆಗಳ ಅನಿವಾರ್ಯ ಅಂಗವಷ್ಟೆ.

## ಏನೆಲ್ಲ ನೀಡಬೇಕು?

ಖರ್ಚಿನ ಪರಿಮಾಣವನ್ನು ಇಸ್ಲಾಮ್ ನಿರ್ಣಯಿಸಿಲ್ಲ. ಏಕೆಂದರೆ ಸ್ಥಳ, ಕಾಲ, ಪರಿ
ಊರ ಸಂಪ್ರದಾಯಗಳಿಗನುಗುಣವಾಗಿ ಬೇಡಿಕೆಗಳ ಪ್ರಮಾಣವೂ ಭಿನ್ನವಾಗಿರುತ್ತದೆ. ಖ
ನೀಡುವ ಹೊಣೆಗಾರನ ಆರ್ಥಿಕ ಸ್ಥಿತಿಯೂ ವಿಭಿನ್ನವಾಗಿರಬಹುದು. ಖರ್ಚಿಗೆ ಕೊಡುವ
ಸಾಮರ್ಥ್ಯ ಮತ್ತು ಪಡೆಯುವವನ ಬೇಡಿಕೆಯನುಸಾರ ನ್ಯಾಯೋಚಿತವಾಗಿ ಬಡ
ಬೇಡಿಕೆಗಳನ್ನು ಪೂರೈಸಬೇಕೆಂದು ಇಸ್ಲಾಮ್ ಗರಿಷ್ಠವಾಗಿ ಅಪೇಕ್ಷಿಸುತ್ತದೆ. ಅಲ್ಲಾಹ

ೀಳಿರುವನು:

"ಸ್ಥಿತಿವಂತನು ತನ್ನ ಸ್ಥಿತಿಗನುಸಾರ ಜೀವನಾಂಶ ನೀಡಬೇಕು. ಕಡಿಮೆ ಜೀವನಾಧಾರ ೀಡಲ್ಪಟ್ಟಿರುವವನು, ಅಲ್ಲಾಹನು ಆತನಿಗೆ ನೀಡಿರುವುದರಿಂದಲೇ ಖರ್ಚುಮಾಡಲಿ. ಅಲ್ಲಾಹನು ಯಾರಿಗೂ ಎಷ್ಟು ಕೊಟ್ಟಿರುತ್ತಾನೋ ಅದಕ್ಕಿಂತ ಹೆಚ್ಚಿನ ತ್ರಾಸ ಕೊಡುವುದಿಲ್ಲ."

(ಅತ್ತಲಾಕ್:7)

"ವಿವಾಹ ವಿಚ್ಛೇದಿತರಾದ ಸ್ತ್ರೀಯರಿಗೆ ನೀವು ಏನಾದರೂ ಸೊತ್ತನ್ನು ಕೊಡಬೇಕು. ನಿಕರು ತಮ್ಮ ಶಕ್ತ್ಯಾನುಸಾರ ಮತ್ತು ಬಡವನು ತನ್ನ ಶಕ್ತ್ಯಾನುಸಾರ ನ್ಯಾಯೋಚಿತ ೀತಿಯಿಂದ ಕೊಡಬೇಕು. ಇದು ಸಜ್ಜನರ ಮೇಲಿರುವ ಬಾಧ್ಯತೆಯಾಗಿದೆ."

(ಅಲ್ ಬಕರಃ:236)

"ತಾಯಂದಿರು ತಮ್ಮ ಮಕ್ಕಳಿಗೆ ಎರಡು ವರ್ಷ ಪೂರ್ತಿಯಾಗಿ ಹಾಲುಣಿಸಬೇಕು. ಗ ಅವರಿಗೆ ಶಿಶುವಿನ ತಂದೆಯು ನ್ಯಾಯೋಚಿತ ರೀತಿಯಿಂದ ಅನ್ನ, ಬಟ್ಟೆ ಕೊಡಲು ಾಧ್ಯಸ್ಥನಾಗುವನು. ಆದರೆ ಅವನವನ ಶಕ್ತಿಗಿಂತ ಮೀರಿದ ಭಾರವನ್ನು ಯಾರ ಮೇಲೂ ಾಕಬಾರದು."

(ಅಲ್ ಬಕರಃ:233)

ಅಬೂ ಸುಫ್‌ಯಾನ್‌ರ ಪತ್ನಿ ಹಿಂದ್‌ಳೊಡನೆ ಅವರಿಗೂ ಮಕ್ಕಳಿಗೂ ಅಗತ್ಯವಿರುವಷ್ಟನ್ನು ತಿಯ ಸಂಪತ್ತಿನಿಂದ ತೆಗೆದು ಕೊಳ್ಳಲು ಪ್ರವಾದಿಯವರು(ಸ) ಒಪ್ಪಿಗೆ ನೀಡಿದರು. ರ್ಚಿಗಾಗಿ ಏನೆಲ್ಲಾ ನೀಡಬೇಕೆಂದು ಕರ್ಮ ಶಾಸ್ತ್ರಜ್ಞರು ವಿವರಿಸಿದ್ದಾರೆ. ಅವುಗಳನ್ನು ಇಲ್ಲಿ ಾಡಲಾಗಿದೆ:

1. ಆಹಾರ ಪಾನೀಯಗಳು. 2. ಬೇಸಿಗೆ- ಚಳಿಗಾಲದಲ್ಲಿ ಬಳಸುವ ಉಡುಪುಗಳು ಮನೆ ಮತ್ತು ಮನೆಯ ಉಪಕರಣಗಳು 4. ಸ್ವಂತ ಕೆಲಸ ಮಾಡಲಾಗದವರಿಗೆ ಸೇವಕರು. ಅಪೇಕ್ಷಿತರಿಗೆ ವಿವಾಹ. 6 ಪತ್ನಿ ಮಕ್ಕಳಿಗೆ ಬೇಕಾದ ಖರ್ಚು.

ಶೈಖುಲ್ ಇಸ್ಲಾಮ್ ಇಬ್ನು ಖುದ್ದಾಮ್ ತಮ್ಮ 'ಅಲ್‌ಕಾಫಿ' ಎಂಬ ಗ್ರಂಥದಲ್ಲಿ ಾಗ- 2, ಪುಟ :1002) ಹೀಗೆ ಹೇಳಿದ್ದಾರೆ: .

ಸಂಬಂಧಿಕನಿಗೆ ಅವನ ಬೇಡಿಕೆಗಳಿಗನುಸಾರ ಖರ್ಚಿಗೆ ನೀಡಬೇಕು. ೕಡಿಕೆಗಳಿರುವುದರಿಂದಲೇ ಖರ್ಚಿಗೆ ಕೊಡುವುದು ಕಡ್ಡಾಯವಾಗುವುದಷ್ಟೆ. ಆದ್ದರಿಂದ ಅದು ೕಡಿಕೆಗಳನ್ನು ಪೂರೈಸುವ ರೀತಿಯಲ್ಲಿರಬೇಕು. ಓರ್ವರಿಗೆ ಸೇವಕನ ಅಗತ್ಯವಿದ್ದರೆ ಅದನ್ನೂ ನಗಿಸಬೇಕು. ಪತ್ನಿಯಿದ್ದರೆ ಆಕೆಯ ಖರ್ಚನ್ನು ಭರಿಸಬೇಕು. ಹಾಗಾದರೆ ಮಾತ್ರ ೕಡಿಕೆಗಳನ್ನು ಸಂಪೂರ್ಣ ಈಡೇರಿಸಿದಂತಾಗುವುದು.

ತಾನು ಖರ್ಚಿಗೆ ನೀಡಬೇಕಾದ ಮಗ, ತಂದೆ ಅಥವಾ ಪಿತಾಮಹನು ಾಹವಾಗಬಯಸಿದ್ದರೆ ಅದಕ್ಕೂ ಏರ್ಪಾಡು ಮಾಡಬೇಕು. ಏಕೆಂದರೆ ಅದು ಅವರಿಗೆ ಗತ್ಯವಿದ್ದರೂ ಬಡತನ ಅದಕ್ಕೆ ಅಡ್ಡಿಯಾಗಿದೆ. ಆಗ ಅದು ಕೂಡಾ ಆಹಾರ ಮತ್ತು ಬಟ್ಟೆ

ಬರೆಯ ಬೇಡಿಕೆಗೆ ಸಮಾನವಾಗುತ್ತದೆ. ಜೀವನದ ಸುಖಭೋಗವೇ ವಿವಾಹದ ಉದ್ದೇಶವಾಗಿರುವುದರಿಂದ ಮುದುಕಿ ಅಥವಾ ಕುರೂಪಿಗಳನ್ನು ವಿವಾಹ ಮಾಡಿಸಿ ಕೊಟ್ಟರೆ ಸಾಲದು.

ಚಿಕಿತ್ಸೆ ಕಡ್ಡಾಯವಾಗುವ ಕುರಿತು ಕರ್ಮಶಾಸ್ತ್ರಜ್ಞರು ಏನನ್ನೂ ಸ್ಪಷ್ಟಪಡಿಸಿಲ್ಲ. ಚಿಕಿತ್ಸೆಯೆಂದರೆ ವೈದ್ಯರ ಫೀಸು ಮತ್ತು ಔಷಧದ ಬೆಲೆಯಾಗಿದೆ. ಕರ್ಮ ಶಾಸ್ತ್ರಜ್ಞರು ಅದನ್ನು ಸ್ಪಷ್ಟ ಪಡಿಸದಿರುವುದಕ್ಕೆ ಅನೇಕ ಕಾರಣಗಳಿವೆ. ಕೆಲವರು ಹೇಳಿರುವಂತೆ ಅದು ಶಾಶ್ವತ ಖರ್ಚಿಗೆ ಸೇರಿದ್ದಲ್ಲ- ಕೆಲವೊಮ್ಮೆ ಬಂದು ಬಿಡುತ್ತದೆ. ವೈದ್ಯಕೀಯವು ಬಹುವಂಶ ಗಣನಾಶಾಸ್ತ್ರವಾಗಿದ್ದುದರಿಂದ ವ್ಯಕ್ತಿಗಳು ಅವಕ್ಕೆ ಸ್ವಯಂ ಬದ್ಧರಾಗುವುದನ್ನೇ ವಿದ್ವಾಂಸರು ಕಡ್ಡಾಯವೆಂದು ಪರಿಗಣಿಸಿರಲಿಲ್ಲ. ಐಚ್ಛಿಕ ಅಥವಾ ಸಮ್ಮತಾರ್ಹವೆಂದಷ್ಟೇ ಪರಿಗಣಿಸಿದ್ದರು. ಒಬ್ಬ ವ್ಯಕ್ತಿಯ ಸ್ವಂತ ವಿಷಯದಲ್ಲಿಯೂ ಕಡ್ಡಾಯವಲ್ಲದ ಕಾರ್ಯವನ್ನು ಇತರರಿಗೆ ಕಡ್ಡಾಯವಾಗಿ ಪೂರೈಸಬೇಕೆನ್ನುವುದಾದರೂ ಹೇಗೆ? ಆದರೆ, ಇಂದು ಸ್ಥಿತಿ ಬದಲಾಗಿದೆ ರೋಗ ನಿರ್ಣಯವು ಸುಗಮ ಮತ್ತು ಚಿಕಿತ್ಸೆಯು ಸರ್ವ ಸಾಮಾನ್ಯವಾಗಿದೆ. ರೋಗಿಯ ಚಿಕಿತ್ಸೆ ನಡೆಸದಿರುವುದು ಕ್ರೌರ್ಯವಾಗಿದೆ. ಚಿಕಿತ್ಸೆ ಕಡ್ಡಾಯವೆಂದು ಪ್ರವಾದಿವಚನಗಳಲ್ಲಿ ಸೂಚಿಸಲಾಗಿದೆ. "ದೇವನ ದಾಸರೇ! ನೀವು ಔಷಧವನ್ನು ಬಳಸಿರಿ! ಏಕೆಂದರೆ ರೋಗವನ್ನು ಸೃಷ್ಟಿಸಿದಾತನೇ ಅದರ ಔಷಧಗಳನ್ನೂ ಸೃಷ್ಟಿಸಿದ್ದಾನೆ." ಇದು ಅಂಗೀಕಾರಾರ್ಹ ಪ್ರವಾದಿ ವಚನವಾಗಿದೆ.

## ಕೇವಲ ಇಸ್ಲಾಮಿನ ವೈಶಿಷ್ಟ್ಯ

ಬಡವನ ಜೀವನಾವಶ್ಯಕತೆಗಳನ್ನು ಪೂರೈಸುವ ಹೊಣೆಯನ್ನು ಶ್ರೀಮಂತ ಸಂಬಂಧಿಕನಿಗೆ ನೀಡುವ ಮೂಲಕ ಸಾಮಾಜಿಕ ಭದ್ರತೆಯ ಮೂಲಾಧಾರವನ್ನು ಇಸ್ಲಾಮ್ ನಾಟಿದೆ. ಅದನು ಐಚ್ಛಿಕವಲ್ಲ, ಕಡ್ಡಾಯವೆಂದು ಇಸ್ಲಾಮ್ ಪರಿಗಣಿಸಿದೆಯೆಂದು ನಾವು ನೋಡಿದೆವು ಇಸ್ಲಾಮೀ ಕರ್ಮಶಾಸ್ತ್ರದಲ್ಲಿ ಈ ವಿಷಯಕ್ಕೆ ಸಂಬಂಧಿಸಿ ಪ್ರತ್ಯೇಕ ಅಧ್ಯಾಯವೇ ಇದೆ ಇದು ಹೊಸ ಅಥವಾ ಹಳೆಯ ಯಾವುದೇ ಕಾನೂನು ಸಂಹಿತೆಗಿಲ್ಲದ ವೈಶಿಷ್ಟ್ಯವಾಗಿದೆ ಆದ್ದರಿಂದ ಇಸ್ಲಾಮೀ ಸಮಾಜದ ಪ್ರತಿಯೊಬ್ಬ ಬಡವನೂ ಜೀವನಾವಶ್ಯಕತೆಗಳಿಗಾ ಶ್ರೀಮಂತ ಸಂಬಂಧಿಕರಿಂದ ನ್ಯಾಯೋಚಿತ ನೆರವನ್ನು ಕೇಳಿ ಪಡೆಯಬಹುದಾಗಿದೆ. ಇಸ್ಲಾಮಿ ಕಾನೂನು ಸಂಹಿತೆಯೂ ಇಸ್ಲಾಮೀ ನ್ಯಾಯಾಲಯಗಳಿಗೆ ಯಾವಾಗಲೂ ಮಾದರಿಯಾಗಬೇಕಾ ತೀರ್ಪುಗಳೂ ಆತನ ಜತೆಯಲ್ಲಿದೆ.

ಪರಂಪರಾಗತವಾಗಿ ಅನುಕರಿಸುತ್ತಿರುವ ಇಸ್ಲಾಮೀ ನಿಯಮವೆಂಬ ನೆಲೆಯಲ್ಲಿ ಗ್ರಹಿಸಲ್ಪಡುವುದರಿಂದ ಈ ವ್ಯವಸ್ಥೆ ತೀರಾ ಸಹಜ ಮತ್ತು ನೈಸರ್ಗಿಕವೆಂದು ನಮ ಭಾಸವಾಗುತ್ತದೆ. ಆದರೆ, ನಾಗರಿಕ ಪ್ರಗತಿ ಸಾಧಿಸಿದವರೆಂದು ಭಾವಿಸುವ ಜನತೆಯು ಈ ವ್ಯವಸ್ಥೆಯನ್ನು ಬಹಳ ಅದ್ಭುತ ಮತ್ತು ಅಚ್ಚರಿಯಿಂದ ನೋಡುತ್ತದೆ. 'ಮಾನವ ಕುಲ

ಇಸ್ಲಾಮಿನ ಅವಶ್ಯಕತೆ' ಎಂಬ ಕೃತಿಯಲ್ಲಿ ಕುಟುಂಬ ವ್ಯವಸ್ಥೆಗೆ ಇಸ್ಲಾಮ್ ನೀಡಿರುವ ಮಹತ್ತ್ವವನ್ನು ವಿವರಿಸುತ್ತಾ ಮುಹಮ್ಮದುಲ್ ಯೂಸುಫ್ ಮರ್ಸಿ ಹೀಗೆ ಬರೆದಿದ್ದಾರೆ:

"ನಾನು ಫ್ರಾನ್ಸಿನಲ್ಲಿದ್ದಾಗ ಸ್ವಲ್ಪ ಕಾಲ ವಾಸವಾಗಿದ್ದ ಮನೆಯಲ್ಲಿ ಕುಲೀನಳೆನ್ನಬಹುದಾದ ಯುವತಿಯೊಬ್ಬಳು ಮನೆಗೆಲಸಕ್ಕೆ ಬರುತ್ತಿದ್ದಳು. ಈ ಯುವತಿಯು ಮನೆಗೆಲಸ ಮಾಡುವಂತಹ ಪರಿಸ್ಥಿತಿಗೆ ಕಾರಣವೇನು? ಈ ಕೆಲಸದಿಂದ ಆಕೆಯನ್ನು ಮುಕ್ತಗೊಳಿಸಿ ಆಕೆಯ ಜೀವನಾವಶ್ಯಕತೆಗಳನ್ನು ಒದಗಿಸಬಲ್ಲಂತಹ ಸಂಬಂಧಿಕರು ಅವಳಿಗಿಲ್ಲವೇ ಎಂದು ಮನೆಯೊಡತಿಯೊಡನೆ ನಾನು ವಿಚಾರಿಸಿದೆ- ಆಕೆಯು ಕುಲೀನ ಮನೆತನದವಳು, ಆಕೆಗೆ ಓರ್ವ ಶ್ರೀಮಂತ ಚಿಕ್ಕಪ್ಪನಿದ್ದಾನೆ. ಆದರೆ, ಆತ ಈ ಯುವತಿಯ ಬಗ್ಗೆ ಗಮನ ಹರಿಸುವುದಿಲ್ಲವೆಂದು ಅವರು ತಿಳಿಸಿದರು. "ಖರ್ಚಿಗೆ ಕೊಡುವುದಿಲ್ಲವೆಂದು ನ್ಯಾಯಾಲಯಕ್ಕೆ ಹೋಗಬಾರದೇಕೆ?" ನಾನು ಕೇಳಿದೆ. ಅದನ್ನು ಕೇಳಿ ಮನೆಯೊಡತಿ ಅಚ್ಚರಿ ಪ್ರಕಟಿಸಿದರು. ಅದು ಕಾನೂನು ಪ್ರಕಾರ ಸಾಧ್ಯವಿಲ್ಲವೆಂದು ನನಗೆ ಮನವರಿಕೆಯಾಯಿತು. ಈ ಬಗ್ಗೆ ಇಸ್ಲಾಮೀ ಕಾನೂನಿನ ಧೋರಣೆಯನ್ನು ವಿವರಿಸಿದಾಗ ಅವರ ಪ್ರತಿಕ್ರಿಯೆ ಹೀಗಿತ್ತು: "ಇಂತಹ ಒಂದು ಕಾನೂನು ಸಂಹಿತೆ ನಮಗೂ ಇರುತ್ತಿದ್ದರೆ! ಈ ಕಾನೂನು ಜಾರಿಯಲ್ಲಿದ್ದರೆ ಯಾವೊಬ್ಬ ಯುವತಿಯೂ ಮನೆಯ ಹೊರಗೆ, ಗದ್ದೆ, ಕಾರ್ಖಾನೆ ಅಥವಾ ಸರಕಾರೀ ಕಚೇರಿಗಳಲ್ಲಿ ದುಡಿಯಬೇಕಾಗುತ್ತಿರಲಿಲ್ಲ."

(ಅಲ್ ಇಸ್ಲಾಮು ವ ಹಾಜತುಲ್ ಇನ್ಸಾನಿಯ್ಯತು ಇಲೈಹಿ : ಪುಟ ಮುಹಮ್ಮದ್ ಯೂಸುಫ್ ಮರ್ಸಿ)

8

# ಝಕಾತ್

ವ್ಯಕ್ತಿ ಮತ್ತು ಕುಟುಂಬದ ಬೇಡಿಕೆಗಳ ಪೂರೈಕೆಗಾಗಿ, ದೇವ ಮಾರ್ಗದಲ್ಲಿ ವ್ಯಯಿಸುವ ಸಂಪನ್ಮೂಲಗಳ ಸಂಪಾದನೆಗಾಗಿ ಉದ್ಯೋಗ ಮತ್ತು ಶ್ರಮ ವಹಿಸಬೇಕೆಂದು ಇಸ್ಲಾಮ್ ಎಲ್ಲರೊಡನೆಯೂ ಆಜ್ಞಾಪಿಸಿದೆ. ದುಡಿಯುವ ಸಾಮರ್ಥ್ಯವಿಲ್ಲ ಮತ್ತು ಜೀವನಾವಶ್ಯತೆಗಳಿಗೆ ಬೇಕಾದ ಸ್ವಂತ ಸಂಪಾದನೆ ಅಥವಾ ವಾರೀಸು ಸೊತ್ತಿಲ್ಲದವರ ಹೊಣೆಯನ್ನು ಅವರ ಶ್ರೀಮಂತ ಸಂಬಂಧಿಕರಿಗೆ ಇಸ್ಲಾಮ್ ವಹಿಸಿ ಕೊಟ್ಟಿತು. ಆದರೆ ಎಲ್ಲ ಬಡವರಿಗೂ ತಮ್ಮ ಹೊಣೆ ವಹಿಸಿಕೊಳ್ಳಬಲ್ಲಂತಹ ಶ್ರೀಮಂತ ಸಂಬಂಧಿಕರಿರಲಾರರು. ಅಂತಹ ಪರಿಸ್ಥಿತಿಯಲ್ಲಿ ಆ ಬಡವರು ಮತ್ತು ದುರ್ಬಲರು ಏನು ಮಾಡಬೇಕು? ಅನಾಥರು, ವಿಧವೆಯರು ಮತ್ತು ವೃದ್ಧರನ್ನು ಸಂರಕ್ಷಿಸುವವರು ಯಾರು? ಹುಟ್ಟು ಕಿವುಡರು, ಕುರುಡರು, ಅಂಗವಿಕಲರು ಬದುಕುವುದು ಹೇಗೆ? ದುಡಿಯುವ ಸಾಮರ್ಥ್ಯವಿದ್ದರೂ, ಉದ್ಯೋಗಾವಕಾಶವಿಲ್ಲದೆ ನಿರುದ್ಯೋಗಿಗಳಾದವರು ಮತ್ತು ಉದ್ಯೋಗವಿದ್ದರೂ ಕಡಿಮೆ ಆದಾಯವಿದ್ದು ಜೀವನಾವಶ್ಯಕತೆ ಪೂರೈಸಲಾಗದವರು ಏನು ಮಾಡಬೇಕು?

ಈ ವಿಭಾಗವನ್ನು ನಿತ್ಯ ಬಡತನ ಮತ್ತು ಸಂಕಷ್ಟಗಳಿಗೆ ಬಲಿ ನೀಡಬೇಕೇ? ಶ್ರೀಮಂತರಿರುವ ಸಮಾಜವು ಅವರಿಗೆ ಸಹಾಯಹಸ್ತ ನೀಡದೆ ಮೂಖ ಪ್ರೇಕ್ಷಕರಾಗಿರಬೇಕೇ? ಇಸ್ಲಾಮ್ ಅದಕ್ಕೆ ಎಂದೂ ಅನುಮತಿ ನೀಡುವುದಿಲ್ಲ. ಆ ವಿಭಾಗಕ್ಕಾಗಿ ಶ್ರೀಮಂತರ ಧನದಲ್ಲಿ ಅಲ್ಲಾಹನು ನಿರ್ದಿಷ್ಟ ಪಾಲನ್ನು ನಿಗದಿ ಪಡಿಸಿದ್ದಾನೆ- ಅದುವೇ 'ಝಕಾತ್' ಬಡವನನ್ನು ಸ್ವಾವಲಂಬಿಯಾಗಿಸುವುದೇ ಅದರ ಪ್ರಥಮ ಧ್ಯೇಯ.

ಝಕಾತ್‌ಗೆ ಅರ್ಹರಾಗಿರುವವರಲ್ಲಿ ಬಡವರು ಮತ್ತು ನಿರ್ಗತಿಕರಿಗೆ ಮೊದಲ ಸ್ಥಾನವಿದೆ. ಕೆಲವು ಸಂದರ್ಭಗಳಲ್ಲಿ ಪ್ರವಾದಿವರ್ಯರು(ಸ) ಕೇವಲ ಈ ವರ್ಗದವರನ್ನು ಮಾತ್ರ ಝಕಾತ್‌ಗೆ ಅರ್ಹರಾದವರ ಸಾಲಿನಲ್ಲಿ ಪ್ರಸ್ತಾವಿಸಿದ್ದರು. ಯಾಕೆಂದರೆ, ಅವರೇ ಅದರ ಮೊದಲ ಗುರಿ. ಮುಆದ್ ಬಿನ್ ಜಬಲ್‌ರನ್ನು ಯಮನ್‌ಗೆ ಕಳುಹಿಸಿದಾಗ ಪ್ರವಾದಿಯವರು(ಸ) ಅವರೊಡನೆ, ಶ್ರೀಮಂತರಿಂದ ಝಕಾತ್ ವಸೂಲು ಮಾಡಿ ಬಡವರಿಗೆ ವಿತರಣೆ ಮಾಡಬೇಕೆಂದು ಆದೇಶಿಸಿದ್ದರು. ಬಡವರ ಹೊರತು ಇತರರಿಗೆ ನೀಡಬಾರದೆಂದೂ ಅಬೂ ಹನೀಫಾ ಮತ್ತು ಶಿಷ್ಯರು ಅಭಿಪ್ರಾಯ ಪಟ್ಟಿದ್ದಾರೆ.

## ಝಕಾತ್ - ಪ್ರಮುಖ ಆದಾಯ

ಝಕಾತ್, ಸಣ್ಣ ಅಥವಾ ತುಚ್ಛ ಆದಾಯ ಮೂಲವಲ್ಲ. ವಿದ್ವಾಂಸರ ಪ್ರಬಲ ಅಭಿಪ್ರಾಯ ಪ್ರಕಾರ ಹಸಿರು ತರಕಾರಿ, ಹಣ್ಣು ಹಂಪಲು, ಬೆಳೆ, ಧಾನ್ಯ ಇತ್ಯಾದಿಗಳ ಒಟ್ಟು

ವ್ರತಾಚರಣೆಯ ಪರಿಪೂರ್ಣತೆ ಮತ್ತು ಹಬ್ಬದ ಮಾನ್ಯತೆಗಾಗಿ ನಿರ್ಣಯಿಸಲಾದ ಝಕಾತುಲ್ ಫಿತ್ರ್. ಇದನ್ನು ನಿಯಮ ಗೊಳಿಸಿರುವುದರಲ್ಲಿ ಎರಡು ವಿಷಯಗಳನ್ನು ಪರಿಗಣಿಸಲಾಗಿದೆ- 1.ಉಪವಾಸದಲ್ಲಿ ಸಂಭವಿಸಿರಬಹುದಾದ ಲೋಪ ದೋಷಗಳಿಗೆ ಪ್ರಾಯಶ್ಚಿತ್ತ. 2. ಬಡವರ್ಗವನ್ನು ಗೌರವಿಸಿ, ಅವರೊಂದಿಗಿನ ಋಣ ಸಂಬಂಧದ ಬಗ್ಗೆ ಹಬ್ಬದ ದಿನ ಸಮಾಜವನ್ನು ಎಚ್ಚರಿಸಿ ಹಬ್ಬದ ಸಂತೋಷದಲ್ಲಿ ಅವರನ್ನೂ ಭಾಗಿಗೊಳಿಸುವುದು.

ಇಬ್ನು ಅಬ್ಬಾಸ್ ಹೇಳಿರುವರು: ಅನಾವಶ್ಯಕ ಮತ್ತು ಕೆಟ್ಟ ಕಾರ್ಯಗಳಿಂದ ಉಪವಾಸಿಗನನ್ನು ಶುದ್ಧೀಕರಿಸಿ, ನಿರ್ಗತಿಕರಿಗೆ ಆಹಾರ ದೊರೆಯಲಿಕ್ಕಾಗಿ ಪ್ರವಾದಿಯವರು(ಸ) 'ಝಕಾತುಲ್ ಫಿತ್ರ್ ಕಡ್ಡಾಯ ಗೊಳಿಸಿದ್ದಾರೆ." (ಅಬೂ ದಾವೂದ್, ಇಬ್ನು ಮಾಜಃ, ಹಾಕಿಮ್)

ಝಕಾತುಲ್ ಫಿತ್ರ್‌ಗೆ ಕೆಲವು ವೈಶಿಷ್ಟ್ಯಗಳಿವೆ-

1. ಹಣದ ಬದಲಾಗಿ ಜನರ ಸಂಖ್ಯೆಯನುಸಾರ ಅದರ ಪಾಲನ್ನು ನಿರ್ಣಯಿಸಲಾಗಿದೆ

2. ಅದು ಝಕಾತ್ ಕಡ್ಡಾಯವಾಗುವಷ್ಟು ಸಂಪತ್ತಿರುವವರಿಗೆ ಮಾತ್ರ ಸೀಮಿತವಾಗಿಲ್ಲ. ಬದಲಾಗಿ, ಗುಲಾಮ, ಸ್ವತಂತ್ರ, ಸ್ತ್ರೀ-ಪುರುಷ ಎಂಬ ವ್ಯತ್ಯಾಸವಿಲ್ಲದೆ ಎಲ್ಲರಿಗೂ ಅದರ ಹೊಣೆಯಿದೆ. ಹಬ್ಬದ ದಿನ ತನ್ನ ಮತ್ತು ಕುಟುಂಬದ ಖರ್ಚು ವೆಚ್ಚ ಕಳೆದು ಬಾಕಿ ಉಳಿಯುವ ಎಲ್ಲರೂ 'ಝಕಾತುಲ್ ಫಿತ್ರ್' ನೀಡಬೇಕು. ಸುಸ್ಥಿತಿ ಮತ್ತು ದುಸ್ಥಿತಿಗಳಲ್ಲಿ ವ್ಯಯಿಸಿ ದಾನ ಮಾಡಲು ಮುಸ್ಲಿಮನಿಗೆ ಅಭ್ಯಾಸಗೊಳಿಸುವುದೇ ಇದರ ಉದ್ದೇಶ. ಫಿತ್ರ್ ಝಕಾತ್ ಪಡೆಯುವ ಅರ್ಹತೆಯಿದ್ದರೂ ಮುಸ್ಲಿಮನ ಕೈಯ್ಯು ಸದಾ ಮೇಲಿರಬೇಕು. ದಾನ ಮಾಡುವುದು ಅವರ ಶೀಲವಾಗಿರಬೇಕು. ಒಂದು ಪ್ರವಾದಿ ವಚನದಲ್ಲಿ ಹೀಗಿದೆ: "ನಿಮ್ಮಲ್ಲಿರುವ ಧನಿಕರನ್ನು ಅಲ್ಲಾಹ್ ಸಂಸ್ಕರಿಸಬಹುದು. ಹಾಗಾದರೆ, ನಿಮ್ಮಲ್ಲಿರುವ ಬಡವರಿಗೆ ಅವರು ನೀಡುವುದಕ್ಕಿಂತ ಹೆಚ್ಚು ಅಲ್ಲಾಹನು ಮರಳಿ ಕೊಡುವನು".

ಫಿತ್ರ್ ಝಕಾತ್ ಯಾರಿಗೆ ಕಡ್ಡಾಯವಾಗುತ್ತದೆ ಎಂಬ ಕುರಿತು ಇಮಾಮ್ ಅಬೂ ಹನೀಫಾರ ಹೊರತು ಇತರೆಲ್ಲ ವಿದ್ವಾಂಸರು ಸಮಾನ ದೃಷ್ಟಿಕೋನವನ್ನು ಹೊಂದಿದ್ದಾರೆ. ಝಕಾತ್ ಕಡ್ಡಾಯವಾಗುವ ಮಿತಿಯಷ್ಟು ಹಣವಿರುವವರಿಗೆ ಮಾತ್ರ ಫಿತ್ರ್ ಝಕಾತ್ ಕಡ್ಡಾಯವೆಂದು ಅಬೂ ಹನೀಫಾರ ಅಭಿಪ್ರಾಯ.

3. ಓರ್ವ ವ್ಯಕ್ತಿಯು ಕೇವಲ ತನ್ನ ಪರವಾಗಿ ಫಿತ್ರ್ ಝಕಾತ್ ನೀಡಿದರೆ ಸಾಲದು. ಪತ್ನಿ ಮಕ್ಕಳಿಗೂ ತನ್ನ ವೆಚ್ಚದಿಂದ ಬಾಳುವ ಇತರರ ಪರವಾಗಿಯೂ ನೀಡಬೇಕು.

4. ಮುಸ್ಲಿಮ್ ಸಮಾಜದ ಹೆಚ್ಚಿನ ಎಲ್ಲರಿಗೂ ವಹಿಸಬಹುದಾದ ರೀತಿಯ ಮಿತ ಪ್ರಮಾಣವನ್ನು ಫಿತ್ರ್ ಝಕಾತ್‌ಗೆ ನಿರ್ಣಯಿಸಲಾಗಿದೆ. ಖರ್ಜೂರ, ದ್ರಾಕ್ಷೆ, ಗೋಧಿ ಇತ್ಯಾದಿಗಳಿಂದ ಒಬ್ಬರ ಪರವಾಗಿ ಒಂದು ಸಾಅ್ ನೀಡಬೇಕೆಂದು ಪ್ರವಾದಿಯವರು(ಸ) ಆಜ್ಞಾಪಿಸಿದ್ದಾರೆ. ಊರಿನ ಮುಖ್ಯ ಆಹಾರ ಧಾನ್ಯದ ಒಂದು ಸಾಅ್ ನೀಡಬೇಕು. ಓರ್ವ

ಉತ್ಪಾದನೆಯ 10 ಯಾ 20% ಝಕಾತ್ ನೀಡಬೇಕು. ಕುರ್‌ಆನ್‌ನ ಈ ವಾಕ್ಯವು ಅದರ ಸಾಮಾನ್ಯ ದೃಷ್ಟಾಂತವಾಗಿದೆ:

"ವಿಶ್ವಾಸಿಗಳೇ, ನೀವು ಸಂಪಾದಿಸಿದ ಉತ್ತಮ ವಸ್ತುಗಳಿಂದಲೂ ಭೂಮಿಯಿಂದ ನಾವು ನಿಮಗೆ ಉತ್ಪಾದಿಸಿ ಕೊಟ್ಟಿರುವವುಗಳಿಂದಲೂ ವ್ಯಯಿಸಿರಿ." (ಅಲ್‌ಬಕರಃ:267)

ಪ್ರವಾದಿ(ಸ) ಹೇಳಿರುವರು: "ಮಳೆ ಸುರಿದು ಆಗುವ ಬೆಳೆಯಿಂದ $^1/_{10}$ ಮತ್ತು ನೀರಾವರಿಯಿಂದಾದುದರಿಂದ $^1/_{20}$ ಅಂಶ ಕಡ್ಡಾಯವಾಗಿದೆ." (ಬುಖಾರಿ, ಮುಸ್ಲಿಮ್)

ಇಂದಿನ ಕಾಲದಲ್ಲಿ ಕಟ್ಟಡಗಳು, ಕಾರ್ಖಾನೆ ಇತ್ಯಾದಿಗಳು ಕೃಷಿ ಸ್ಥಳಕ್ಕೆ ತುಲ್ಯವಾಗಿವೆ. ಅವು ಕ್ರಮಬದ್ಧ ಆದಾಯವಿರುವ ಮೂಲ ಮತ್ತು ಅನೇಕ ಜನರಿಗೆ ಮೂಲ ಬಂಡವಾಳ ಗಳಿಸಿಕೊಡುವಂತಹ ಸೊತ್ತಾಗಿದೆ. ಉತ್ಪಾದನೆಯಾಗುವ ಜೇನಿನ $^1/_{10}$ ಅಂಶ ಝಕಾತಾಗಿ ನೀಡಬೇಕೆಂದು ಪೂರ್ವ ವಿದ್ವಾಂಸರೇ ಅಭಿಪ್ರಾಯ ಪಟ್ಟಿದ್ದಾರೆ. ಇದು ಸಂಶೋಧನೆಯಿಂದ ಸಾಬೀತಾಗುತ್ತದೆ. ಈ ಕಾಲದಲ್ಲಿ ರೇಷ್ಮೆಹುಳು, ಸಾಕು ಪ್ರಾಣಿಗಳು ಇತ್ಯಾದಿಗಳಿಂದ ಬರುವ ಆದಾಯದ ಸ್ಥಿತಿಯೂ ಇದೇ ಆಗಿದೆ.

ವ್ಯಕ್ತಿಯ ಮೂಲ ಬೇಡಿಕೆ ಮತ್ತು ಸಾಲ ಕಳೆದು ಉಳಿಯುವ ನಗದಿ ಅಥವಾ ವ್ಯಾಪಾರದ ಸರಕಿನ ರೂಪದಲ್ಲಿ ಉಳಿಯುವ ಸಂಪತ್ತಿಗೆ ಶರೀಅತ್ ನಿರ್ಣಯಿಸಿದ ಮಿತಿ ತಲಪಿದರೆ $2^1/_2$% ಝಕಾತ್ ನೀಡಬೇಕು. ಮಿತಿ ತಲಪುವುದು, ವರ್ಷದಲ್ಲಿ ಬಹುವಂಶ ಮಳೆ ನೀರಿನಿಂದ ಬೆಳೆದ ಹುಲ್ಲನ್ನು ಮಾತ್ರ ತಿನ್ನುವುದು ಎಂಬ ಶರ್ತದೊಂದಿಗೆ, ಸಂತಾನೋತ್ಪಾದನೆ ಅಥವಾ ಮನೆಯ ಅಗತ್ಯಗಳಿಗಾಗಿ ಸಾಕುವ ಆಡು, ಜಾನುವಾರು, ಒಂಟೆಗಳಿಗೂ ಝಕಾತ್ ಕಡ್ಡಾಯವಾಗುತ್ತದೆ. ವರ್ಷವಿಡೀ ನೀರು ಹಾಯಿಸಿ ಬೆಳೆಸಿದ ಹುಲ್ಲು ತಿಂದರೂ ಝಕಾತ್ ಕಡ್ಡಾಯವಾಗುವುದೆಂಬುದು ಈ ಬಗ್ಗೆ ಇಮಾಮ್ ಮಾಲಿಕ್‌ರ ಅಭಿಪ್ರಾಯ. ಕೆಲವು ಸಹಾಬಿ ಮತ್ತು ತಾಬಿವುಗಳಿಗೂ ಝಕಾತ್ ಕಡ್ಡಾಯವೆಂಬ ಅಭಿಪ್ರಾಯವಿದೆ. ಅಬೂ ಹನೀಫಾರೂ ಆ ಗುಂಪಿಗೆ ಸೇರಿದ್ದಾರೆ.

ಪೂರ್ವಜರ ನಿಕ್ಷೇಪಗಳಾಗಿ ದೊರೆಯುವ ನಿಧಿಯ $^1/_5$ ಅಂಶವನ್ನು ಝಕಾತಾಗಿ ನೀಡಬೇಕು. ಖನಿಜ-ಲೋಹಗಳಿಗೂ $^1/_5$ ಅಂಶ ಝಕಾತ್ ಕಡ್ಡಾಯವಾಗಿದೆಯೆಂದು ಪ್ರಮುಖ ಕರ್ಮ ಶಾಸ್ತ್ರಜ್ಞರು ಅಭಿಪ್ರಾಯ ಪಟ್ಟಿದ್ದಾರೆ. ಅದನ್ನು ಕೇವಲ ಝಕಾತಿನ ಹಕ್ಕುದಾರರಿಗೆ ವ್ಯಯಿಸಬೇಕೋ ಅಥವಾ ರಾಷ್ಟ್ರದ ಸಾರ್ವಜನಿಕ ಹಿತಕ್ಕಾಗಿ ಬಳಸಬೇಕೋ ಎಂಬ ಬಗ್ಗೆ ಭಿನ್ನಾಭಿಪ್ರಾಯವಿದೆ.

## ಫಿತ್ರ್ ಝಕಾತ್

ಮೇಲಿನ ವಿವರಣೆಯು ಸಂಪತ್ತಿನ ಝಕಾತಿಗೆ ಸಂಬಂಧಿಸಿದೆ. ಇನ್ನೊಂದು ರೀತಿಯ ಝಕಾತ್ ಇದೆ. ಜನರ ಸಂಖ್ಯೆಯೇ ಅದಕ್ಕೆ ಆಧಾರವಾಗಿದೆ. ರಮಝಾನ್‌ನ ಉಪವಾಸ

ಸಾಮಾನ್ಯ ಮನುಷ್ಯನ ಬೊಗಸೆಯಲ್ಲಿ ತುಂಬುವ ಪ್ರಮಾಣವು ಸಾಲ್‌ನ ¼ ಅಂಶವಾಗುತ್ತದೆ. ಆಹಾರ ಧಾನ್ಯಗಳ ಬದಲಿಗೆ ಅದರ ಬೆಲೆಯನ್ನು ಫಿತ್ರ್ ಝಕಾತ್ ಆಗಿ ನೀಡಲಾಗುತ್ತಿತ್ತೆಂದು ಉಮರ್ ಬಿನ್ ಅಬ್ದುಲ್ ಅಝೀಝ್ ಅತ್ವಾಲ್ ಮುಂತಾದವರಿಂದ ಉದ್ಧರಿಸಲ್ಪಟ್ಟಿದೆ. ಅಬೂ ಹನೀಫಾರೂ ಅದೇ ಅಭಿಪ್ರಾಯ ಹೊಂದಿದ್ದಾರೆ. ನಮ್ಮೂರಿನ ಬಡವರ ಮಟ್ಟಿಗೆ ಅದೇ ಉತ್ತಮ. ಬಡವನ ಬೇಡಿಕೆಗಳ ಪೂರೈಕೆಯೇ ಅದರ ಉದ್ದೇಶವಾಗಿರುವುದರಿಂದ ಇತರ ವಸ್ತು ಸಾಧನಗಳಿಗಿಂತ ಹಣ ನೀಡುವುದೇ ಉತ್ತಮವಲ್ಲವೇ.

ಝಕಾತ್, ವಿವರವಾಗಿ ಪ್ರತಿಪಾದಿಸಬೇಕಾದ ವಿಷಯವಾಗಿದೆ. ಅದು ಯಾರಿಗೆಲ್ಲ ಕಡ್ಡಾಯ? ಯಾವೆಲ್ಲ ಸಂಪತ್ತಿನಲ್ಲಿ? ಎಷ್ಟು? ಅದನ್ನು ಹೇಗೆ ಸಂಗ್ರಹಿಸಬೇಕು? ಹೇಗೆ ವಿತರಣೆ ಮಾಡಬೇಕು? ಅದರ ಹಕ್ಕುದಾರರು ಯಾರು? ಉದ್ದೇಶವೇನು? ಫಲವೇನು? ಝಕಾತ್ ಮತ್ತು ತೆರಿಗೆಯಲ್ಲಿರುವ ಸಾಮ್ಯತೆ ಮತ್ತು ವ್ಯತ್ಯಾಸವೇನು? ಇತ್ಯಾದಿ ಎಲ್ಲ ವಿಷಯಗಳ ಬಗ್ಗೆಯೂ ಚರ್ಚಿಸಬೇಕು. ಇಂತಹ ವಿಷಯಗಳನ್ನು ವಿವರವಾಗಿ ಕಲಿಯ ಬಯಸುವವರು ನನ್ನ 'ಫಿಕ್ಹುಸುನ್ನ' ಎಂಬ ಗ್ರಂಥವನ್ನು ಓದಬೇಕು. ಅದರಲ್ಲಿ ಸಾಕಷ್ಟು ವಿವರಗಳಿವೆ ಮತ್ತು ಸಮಗ್ರವಾಗಿದೆ. ಝಕಾತ್‌ನ ಕಾನೂನು ವಿಧಿ ಮತ್ತು ತತ್ತ್ವ ಶಾಸ್ತ್ರವನ್ನು ಕಾರ್ಯಕಾರಣ ಸಹಿತ, ಕುರ್‌ಆನ್ ಮತ್ತು ಸುನ್ನತ್‌ನ ಹಿನ್ನೆಲೆಯಲ್ಲಿ ಅದರಲ್ಲಿ ಚರ್ಚಿಸಲಾಗಿದೆ. ಇಲ್ಲಿ ಝಕಾತ್‌ನ ಕೆಲವು ಪ್ರಮುಖ ಅಂಶಗಳನ್ನು ಮಾತ್ರ ವಿವರಿಸಿದ್ದೇನೆ. ಇಸ್ಲಾಮಿನಲ್ಲಿ ಝಕಾತ್‌ನ ಸ್ಥಾನ, ಝಕಾತ್‌ನ ವಾಸ್ತವಿಕತೆ, ಝಕಾತ್‌ನ ಹಕ್ಕುದಾರರು, ಫುಕರಾಅ್, ಮಸಾಕೀನ್ ಮುಂತಾದುವುಗಳ ತಾತ್ಪರ್ಯ, ಬಡವರು ಮತ್ತು ನಿರ್ಗತಿಕರಿಗೆ ಮೀಸಲಿಡಬೇಕಾದ ಪಾಲಿನ ಮಿತಿ, ಝಕಾತ್‌ನ ವಿತರಣೆಯಲ್ಲಿ ಇಸ್ಲಾಮಿನ ಕಾರ್ಯ ನೀತಿ ಇತ್ಯಾದಿ.

## ಝಕಾತ್‌ನ ಸ್ಥಾನ

ಇಸ್ಲಾಮ್, ಶತಮಾನಗಳ ಹಿಂದೆಯೇ ಬಡತನ ಸಮಸ್ಯೆಯನ್ನು ಗುರುತಿಸಿ ಬಡವರ ಸಂರಕ್ಷಣೆಗೆ ಮಾರ್ಗೋಪಾಯಗಳನ್ನು ಸೂಚಿಸಿರುವುದು, ಅದು ದೈವಿಕ ಧರ್ಮವೆಂಬುದಕ್ಕೆ ಸಾಕ್ಷಿಯಾಗಿದೆ. ಅದಕ್ಕಾಗಿ ಬಡವರ ಆಂದೋಲನ ಅಥವಾ ಹಕ್ಕು ಹೋರಾಟಗಳು ನಡೆದಿರಲಿಲ್ಲ. ಬಡವರಿಗೆ ಅದು ನೀಡಿರುವ ಭದ್ರತೆಯು ಬಾಹ್ಯ, ಆಕಸ್ಮಿಕ ಅಥವಾ ಆಂಶಿಕವಲ್ಲ. ಮೂಲಭೂತ ಮತ್ತು ಮೌಲಿಕವಾಗಿದೆ. ಝಕಾತ್; ಸಮಾಜದ ಸಂಪತ್ತಿನಲ್ಲಿ ಸೇರಿಸಿ ಸರಕಾರದ ಹೊಣೆಗೆ ಒಪ್ಪಿಸಿರುವ, ಬಡ ದುರ್ಬಲ ವರ್ಗಗಳ ಹಕ್ಕಾಗಿದೆ. ಅದು ಇಸ್ಲಾಮಿನ ಮೂರನೇ ಬುನಾದಿಯೂ, ಪ್ರಬಲ ಸ್ಥಂಭವೂ ಗೌರವಾರ್ಹ ಚಿಹ್ನೆಯೂ ನಾಲ್ಕು ಆರಾಧನೆಗಳ ಪೈಕಿ ಒಂದೂ ಆಗಿದೆ. ಇಬ್ನು ಉಮರ್ ವರದಿ ಮಾಡಿದ ಪ್ರಸಿದ್ಧ ಪ್ರವಾದಿ ವಚನದಲ್ಲಿ ಹೀಗಿದೆ:

"ಇಸ್ಲಾಮ್ ಐದು ವಿಷಯಗಳಲ್ಲಿ ಸ್ಥಾಪನೆಗೊಂಡಿದೆ. ಅಲ್ಲಾಹನ ಹೊರತು ಅನ್ಯ ಆರಾಧ್ಯರಿಲ್ಲವೆಂದು ಸಾಕ್ಷ್ಯ ವಹಿಸುವುದು. ನಮಾಝನ್ನು ಪಾಲಿಸುವುದು, ಝಕಾತ್ ಕೊಡುವುದು,

ರಮಝಾನ್ ತಿಂಗಳಲ್ಲಿ ಉಪವಾಸ ಆಚರಿಸುವುದು, ಸಾಧ್ಯವಿರುವವರು ಹಜ್ಜ್ ಕಮ
ನಿರ್ವಹಿಸುವುದು." (ಬುಖಾರಿ, ಮುಸ್ಲಿಮ

ಇಸ್ಲಾಮ್ ಸ್ವೀಕರಿಸಿ, ಇಸ್ಲಾಮೀ ಸಹೋದರತೆಯ ಅರ್ಹತೆ ಪಡೆದು, ಇಸ್ಲಾಮಿ
ಸಮಾಜದ ಸದಸ್ಯನಾಗಿರುವುದಕ್ಕೆ, ಬಹು ದೇವವಿಶ್ವಾಸವನ್ನು ತೊರೆದು ನಮಾಝ
ನಿರ್ವಹಿಸುವುದರೊಂದಿಗೆ ಝಕಾತ್ ಕೊಡುವುದನ್ನು ಬಹಿರಂಗ ಸಾಕ್ಷ್ಯವೆಂದು ಇಸ್ಲಾಮ
ಪರಿಗಣಿಸಿದೆ. ಯುದ್ಧನಿರತ ಬಹುದೇವ ವಿಶ್ವಾಸಿಗಳ ಕುರಿತು ಕುರ್‌ಆನ್ ಹೀಗೆಂದಿದೆ:

"ಅವರು ಪಶ್ಚಾತ್ತಾಪ ಪಟ್ಟು ಮರಳಿ, ನಮಾಝ್ ನೆಲೆನಿಲ್ಲಿಸಿ, ಝಕಾತ್ ನೀಡಿದ
ಅವರನ್ನು ಬಿಟ್ಟು ಬಿಡಿರಿ." (ಅತ್ತೌಬಃ : 

"ಅವರು ಪಶ್ಚಾತ್ತಾಪ ಪಟ್ಟು ಮರಳಿ, ನಮಾಝ್ ಸಂಸ್ಥಾಪಿಸಿ, ಝಕಾತ್ ಕೊಟ್ಟ
ಧರ್ಮದಲ್ಲಿ ನಿಮ್ಮ ಸಹೋದರರಾಗಿದ್ದಾರೆ. " (ಅತ್ತೌಬಃ : 1

ಬಹುದೇವತ್ವ ಮತ್ತು ಸಂಬಂಧಿತ ವಿಷಯಗಳಿಂದ ಪಶ್ಚಾತ್ತಾಪ ಪಟ್ಟು, ಮುಸ್ಲಿಮರನ
ಧಾರ್ಮಿಕವಾಗಿ ಜೋಡಿಸುವ ಕೊಂಡಿಯಾಗಿರುವ ನಮಾಝನ್ನು ಪಾಲಿಸಿ, ಸಾಮಾಜಿ
ಆರ್ಥಿಕ ಸಂಬಂಧಕ್ಕೆ ಆಧಾರವಾಗಿರುವ ಝಕಾತ್ ನೀಡದೆ ಮುಸ್ಲಿಮೇತರನಿಗೆ ಇಸ್ಲಾಮಿ
ಸಮಾಜದಲ್ಲಿ ಪ್ರವೇಶಾನುಮತಿ ಅಥವಾ ಮುಸ್ಲಿಮರು ಅನುಭವಿಸುವ ಸೌಲಭ್ಯಗಳ
ದೊರೆಯುವಷ್ಟರ ಮಟ್ಟಿಗೆ ಅವರೊಂದಿಗೆ ಇಸ್ಲಾಮೀ ಭ್ರಾತೃತ್ವವನ್ನು ಸ್ಥಾಪಿಸಲು ಸಾಧ್ಯವಿಲ್ಲ

ನಮಾಝ್‌ನೊಂದಿಗೆ ಝಕಾತನ್ನೂ ಪ್ರಸ್ತಾಪಿಸುವ ರೀತಿಯು ಕುರ್‌ಆನ್ ಮತ
ಸುನ್ನತ್‌ನ ಹೆಚ್ಚಿನೆಲ್ಲ ಕಡೆಗಳಲ್ಲಿಯೂ ಅಂಗೀಕರಿಸಲಾಗಿದೆ. ಅವೆರಡಕ್ಕೂ ಅಬೇಧ
ಸಂಬಂಧವಿದೆ ಮತ್ತು ಆ ಎರಡಿಲ್ಲದೆ ಯಾರೊಬ್ಬರ ಇಸ್ಲಾಮ್ ಪೂರ್ಣವಾಗದೆಂದು
ಇದರಿಂದ ವ್ಯಕ್ತವಾಗುತ್ತದೆ. ನಮಾಝ್ ಇಸ್ಲಾಮಿನ ಸ್ಥಂಭವಾಗಿದೆ. ಅದನ್ನು ಸಂರಕ್ಷಿಸಿದಾತನ
ಇಸ್ಲಾಮನ್ನು ಸಂರಕ್ಷಿಸಿದನು, ಅದನ್ನು ಕೆಡಹಿದಾತನು ಇಸ್ಲಾಮನ್ನು ಕೆಡಹಿದನು. ಝಕಾತ
ಇಸ್ಲಾಮಿನ ಸೇತುವೆಯಾಗಿದೆ, ತನ್ಮೂಲಕ ದಾಟಿದವನು ಪಾರಾದನು. ಅದನ್ನು ಉಲ್ಲಂಘಿಸುವವ
ಹಾಳಾಗಿ ಹೋದನು. ಅಬ್ದುಲ್ಲಾ ಬಿನ್ ಮಸ್‌ಊದ್ ಒಮ್ಮೆ ಹೀಗೆ ಹೇಳಿದ್ದರು:

"ನಮಾಝ್ ಪಾಲಿಸಲು, ಝಕಾತ್ ನೀಡಲು ನೀವು ಬಾಧ್ಯಸ್ತರಾಗಿದ್ದೀರಿ. ಝಕಾತ
ಕೊಡದಾತನಿಗೆ ನಮಾಝ್ ಕೂಡಾ ಇಲ್ಲ." (ತಫ್ಸೀರುತ್ತಬ್ರಿ, ಸಂಪುಟ: 4, ಪುಟ: 15

ಜಾಬಿರ್ ಹೇಳುತ್ತಾರೆ: "ನಮಾಝ್ ಮತ್ತು ಝಕಾತನ್ನು ಏಕಕಾಲದಲ್ಲಿ ಕಡ್ಡಾಯ
ಗೊಳಿಸಲಾಗಿತ್ತು. ಅವುಗಳ ಮಧ್ಯೆ ಭಿನ್ನತೆ ತೋರಿಸಿಲ್ಲ." "ಪಶ್ಚಾತ್ತಾಪಪಟ್ಟು ಮರಳ
ನಮಾಝನ್ನು ಪಾಲಿಸಿ, ಝಕಾತ್ ನೀಡಿದರೆ ಅವರು ಧರ್ಮದಲ್ಲಿ ನಿಮ್ಮ ಸಹೋದರರಾಗಿದ್ದಾರ
ಎಂಬ ಕುರ್‌ಆನ್ ವಾಕ್ಯವನ್ನು ಉದ್ಧರಿಸಿ ಅವರು ಮುಂದುವರಿಸುತ್ತಾ ಹೀಗೆಂದಿದ್ದಾರ
ಅಬೂಬಕರ್‌ರ(ರ) ಜ್ಞಾನ ಅಪಾರವಾಗಿದೆ. ಅಲ್ಲಾಹನು ಅವರ ಮೇಲೆ ಕರುಣೆ ಸುರಿಸಲ

ನಮಾಝ್ ಮತ್ತು ಝಕಾತ್‌ನ ಮಧ್ಯೆ ತಾರತಮ್ಯ ತೋರಿದವರೊಡನೆ ನಾನು ಯುದ್ಧಮಾಡುವುದಾಗಿ ಅಬೂಬಕರ್(ರ) ಸಾರಿರುವುದನ್ನು ಸೂಚಿಸಿ ಜಾಬಿರ್ ಹೀಗೆ ಹೇಳಿದ್ದರು.

ಝಕಾತ್ ನೀಡುವುದು; ವಿಶ್ವಾಸಿಗಳ, ದೇವಭಕ್ತರ, ಪುಣ್ಯ ಪುರುಷ ಸಜ್ಜನರ ಗುಣವಾಗಿದೆ. ಝಕಾತ್ ನೀಡದಿರುವುದು; ಬಹುದೇವಾರಾಧಕರ, ಕಪಟಿಗಳ ಲಕ್ಷಣವೆಂದು ಕುರ್‌ಆನ್ ಚಿತ್ರೀಕರಿಸಿದೆ. ಝಕಾತ್, ವಿಶ್ವಾಸದ ಒರೆಗಲ್ಲು ಮತ್ತು ಪ್ರಾಮಾಣಿಕತೆಯ ಸಾಕ್ಷ್ಯವಾಗಿದೆ. ಅಲ್ಲಾಹನು ಸ್ವರ್ಗದ ಹಕ್ಕು ಮತ್ತು ಯಶಸ್ಸಿನ ವಾಗ್ದಾನ ನೀಡಿರುವವರ ಕೂಟದಲ್ಲಿ ಝಕಾತ್ ನೀಡದ ಯಾರೂ ಸೇರುವುದಿಲ್ಲ. ಅಲ್ಲಾಹನು ಹೇಳಿರುವನು:

"ನಮಾಝ್‌ನಲ್ಲಿ ಭಯ ಭಕ್ತಿಯಿರುವ ವ್ಯರ್ಥ ಕಾರ್ಯಗಳಿಂದ ದೂರವಿರುವ ಮತ್ತು ಝಕಾತ್ ನೀಡುವ ಸತ್ಯವಿಶ್ವಾಸಿಗಳು ವಿಜಯಿಗಳಾದರು" (ಅಲ್ ಮೂಮಿನೂನ್:4)

"ನಮಾಝ್ ಸ್ಥಿರಗೊಳಿಸಿ ಝಕಾತ್ ನೀಡುವ ಸತ್ಯವಿಶ್ವಾಸಿಗಳಿಗೆ ಸುವಾರ್ತೆ ಮತ್ತು ಸನ್ಮಾರ್ಗವಿದೆ" (ಅನ್ನಮ್ಲ್: 2-3)

ಝಕಾತ್ ನೀಡದವರು ಸತ್ಯನಿಷ್ಠ ಮತ್ತು ದೇವ ಭಕ್ತರಾದ ಸಜ್ಜನರ ಸಾಲಿನಲ್ಲಿ ಸೇರುವುದಿಲ್ಲ. ಕುರ್‌ಆನ್ ಹೇಳುತ್ತದೆ :

"ನೀವು ನಿಮ್ಮ ಮುಖಗಳನ್ನು ಪೂರ್ವದಿಕ್ಕಿಗೆ ಅಥವಾ ಪಶ್ಚಿಮ ದಿಕ್ಕಿಗೆ ಮಾಡಿಕೊಳ್ಳುವುದು ಧರ್ಮ ಶೀಲತೆಯಲ್ಲ. ನಿಜವಾಗಿ ಒಬ್ಬನು ಅಲ್ಲಾಹನನ್ನೂ ನಿರ್ಣಾಯಕ ದಿನವನ್ನೂ ದೇವಚರರನ್ನೂ ಅಲ್ಲಾಹನು ಅವತೀರ್ಣಗೊಳಿಸಿದ ಗ್ರಂಥವನ್ನೂ ಅವನ ಸಂದೇಶವಾಹಕರನ್ನೂ ಹೃತ್ಪೂರ್ವಕ ಒಪ್ಪಿಕೊಳ್ಳುವುದೂ ಅಲ್ಲಾಹನ ಸಂಪ್ರೀತಿಗಾಗಿ ತನ್ನ ಮನಮೆಚ್ಚುಗೆಯ ಸಂಪತ್ತನ್ನು ಸಂಬಂಧಿಕರಿಗೂ ಅನಾಥರಿಗೂ ನಿರ್ಗತಿಕರಿಗೂ ಪ್ರಯಾಣಿಕರಿಗೂ ಸಹಾಯಾರ್ಥಿಗಳಿಗೂ ದಾಸ್ಯ ವಿಮೋಚನೆಗಾಗಿಯೂ ವ್ಯಯಿಸುವುದೂ ನಮಾಝನ್ನು ಸಂಸ್ಥಾಪಿಸುವುದೂ ಝಕಾತನ್ನು (ಕಡ್ಡಾಯ ದಾನ) ನೀಡುವುದೂ ವಾಗ್ದಾನ ಮಾಡಿದರೆ ಪೂರೈಸುವುದೂ ಕಷ್ಟ ಕಾರ್ಪಣ್ಯಗಳಲ್ಲಿಯೂ ಸತ್ಯಾಸತ್ಯಗಳ ಸಮರವಾಗುತ್ತಿರುವಾಗಲೂ ಸಹನೆಯಿಂದಿರುವುದೂ ಧರ್ಮ ಶೀಲತೆಯಾಗಿರುತ್ತದೆ. ಇವರೇ ಸತ್ಯಸಂಧರು ಮತ್ತು ಇವರೇ ಮುತ್ತಕೀಗಳು (ಧರ್ಮನಿಷ್ಠರು). (ಅಲ್ ಬಕರಃ: 177)

ಝಕಾತ್ ನೀಡದ ಸತ್ಯನಿಷೇಧಿಗಳಿಗೆ ವಿನಾಶವಿದೆ, ಅವರೇ ಪರಲೋಕವನ್ನು ನಿಷೇಧಿಸುವವರು. (ಫುಸ್ಸಿಲತ್: 67)

ಕಪಟವಿಶ್ವಾಸಿಗಳ ಬಗ್ಗೆ ಕುರ್‌ಆನ್ ಹೇಳುತ್ತದೆ:

ಅವರು ತಮ್ಮ ಕೈಗಳನ್ನು ಮಡಚಿ ಹಿಡಿದಿದ್ದಾರೆ. (ಅತೌಬಃ: 6-7) "ಅರೆಮನಸ್ಸಿನಿಂದಲೇ ಹೊರತು ಅವರು ಏನನ್ನೂ ವ್ಯಯಿಸುವುದಿಲ್ಲ". (ಅತ್ತೌಬಃ: 71)

ಕೇವಲ ಝಕಾತ್ ನೀಡುವ ಭಯಭಕ್ತರಿಗೆ ನಿರ್ಣಯಿಸಲಾದ ದೇವ ಕೃಪೆಗೆ ಪಾತ್ರರಾ ಬೇಕಿದ್ದರೆ ಝಕಾತ್ ಕೊಡಲೇ ಬೇಕು. ಕುರ್‌ಆನ್ ಹೇಳುತ್ತದೆ:

"ಆದರೆ ನನ್ನ ಕರುಣೆಯು ಸರ್ವವನ್ನೂ ವ್ಯಾಪಿಸಿಕೊಂಡಿದೆ. ನಾನು ಅದನ್ ಆಜ್ಞೋಲ್ಲಂಘನೆ ಮಾಡದ, ಝಕಾತ್ ಕೊಡುವ ಮತ್ತು ನನ್ನ ನಿದರ್ಶನಗಳ ಮೇಲೆ ವಿಶ್ವಾ ವಿರಿಸುವವರಿಗಾಗಿ ಲಿಖಿತಗೊಳಿಸುವೆನು" (ಅಲ್‌ಅರಾಫ್: 156

ಝಕಾತ್ ನೀಡದವರಿಗೆ ಅಲ್ಲಾಹ್, ಪ್ರವಾದಿ ಮತ್ತು ಸತ್ಯವಿಶ್ವಾಸಿಗಳ ಸಂರಕ್ಷ ದೊರೆಯಲಾರದೆಂದು ಅಲ್ಲಾಹನು ಸ್ಪಷ್ಟಪಡಿಸಿದ್ದಾನೆ.

"ಅಲ್ಲಾಹ್, ಅಲ್ಲಾಹನ ಸಂದೇಶವಾಹಕರು ಮತ್ತು ನಮಾಝನ್ನು ಸಂಸ್ಥಾಪಿಸುವ ಝಕಾತ್ ಕೊಡುವ ಹಾಗೂ ಅಲ್ಲಾಹನ ಮುಂದೆ ಬಾಗುವ ಸತ್ಯವಿಶ್ವಾಸಿಗಳು ಮಾತ್ರ ನಿಮ್ಮ ಆಪ್ತ ಮಿತ್ರರು" (ಅಲ್ ಮಾಯಿದಾ: 55)

"ಯಾರು ಅಲ್ಲಾಹನಿಗೆ ಸಹಾಯ ಮಾಡುವರೋ ಅವರಿಗೆ ಅವನು ಖಂಡಿತ ಸಹಾಯ ಮಾಡುವನು. ಅಲ್ಲಾಹ್ ಮಹಾ ಶಕ್ತಿವಂತನೂ ಪ್ರಬಲನೂ ಆಗಿರುತ್ತಾನೆ. ನಾವು ಇವರಿ ಭೂಮಿಯಲ್ಲಿ ಅಧಿಕಾರ ಪ್ರದಾನಮಾಡಿದರೆ ಇವರು ನಮಾಝ್ ಸಂಸ್ಥಾಪಿಸುವರು ಝಕಾತ್‌ಕೊಡುವರು, ಒಳಿತಿನ ಆಜ್ಞೆ ಕೊಡುವರು ಮತ್ತು ಕೆಡುಕಿನಿಂದ ತಡೆಯುವರು. ಸಕ ವ್ಯವಹಾರಗಳ ಅಂತಿಮ ಪರಿಣಾಮವು ಅಲ್ಲಾಹನ ಕೈಯ್ಯಲ್ಲಿದೆ" (ಅಲ್‌ಹಜ್ಜ್: 40:41

ಝಕಾತ್ ತಡೆ ಹಿಡಿಯುವವರಿಗೆ ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ಕಠಿ ಶಿಕ್ಷೆಯಿದೆಯೆಂದು ಅಲ್ಲಾಹ್ ಎಚ್ಚರಿಕೆ ನೀಡಿದ್ದಾನೆ-

"ಓ ಸತ್ಯವಿಶ್ವಾಸಿಗಳೇ, ಗ್ರಂಥದವರ ಅಧಿಕಾಂಶ ವಿದ್ವಾಂಸರೂ ಸಂತರೂ ಜನ ಸಂಪತ್ತನ್ನು ಅನುಚಿತ ವಿಧಾನಗಳಿಂದ ಕಬಳಿಸುತ್ತಾರೆ ಮತ್ತು ಅವರನ್ನು ಅಲ್ಲಾಹ ಮಾರ್ಗದಿಂದ ತಡೆಯುತ್ತಾರೆ. ಚಿನ್ನವನ್ನೂ ಬೆಳ್ಳಿಯನ್ನೂ ಸಂಗ್ರಹಿಸಿಟ್ಟು ಅವುಗಳನ್ನು ದೇ ಮಾರ್ಗದಲ್ಲಿ ಖರ್ಚುಮಾಡದವರಿಗೆ ವೇದನಾಯುಕ್ತ ಯಾತನೆಯ ಸುವಾರ್ತೆ ನೀಡಿರಿ. ಈ ಚಿನ್ನ ಬೆಳ್ಳಿಗಳ ಮೇಲೆ ನರಕಾಗ್ನಿಯನ್ನು ಉರಿಸಲಾಗುವುದು. ತರುವಾಯ ಅದರಿಂದಲೇ ಅವ ಹಣೆಗಳಿಗೂ ಪಾರ್ಶ್ವಗಳಿಗೂ ಬೆನ್ನುಗಳಿಗೂ ಬರೆ ಹಾಕಲಾಗುವುದು. "ನೀವು ನಿಮಗಾ ಸಂಗ್ರಹಿಸಿಟ್ಟಿದ್ದ ಸಂಪತ್ತು ಇದುವೇ. ನೀವು ಕೂಡಿ ಹಾಕಿದ್ದ ಸಂಪತ್ತನ್ನು ಈಗ ಸವಿಯಿ (ಎನ್ನಲಾಗುವುದು). (ಅತ್ತೌಬಃ: 34, 35

ಅಬೂ ಹುರೈರಾರಿಂದ ಬುಖಾರಿ ಉದ್ಧರಿಸಿದ ಒಂದು ಪ್ರವಾದಿ ವಚನದಲ್ಲಿ ಹೀಗಿದೆ

"ಅಲ್ಲಾಹನು ಒಬ್ಬನಿಗೆ ಸಂಪತ್ತು ಕೊಟ್ಟು, ಅವನು ಅದರ ಝಕಾತ್ ನೀಡದಿದ್ದರೆ ಅಂತ್ಯದಿನದಲ್ಲಿ ಭೀಕರ ರೂಪಿಯಾಗಿರುವ ದೃಢಕಾಯವೊಂದು ಆತನ ಬಳಿಗೆ ಬರುವುದು ಅದರ ಬಳಿ 2 ವಿಷ ಸರ್ಪಗಳಿರುವುವು. ಅದರಿಂದ ಆತನಿಗೆ ಮಾಲೆ ತೊಡಿಸಿದ ಬಳಿ

ಆತನ ತುಟಿಗಳನ್ನು ಬಿಗಿ ಹಿಡಿದು ಅದು ಹೇಳುತ್ತದೆ: "ನಾನು ನಿನ್ನ ಸಂಪತ್ತು... ನಾನು ನಿನ್ನ ಉಳಿತಾಯ" ಎಂದು ಹೇಳಿದ ಬಳಿಕ ಪ್ರವಾದಿಯವರು(ಸ) ಒಂದು ಕುರ್‌ಆನ್ ವಾಕ್ಯವನ್ನು ಹೇಳಿದರು: "ಅಲ್ಲಾಹನು ನೀಡಿರುವ ಅನುಗ್ರಹಗಳಲ್ಲಿ ಜಿಪುಣತೆ ತೋರಿಸುವವರು ಅದು ತಮಗೆ ಹಿತಕರವೆಂದು ಭಾವಿಸದಿರಲಿ. ಅದು ಅವರಿಗೆ ಹಾನಿಕರವಾಗಿದೆ. ಅವರು ಜಿಪುಣತೆ ತೋರಿಸುವ ಸಂಪತ್ತಿನಿಂದ ಪುನರುತ್ಥಾನ ದಿನ ಅವರಿಗೆ ಕಂಠಾಭರಣ ತೊಡಿಸಲಾಗುವುದು."

ಝಕಾತ್ ನಿರಾಕರಿಸುವವರಿಗೆ ಇಹಲೋಕದಲ್ಲಿ ದೊರೆಯಲಿರುವ ಶಿಕ್ಷೆಯ ಕುರಿತು ಪ್ರವಾದಿಯವರು(ಸ) ಹೇಳಿದ್ದಾರೆ-

"ಝಕಾತನ್ನು ತಡೆಯುವ ಜನ ಸಮುದಾಯವನ್ನು ಅಲ್ಲಾಹನು ವರ್ಷಾನುಗಟ್ಟಲೆ (ಹಸಿವು ಬರಗಾಲದಿಂದ) ಪರೀಕ್ಷಿಸದೆ ಬಿಡಲಾರನು." (ತಬ್ರಾನಿ)

"ಜನರು ಸಂಪತ್ತಿನ ಝಕಾತ್ ತಡೆಹಿಡಿದರೆ ಆಕಾಶದಿಂದ ಮಳೆ ಸುರಿಸುವುದನ್ನು ಅಲ್ಲಾಹನೂ ತಡೆಹಿಡಿಯುವನು. ಜಾನುವಾರುಗಳಿಲ್ಲದಿರುತ್ತಿದ್ದರೆ ಅವರಿಗೆ ಮಳೆಯೇ ದೊರೆಯುತ್ತಿರಲಿಲ್ಲ." (ಇಬ್ನು ಮಾಜಃ, ಬಸ್ಸಾರ್, ಬೈಹಕಿ)

"ಝಕಾತ್ ಮತ್ತು ಸಂಪತ್ತು ಮಿಶ್ರವಾದರೆ ಆ ಸಂಪತ್ತು ಕೆಟ್ಟಂತೆಯೇ ಸರಿ." (ಬಸ್ಸಾರ್,ಬೈಹಕಿ)

ಅರ್ಥಾತ್, ಝಕಾತಿನ ಪಾಲನ್ನು ಬೇರ್ಪಡಿಸದಿದ್ದರೆ ಸಂಪೂರ್ಣ ಸಂಪತ್ತು ಹಾಳಾಗುವುದು.

ಇವೆಲ್ಲವೂ ಅಲ್ಲಾಹನಿಂದ ಬರುವ ಲೌಕಿಕ ಮತ್ತು ಪಾರತ್ರಿಕ ಶಿಕ್ಷೆಗಳಾಗಿವೆ. ಆದರೆ, ಝಕಾತ್ ನಿಷೇಧಿಗಳ ವಿರುದ್ಧ ಸರಕಾರ ಕೈಗೊಳ್ಳುವ ಕಾನೂನು ಕ್ರಮ ಬೇರೆಯೇ ಇದೆ. ಮುಸ್ಲಿಮ್ ಸಮಾಜದ ಆಡಳಿತಗಾರರು ಆ ಕ್ರಮ ಕೈಗೊಳ್ಳಬೇಕು.

ಪ್ರವಾದಿ(ಸ) ಸಾರಿದ್ದಾರೆ:

"ಪ್ರತಿಫಲಾಪೇಕ್ಷೆಯಿಂದ ಝಕಾತ್ ಸಂದಾಯ ಮಾಡುವವರಿಗೆ ಅದರ ಪ್ರತಿಫಲ ದೊರೆಯುತ್ತದೆ. ಆದರೆ, ಅದನ್ನು ತಡೆಹಿಡಿಯುವವರ ಸಂಪತ್ತಿನ ಅರ್ಧಾಂಶಕ್ಕೆ ನಾನು ಮುಟ್ಟುಗೋಲು ಹಾಕುತ್ತೇನೆ- ಇದು ನಮ್ಮ ಪ್ರಭುವಿನ ಕಟ್ಟಾಜ್ಞೆಯಾಗಿದೆ. ಆದರೆ, ಮುಹಮ್ಮದ್‌ನ ಕುಟುಂಬಕ್ಕೆ ಅದರಲ್ಲಿ ಸ್ವಲ್ಪಂಶವೂ ಸಮ್ಮತಾರ್ಹವಲ್ಲ." (ಅಹ್ಮದ್, ಅಬೂ ದಾವೂದ್, ನಸಾಈ)

ಈ ಪ್ರವಾದಿ ವಚನವು ಝಕಾತ್ ನಿಷೇಧಿಗಳ ವಿರುದ್ಧ ಕೈಗೊಳ್ಳಬೇಕಾದ ಕಾನೂನು ಕ್ರಮದ ಸ್ವರೂಪವನ್ನು ಸೂಚಿಸುತ್ತದೆ. ಇದು ಝಕಾತ್ ನಿಷೇಧಿಯ ಸಂಪತ್ತಿನ ಅರ್ಧಾಂಶವನ್ನು ಮುಟ್ಟುಗೋಲು ಹಾಕುವ ಅನುಮತಿಯನ್ನು ಆಡಳಿತಗಾರರಿಗೆ ನೀಡುತ್ತದೆ. ಆದರೆ, ಇದು

ಝಕಾತ್ ನೀಡದವರ ವಿರುದ್ಧ ಕೈಗೊಳ್ಳಬಹುದಾದ ಕ್ರಮಗಳಲ್ಲೊಂದಾಗಿದೆ. ಎಲ್ಲ ಸಂದರ್ಭಗಳಲ್ಲಿಯೂ ಇದೇ ಕ್ರಮ ಕೈಗೊಳ್ಳಬೇಕಾಗಿಲ್ಲ. ಸಾರ್ವಜನಿಕ ಹಿತ ಮತ್ತು ಬೇಡಿಕೆಯಂತೆ ದಂಡನೆ , ಬಂಧನ ಇತ್ಯಾದಿ ಶಿಕ್ಷಾ ಕ್ರಮಗಳನ್ನು ಕೈಗೊಳ್ಳಬಹುದು.

ಎಲ್ಲಕ್ಕಿಂತ ಮಿಗಿಲಾಗಿ ಝಕಾತ್ ನಿಷೇಧಿಗಳ ವಿರುದ್ಧ ಖಡ್ಗವೆತ್ತಲು ಮತ್ತು ಅವರೊಡನೆ ಯುದ್ಧ ಸಾರಲು ಇಸ್ಲಾಮ್ ಅನುಮತಿಸಿದೆ. ಪ್ರಥಮ ಖಲೀಫ ಅಬೂಬಕರ್‌ರು ಅದಕ್ಕಾಗಿ ಯುದ್ಧವನ್ನೇ ಮಾಡಿದ್ದರು. ಆ ಕುರಿತು ಅವರು ಮಾಡಿದ ಘೋಷಣೆ ಪ್ರಸಿದ್ಧವಾಗಿದೆ-

"ಅಲ್ಲಾಹನಾಣೆ ನಮಾಝ್ ಮತ್ತು ಝಕಾತ್‌ನ ಮಧ್ಯೆ ಭಿನ್ನತೆ ಕಲ್ಪಿಸುವವರ ವಿರುದ್ಧ ನಾನು ಯುದ್ಧ ಮಾಡುವೆ. ಝಕಾತ್ ಶ್ರೀಮಂತನ ಹೊಣೆಯಾಗಿದೆ. ಪ್ರವಾದಿಯವರಿಗೆ ಝಕಾತಿನ ಬಾಬ್ತು ನೀಡುತ್ತಿದ್ದ ಒಂಟೆಯ ಹಗ್ಗವನ್ನಾದರೂ ಅವರು ನನಗೆ ನೀಡಲು ನಿರಾಕರಿಸಿದರೆ ಅದಕ್ಕಾಗಿಯೂ ಅವರೊಡನೆ ನಾನು ಯುದ್ಧ ಮಾಡುವೆ."

(ಬುಖಾರಿ, ಮುಸ್ಲಿಮ್)

ಇಬ್ನು ಅಝ್‌ಮ್ ಹೇಳಿರುತ್ತಾರೆ: "ಝಕಾತ್ ನಿಷೇಧಿಯ ವಿರುದ್ಧ ನೀಡಲಾಗಿರುವ ತೀರ್ಪು, ಆತನು ಮೆಚ್ಚಿದರೂ ಮೆಚ್ಚದಿದ್ದರೂ ಆತನಿಂದ ಅದನ್ನು ಕಿತ್ತುಕೊಳ್ಳುವುದಾಗಿದೆ. ಆ ಬಗ್ಗೆ ಸುಳ್ಳು ಹೇಳುವವನು ಇಸ್ಲಾಮಿನಿಂದ ಹೊರ ಹೋಗುತ್ತಾನೆ. ಬಚ್ಚಿಡುವುದು ಅಪರಾಧ. ಆದ್ದರಿಂದ ಅದನ್ನು ಒಪ್ಪಿಸುವ ತನಕ ಆತನಿಗೆ ಛಡಿಯೇಟಿನ ಶಿಕ್ಷೆ ಅಥವಾ ಇತರ ಶಿಕ್ಷೆ ನೀಡಬೇಕು. ನೀವು ಒಂದು ಕೆಡುಕನ್ನು ಕಂಡರೆ ಕೈಯಿಂದ ತಡೆಯಬೇಕೆಂದು ಪ್ರವಾದಿಯವರು(ಸ) ಕಲಿಸಿದ್ದಾರಲ್ಲವೇ. ಇದು ಕೂಡಾ ಕೆಡುಕು. ಸಾಮರ್ಥ್ಯವಿರುವವರಿಗೆ ಅದನ್ನು ತಡೆಯುವ ಹೊಣೆಯಿದೆ." (ಅಲ್ ಮುಹಲ್ಲ- ಇಬ್ನು ಹಝ್‌ಮ್- ಭಾಗ:11, ಪುಟ: 313)

ಈ ಎಲ್ಲ ವಿವರಣೆಗಳು ಇಸ್ಲಾಮಿನಲ್ಲಿ ಝಕಾತಿಗಿರುವ ಉನ್ನತ ಸ್ಥಾನವನ್ನು ಸ್ಪಷ್ಟಪಡಿಸುತ್ತದೆ. ಅದು ಒಂದು ಸಾಮಾನ್ಯ ಮಟ್ಟದ ಹೊಣೆಯಲ್ಲ. ಇಸ್ಲಾಮ್ ಎಂಬ ಕಟ್ಟಡವು ನಿರ್ಮಿಸಲ್ಪಟ್ಟಿರುವ 5 ಸ್ಥಂಭಗಳಲ್ಲೊಂದಾಗಿದೆ. ಅದರ ಪ್ರಾಮುಖ್ಯವನ್ನು ದೃಢೀಕರಿಸಲು ಬೇರೆ ಸಾಕ್ಷ್ಯಗಳ ಅಗತ್ಯವಿಲ್ಲ. ಕುರ್‌ಆನ್‌ನ ವಿವಿಧೆಡೆಗಳಲ್ಲಿ, ಅನೇಕ ಪ್ರವಾದಿ ವಚನಗಳಲ್ಲಿ ಮತ್ತು ಹಿಂದಿನ ಹಾಗೂ ಇಂದಿನ ವಿದ್ವಾಂಸರ ಒಮ್ಮತದ ಅಭಿಪ್ರಾಯಗಳಲ್ಲಿ ಝಕಾತ್‌ನ ಪ್ರಾಮುಖ್ಯವನ್ನು ತರ್ಕ ಬದ್ಧವಾಗಿ ಸಾಬೀತು ಪಡಿಸಲಾಗಿದೆ. ಹಾಗಿದ್ದರೂ ಝಕಾತ್‌ನ ಪ್ರಾಮುಖ್ಯದ ಕುರಿತು ವಿದ್ವಾಂಸರು ಮುಂದಿಟ್ಟ ಬೌದ್ಧಿಕ ಆಧಾರಗಳನ್ನೂ ಪರಿಶೀಲಿಸೋಣ.

1. ನಿರ್ಗತಿಕರಿಗೆ ಅಭಯ, ಬಡವರಿಗೆ ನೆರವು, ದುರ್ಬಲರಿಗೆ ಬಲ ಒದಗಿಸುವುದೇ ಝಕಾತ್‌ನ ಧ್ಯೇಯವಷ್ಟೆ. ಆ ಮೂಲಕ ಅಲ್ಲಾಹನು ಕಡ್ಡಾಯಗೊಳಿಸಿದ ಇಬಾದತ್‌ಗಳ ಪಾಲನೆಯೂ ಆತನಿಗೆ ಸಾಧ್ಯವಾಗುವಂತಾಗಬೇಕು. ಆದ್ದರಿಂದ ಕಡ್ಡಾಯ ಕರ್ಮಗಳನ್ನು

ನಿರ್ವಹಿಸುವ ಸೌಲಭ್ಯ ಒದಗಿಸುವುದೂ ಕಡ್ಡಾಯವಾಗುತ್ತದೆ.

2. ಝಕಾತ್, ಅದನ್ನು ಪಾವತಿಸುವವನನ್ನು ಪಾಪಮುಕ್ತಗೊಳಿಸುತ್ತದೆ. ಔದಾರ್ಯ ಮತ್ತು ಸಹಜೀವಿ ಪ್ರೇಮದ ಮನೋಭಾವವನ್ನು ಸೃಷ್ಟಿಸಿ ಜಿಪುಣತೆ, ಸ್ವಾರ್ಥಗಳಿಂದ ಮುಕ್ತಗೊಳಿಸಿ ಆತನನ್ನು ಶುದ್ಧೀಕರಿಸುತ್ತದೆ. "ಅವರನ್ನು ಶುದ್ಧೀಕರಿಸಿ ಅಭಿವೃದ್ಧಿ ಪಡಿಸುವ ಝಕಾತನ್ನು ನೀನು ಅವರ ಸಂಪತ್ತಿನಿಂದ ವಸೂಲು ಮಾಡು" ಎಂಬ ಕುರ್‌ಆನ್ ವಾಕ್ಯದ ತಾತ್ಪರ್ಯ ಅದೇ ಆಗಿದೆ.

3. ಶ್ರೀಮಂತ ವರ್ಗಕ್ಕೆ ಅಲ್ಲಾಹನು ಅಪಾರ ಅನುಗ್ರಹಗಳನ್ನು ನೀಡಿದ್ದಾನೆ. ಅವುಗಳನ್ನು ಬಳಸಿ ಅವರು ಜೀವನದ ಸುಖ ಅನುಭವಿಸುತ್ತಾರೆ. ಅವರು ಕೃತಜ್ಞತೆ ತೋರಬೇಕಾದುದು ಬುದ್ಧಿ ಮತ್ತು ಕಾನೂನಿನ ಕಡ್ಡಾಯ ಬೇಡಿಕೆಯಾಗಿದೆ. ಝಕಾತ್, ಆ ಕೃತಜ್ಞತಾ ಪ್ರದರ್ಶನದ ರೂಪಗಳಲ್ಲೊಂದಾಗಿದೆ.

ಝಕಾತ್‌ಗೆ ಇಸ್ಲಾಮೀ ಶರೀಅತ್‌ನಲ್ಲಿ ಇಷ್ಟೊಂದು ಮಹತ್ವವಿರುವುದರಿಂದ ಅದನ್ನು ಕಡ್ಡಾಯವೆಂದು ಪರಿಗಣಿಸದಾತನು ನಿಷೇಧಿಯಾಗುತ್ತಾನೆ. ಮಾತ್ರವಲ್ಲ, ಬಿಲ್ಲಿನಿಂದ ಬಾಣ ಚಿಮ್ಮುವಂತೆ ಆತನು ಇಸ್ಲಾಮಿನಿಂದ ಹೊರ ಹೋಗುವನೆಂದು ವಿದ್ವಾಂಸರು ಖಚಿತವಾಗಿ ಹೇಳಿದ್ದಾರೆ. ಇಬ್ನು ಖುದಾಮ ಹೇಳಿರುವುದನ್ನು ನೋಡಿರಿ:

"ಇಸ್ಲಾಮಿನಲ್ಲಿ ನವಾಗೆಂತುಕನಾಗಿರುವುದರಿಂದ ಅಥವಾ ಒಳ ಪ್ರದೇಶಗಳಲ್ಲಿ ಹುಟ್ಟಿ ಬೆಳೆದುದರಿಂದ ಝಕಾತ್ ಕಡ್ಡಾಯವೆಂದು ತಿಳಿಯದೆ, ಅದನ್ನು ನಿರಾಕರಿಸಿದಾತನು, ವಾಸ್ತವಿಕತೆಯನ್ನು ತಿಳಿದ ಬಳಿಕ ಒಪ್ಪಿದರೆ ಆತನನ್ನು ನಿಷೇಧಿಯೆಂದು ಭಾವಿಸಬೇಕಾಗಿಲ್ಲ. ಯಾಕೆಂದರೆ ಅವನಿಗೆ ಸಾಕಷ್ಟು ಸಮರ್ಥನೆಯಿದೆ. ಆದರೆ ಆತನು ಇಸ್ಲಾಮೀ ಪ್ರದೇಶದಲ್ಲಿ ತಿಳುವಳಿಕೆಯುಳ್ಳವರ ಮಧ್ಯೆ ಬೆಳೆದ ಮುಸ್ಲಿಮನಾಗಿದ್ದರೆ, ಆತ ಮುರ್ತದ್ ಆಗುತ್ತಾನೆ. ಮುರ್ತದ್‌ಗಳಿಗಿರುವ ತೀರ್ಪು ಆತನಿಗೂ ಅನ್ವಯವಾಗುತ್ತದೆ. ಪಶ್ಚಾತ್ತಾಪ ಪಡುವಂತೆ ಮೂರು ಬಾರಿ ಆತನೊಡನೆ ವಿನಂತಿಸಬೇಕು. ಪಶ್ಚಾತ್ತಾಪ ಪಟ್ಟರೆ ಸ್ವೀಕರಿಸಬೇಕು. ಇಲ್ಲದಿದ್ದರೆ ವಧಿಸಬೇಕು. ಏಕೆಂದರೆ, ಝಕಾತ್ ಕಡ್ಡಾಯವೆಂದು ಕುರ್‌ಆನ್ ಮತ್ತು ಸುನ್ನತ್‌ನಲ್ಲಿ ಸ್ಪಷ್ಟ ಆಧಾರಗಳಿವೆ. ವಿದ್ವಾಂಸರು ಅದನ್ನು ಸರ್ವಾನುಮತದಿಂದ ಅಂಗೀಕರಿಸಿದ್ದಾರೆ. ಇಂತಹ ಯಾವೊಬ್ಬ ವ್ಯಕ್ತಿಗೂ ಅದು ಅಜ್ಞಾತವಾಗಿರಲು ಸಾಧ್ಯವಿಲ್ಲ. ಆದ್ದರಿಂದ ಅಂತಹ ವ್ಯಕ್ತಿಯು ಝಕಾತ್‌ನ ಕಡ್ಡಾಯ ಸ್ವರೂಪವನ್ನು ನಿರಾಕರಿಸಿದರೆ, ಆತನು ಕುರ್‌ಆನ್ ಮತ್ತು ಸುನ್ನತ್ತನ್ನು ನಿರಾಕರಿಸುತ್ತಾನೆಂದರ್ಥ." (ಅಲ್ ಮುಗ್ನಿ, ಭಾಗ 2, ಪುಟ: 573)

## ಝಕಾತ್ - ನಿರ್ದಿಷ್ಟ ಕರ್ತವ್ಯ

ಝಕಾತ್- ಶ್ರೀಮಂತರಿಗೆ ಬಡವರು ಮತ್ತು ನಿರ್ಗತಿಕರೊಂದಿಗಿರುವ ಋಣವಾಗಿದೆ. ಅರ್ಥಾತ್, ಸಂದಾಯ ಮಾಡಬೇಕಾದ ಸಾಲವಾಗಿದೆ. ಹಾಗೆಯೇ ಒಂದು ನಿರ್ದಿಷ್ಟ

ಕರ್ತವ್ಯವೂ ಆಗಿದೆ. ಅದರ ಹಕ್ಕುದಾರರು, ಮೊತ್ತ, ಅದು ಕಡ್ಡಾಯವಾಗುವವರು - ಎಲ್ಲವೂ ನಿರ್ದಿಷ್ಟವಾಗಿದೆ. ಸತ್ಕರ್ಮಿಗಳಾದ ಭಕ್ತ ಜನರನ್ನು; ಅಪೇಕ್ಷಿತರಿಗೂ ಜೀವನ ಸಂಪನ್ಮೂಲಗಳ ಕೊರತೆಯಿರುವವರಿಗೂ ತಮ್ಮ ಸಂಪತ್ತಿನಿಂದ ನಿರ್ದಿಷ್ಟ ಹಕ್ಕನ್ನು ಮೀಸಲಿರಿಸಿದವರೆಂದು ವರ್ಣಿಸಿರುವ ಅಲ್ಲಾಹನೇ ಈ ಕರ್ತವ್ಯದ ಪ್ರಮಾಣವನ್ನೂ ನಿರ್ಣಯಿಸಿದ್ದಾನೆ. ಸ್ವರ್ಗದಲ್ಲಿ ತನ್ನ ಗೌರವಾದರಗಳಿಗೆ ಪಾತ್ರರಾಗುವ ಉತ್ತಮ ದಾಸರನ್ನು ಅಲ್ಲಾಹನು ಇನ್ನೊಂದೆಡೆಯಲ್ಲಿ ಇದೇ ರೀತಿ ಪ್ರಶಂಸಿದ್ದಾನೆ.

ಝಕಾತ್, ಸಂಪತ್ತಿನೊಂದಿಗೆ ಸ್ವಯಂ ಸಂಬಂಧ ಹೊಂದಿರುವ ಕರ್ತವ್ಯವಾಗಿದೆ. ಝಕಾತ್‌ನ ಮೊತ್ತದಲ್ಲಿ ದರಿದ್ರರಿಗೆ ಸಂಪತ್ತಿನ ಮಾಲಿಕನ ಜತೆ ಸಮಾನ ಹಕ್ಕಿರುವುದರಿಂದ ಮಾಲಿಕನು ಅದನ್ನು ಸ್ವತಂತ್ರವಾಗಿ ವ್ಯವಹರಿಸಬಾರದೆಂದು ಇಮಾಮ್ ಶಾಫಿಈ ಅಭಿಪ್ರಾಯ ಪಟ್ಟಿದ್ದಾರೆ. ಒಂದು ವರ್ಷ ಪೂರ್ಣಗೊಂಡ ಸೊತ್ತನ್ನು ಝಕಾತ್ ಬೇರ್ಪಡಿಸದೆ ಮಾರಿದರೆ ಝಕಾತ್‌ನ ಅಂಶಕ್ಕೆ ಆ ವ್ಯಾಪಾರ ಅನ್ವಯವಾಗುವುದಿಲ್ಲ. ಇನ್ನು ಝಕಾತ್ ಬೇರ್ಪಡಿಸಿದರೂ ಅದನ್ನು ಸ್ವೀಕರಿಸುವುದಕ್ಕಿಂತ ಮುಂಚೆ ಅದರ ಹಕ್ಕುದಾರನಾದ ಬಡವನು ತೀರಿ ಹೋದರೆ ಝಕಾತ್‌ನ ಪಾಲನ್ನು ಆತನ ವಾರೀಸುದಾರರಿಗೆ ನೀಡಬೇಕು.

ಇಸ್ಲಾಮಿನ ದೃಷ್ಟಿಯಲ್ಲಿ ಒಡೆತನ ಹಕ್ಕಿನ ವಾಸ್ತವಿಕತೆಯೇನೆಂದು ಗ್ರಹಿಸಿದರೆ ಸಂಪತ್ತಿನಲ್ಲಿ ಇಂತಹ ಒಂದು ಕರ್ತವ್ಯವನ್ನೂ ಅದರ ಪರಿಧಿಯನ್ನೂ ನಿರ್ಣಯಿಸಿರುವುದರಲ್ಲಿ ಯಾವುದೇ ವಿಶೇಷತೆಯಿಲ್ಲ. "ಯಾವುದರಲ್ಲಿ ನಿಮ್ಮನ್ನು ಪ್ರತಿನಿಧಿಗಳಾಗಿ ನಿರ್ಣಯಿಸಲಾಗಿದೆಯೋ ಅದರಲ್ಲಿ ನೀವು ವ್ಯಯಿಸಿರಿ" ಎಂಬ ವಾಕ್ಯವೂ ಇತರ ಕೆಲವು ವಾಕ್ಯಗಳೂ ಸ್ಪಷ್ಟಪಡಿಸುವಂತೆ, ಇಸ್ಲಾಮಿನಲ್ಲಿ ಒಡೆತನ ಹಕ್ಕಿಗೆ ಕೇವಲ ಪ್ರಾತಿನಿಧ್ಯದ ಸ್ವಭಾವವಿದೆ.

ಮಾನವನು ಸಂಪತ್ತಿನ ನೈಜ ಒಡೆಯನಲ್ಲ, ನೈಜ ಒಡಯನೇ ಅದನ್ನು ಮಾನವನಿಗೆ ಭರವಸೆಯಿಂದ ವಹಿಸಿಕೊಟ್ಟಿದ್ದಾನೆ, ಸಂಪತ್ತಿನ ಸೃಷ್ಟಿಕರ್ತ ಮತ್ತು ದಾತನಾದ ಅಲ್ಲಾಹನೇ ನೈಜ ಒಡೆಯ. ಆದ್ದರಿಂದ ಅಲ್ಲಾಹನ ಆಜ್ಞೆಯನ್ನು ಪಾಲಿಸಿ ಆತನು ನಿರ್ಣಯಿಸಿದ ಕರ್ತವ್ಯಗಳನ್ನು ನೆರವೇರಿಸುವುದು ಮಾನವನ ಹೊಣೆಯಾಗುತ್ತದೆ. ಝಕಾತ್, ಅಲ್ಲಾಹನು ಸಂಪತ್ತಿನಲ್ಲಿ ಬಡವರಿಗೂ ನಿರ್ಗತಿಕರಿಗೂ ಪಾಲು ನಿರ್ಣಯಿಸಿದ ಕರ್ತವ್ಯವೆಂಬ ನೆಲೆಯಲ್ಲಿ ಅದರಿಂದ ಯಾರೂ ಜಾರಿಕೊಳ್ಳುವಂತಿಲ್ಲ. ಒಂದು ವರ್ಷ ಅಥವಾ ಅದಕ್ಕಿಂತ ಹೆಚ್ಚು ಕಳೆದು ಬಿಡುವುದರಿಂದ ಆ ಕರ್ತವ್ಯದಿಂದ ಯಾರೂ ಮುಕ್ತರಾಗುವುದಿಲ್ಲ. ಇಬ್ನು ಹಝ್ಮ್ ಹೇಳಿರುವುದನ್ನು ಗಮನಿಸಿರಿ:

ಝಕಾತ್‌ನ ಮೊತ್ತವನ್ನು ಆಯಾ ವರ್ಷ ಲೆಕ್ಕ ಹಾಕಿ ಸಂದಾಯ ಮಾಡಬೇಕಾದ ವ್ಯಕ್ತಿಯ ವಶದಲ್ಲಿ, ಆತನು ಬದುಕಿರುವಾಗ, ಝಕಾತ್‌ನ ಅಧಿಕಾರಿ ಬರಲು ತಡವಾದ ಅಥವಾ ಆತನು ಹಣದೊಂದಿಗೆ ಪರಾರಿಯಾದ ಕಾರಣದಿಂದ ಅಥವಾ ನೆನಪಿಲ್ಲದೆ ಯಾ ಬೇರೆ ಯಾವುದೋ ಕಾರಣದಿಂದ ಎರಡು ಯಾ ಅದಕ್ಕಿಂತ ಹೆಚ್ಚು ವರ್ಷಗಳ ಝಕಾತನ್ನು ಒಟ್ಟಿಗೆ

ಶೇಖರಿಸುವುದಾದರೆ- ಅದು ಹಣ, ಬೆಳೆ ಅಥವಾ ಜಾನುವಾರುಗಳಾಗಿರಲಿ, ಎಲ್ಲ ಹಣಕ್ಕೆ ಝಕಾತ್ ಕಡ್ಡಾಯವಾಗಿರಲಿ ಯಾ ಆಗದಿರಲಿ, ಝಕಾತ್ ಕೊಟ್ಟ ಬಳಿಕ ಹಣವು ಝಕಾತ್ ಕಡ್ಡಾಯವಾಗುವಷ್ಟಿರಲಿ ಯಾ ಇಲ್ಲದಿರಲಿ- ಝಕಾತನ್ನು ತೆಗೆದು ಬೇರ್ಪಡಿಸದೆ ಸಾಲಗಾರರಾರೂ ಅದರಿಂದ ಏನನ್ನೂ ತೆಗೆದುಕೊಳ್ಳಬಾರದು.(ಅಲ್ ಮುಹಲ್ಲ, ಭಾಗ-6 ಪುಟ:87)

ವಾಯಿದೆ ಮೀರಿದರೆ ಅಥವಾ ಇನ್ನಾವುದಾದರೂ ಕಾರಣಗಳಿಂದ ಕೆಲವು ಕಾನೂನು ವ್ಯವಸ್ಥೆಗಳಲ್ಲಿ ತೆರಿಗೆ ನೀಡುವ ಹೊಣೆಯನ್ನು ತಪ್ಪಿಸಬಹುದು. ಆದರೆ ಝಕಾತ್ ಸದಾ ಹೊಣೆಯಾಗಿಯೇ ಉಳಿಯುತ್ತದೆ. ಎಷ್ಟೇ ವರ್ಷ ಕಳೆದರೂ ಝಕಾತ್ ಸಂದಾಯ ಮಾಡದೆ ಯಾರೊಬ್ಬರ ಈಮಾನ್ ಮತ್ತು ಇಸ್ಲಾಮ್ ಸ್ವೀಕೃತವಾಗುವುದಿಲ್ಲ. ಇಬ್ನು ಹಝ್ಮ್ ಮುಂತಾದವರ ಅಭಿಪ್ರಾಯದಂತೆ ಅದು ಇತರೆಲ್ಲಹೊಣೆಗಳಿಗಿಂತ ಆದ್ಯತೆ ನೀಡಬೇಕಾದ ವಿಶೇಷ ಬಾಧ್ಯತೆಯಾಗಿದೆ. ಯಾಕೆಂದರೆ ಅದು ಅಲ್ಲಾಹ್, ಬಡವರ್ಗಗಳ ಮತ್ತು ಸಮಗ್ರ ಸಮಾಜದೊಂದಿಗಿರುವ ಬಾಧ್ಯತೆಯಾಗಿದೆ. ಯಜಮಾನನು ನಿಧನನಾದರೂ ಆತನ ಝಕಾತ್‌ನ ಹೊಣೆ ತೊಲಗುವುದಿಲ್ಲ. ಆತನ ವಾರೀಸುದಾರರಿಂದ ಅದನ್ನು ವಸೂಲು ಮಾಡಬೇಕಾಗುವುದು- ಉಯಿಲಿನಲ್ಲಿ ಹೇಳಿಲ್ಲದಿದ್ದರೂ ಸರಿ. ಇದು ಅತ್ವಾಅ್, ಹಸನ್, ಝುಹ್ರಿ, ಖತಾದ, ಮಾಲಿಕ್, ಶಾಫಿಈ, ಅಹ್ಮದ್, ಇಸ್ಹಾಕ್, ಅಬೂ ಸೌರ್, ಇಬ್ನು ಮುಂದಿರ್ ಮುಂತಾದ ವಿದ್ವಾಂಸರ ಅಭಿಪ್ರಾಯವಾಗಿದೆ. ವಾರೀಸು ಸೊತ್ತಿನ ಪಾಲಿನ ಕುರಿತು ಹೇಳಿರುವೆಡೆಯಲ್ಲಿ "ಆತನು ಮಾಡಿದ ವಸಿಯ್ಯತ್ ಮತ್ತು ಸಾಲ ಕಳೆದು" ಎಂಬ ಕುರ್‌ಆನ್ ವಾಕ್ಯವು ಈ ಅಭಿಪ್ರಾಯಕ್ಕೆ ಆಧಾರವಾಗಿದೆ.

ಪ್ರಸ್ತುತ ವಾಕ್ಯದಲ್ಲಿ 'ಸಾಲ'ಎಂಬ ಪದವನ್ನು ಸಾಮಾನ್ಯವಾಗಿ ಬಳಸಲಾಗಿದೆ. ಇಬ್ನು ಹಝ್ಮ್ ಹೇಳಿರುವಂತೆ, ಝಕಾತ್; ಅಲ್ಲಾಹ್, ಬಡವರು, ನಿರ್ಗತಿಕರು ಮತ್ತು ಸಾಲಗಾರರು ಹಾಗೂ ಅಲ್ಲಾಹ್ ನಿರ್ಣಯಿಸಿದ ಇತರ ವರ್ಗಗಳಿಗೂ ಸಂದಾಯ ಮಾಡಬೇಕಾದ ಸಾಲ ಬಾಧ್ಯತೆಯಾಗಿದೆ. ಜನರ ಸಾಲಕ್ಕಿಂತ ಅಲ್ಲಾಹನ ಸಾಲಕ್ಕೆ ಆದ್ಯತೆ ನೀಡಬೇಕು. ಅದಕ್ಕೆ ಆಧಾರವಾಗಿ ಇಬ್ನು ಹಝ್ಮ್, ಇಬ್ನು ಅಬ್ಬಾಸ್ ವರದಿ ಮಾಡಿದ ಹದೀಸನ್ನು ಉದ್ಧರಿಸುತ್ತೇನೆ:

ಒಬ್ಬರು ಪ್ರವಾದಿಯವರ ಬಳಿ ಬಂದು ಹೇಳಿದರು: "ನನ್ನ ತಾಯಿಯು ನಿಧನ ಹೊಂದಿದರು. ಅವರು ಒಂದು ತಿಂಗಳ ಉಪವಾಸ ನಿರ್ವಹಿಸಲಿಕ್ಕಿತ್ತು. ನಾನು ಅವರ ಪರವಾಗಿ ಆ ಉಪವಾಸವನ್ನು ಪೂರೈಸಲೇ?" "ನಿನ್ನ ತಾಯಿಯ ಮೇಲೆ ಏನಾದರೂ ಸಾಲ ಬಾಧ್ಯತೆಯಿರುತ್ತಿದ್ದರೆ ನೀನು ಅದನ್ನು ಸಂದಾಯ ಮಾಡುತ್ತಿರಲಿಲ್ಲವೇ?" ಪ್ರವಾದಿ ಕೇಳಿದರು: 'ಹೌದು' ಆತ ಉತ್ತರಿಸಿದ. "ಹಾಗಾದರೆ ಅಲ್ಲಾಹನೊಂದಿಗಿರುವ ಸಾಲವೇ ಸಂದಾಯ ಮಾಡಲು ಹೆಚ್ಚು ಅರ್ಹವಾಗಿದೆ" ಎಂದು ಪ್ರವಾದಿ(ಸ) ಉತ್ತರಿಸಿದರು.

ಬಾಧ್ಯತೆಯಾಗಿರುವ ಝಕಾತ್, ಮರಣದಿಂದ ಅನೂರ್ಜಿತವಾಗುವುದಿಲ್ಲವೆಂದು ಇದರಿಂದ

ವ್ಯಕ್ತವಾಗುತ್ತದೆ. "ಓರ್ವ ಹುತಾತ್ಮನ ಸಾಲದ ಹೊರತು ಇತರೆಲ್ಲವೂ ಕ್ಷಮಿಸಲ್ಪಡುವುದು" ಎಂಬ ಪ್ರವಾದಿ ವಚನದ ಹಿನ್ನೆಲೆಯಲ್ಲಿ ದೇವ ಮಾರ್ಗದಲ್ಲಿ ಪ್ರಾಣಾರ್ಪಣೆ ಮಾಡಿದವರಿಗೂ ಝಕಾತ್‌ನ ಹೊಣೆಯಿಂದ ಮುಕ್ತಿಯಿಲ್ಲವೆಂದು ವ್ಯಕ್ತವಾಗುತ್ತದೆ.

ಈ ಮೇಲಿನ ವಿವರಣೆಗಳಿಂದ, ಝಕಾತ್ ಮೂಲಭೂತ ಮತ್ತು ಶಾಶ್ವತ ಬಾಧ್ಯತೆಯಾಗಿದ್ದು ಮರಣ ಅಥವಾ ಕಾಲ ವಿಳಂಬದಿಂದಲೂ ಆ ಬಾಧ್ಯತೆಯಿಂದ ವಿನಾಯಿತಿ ದೊರೆಯುವುದಿಲ್ಲ, ವಾರೀಸು ಸೊತ್ತಿನಿಂದಲೂ ಅದನ್ನು ವಸೂಲು ಮಾಡಲಾಗುವುದು ಮತ್ತು ಇತರೆಲ್ಲ ಸಾಲ ಹಾಗೂ ಬಾಧ್ಯತೆಗಳಿಗಿಂತಲೂ ಅದಕ್ಕೆ ಆದ್ಯತೆ ನೀಡಲಾಗುವುದೆಂದು ಮನವರಿಕೆಯಾಗುತ್ತದೆ. ತನ್ನಿಮಿತ್ತ, ಸಾಲಗಾರನ ಹಣದಲ್ಲಿ ಸಾಲ ನೀಡಿದವರು ಎಷ್ಟೇ ಅಧಿಕವಿದ್ದರೂ ಅವರಿಗಿಂತ ಹೆಚ್ಚಾಗಿ ರಾಷ್ಟ್ರಕ್ಕೆ ವಿಶೇಷ ಹಕ್ಕುಗಳನ್ನು ನಿರ್ಣಯಿಸಿರುವ ಆಧುನಿಕ ನೀತಿ ಸಂಹಿತೆಗಳಿಗಿಂತ ಇಸ್ಲಾಮ್ ಬಹಳಷ್ಟು ಪ್ರಗತಿಪರವಾಗಿದೆ.

ಇಸ್ಲಾಮ್ ಝಕಾತನ್ನು ಕಡ್ಡಾಯಗೊಳಿಸಿದಾಗಲೇ ಅದಕ್ಕೆ ನಿರ್ದಿಷ್ಟ ಹೊಣೆಯ ಸ್ವರೂಪವನ್ನು ನೀಡಿದೆ. ಸೃಷ್ಟಿಕರ್ತನಾದ ಅಲ್ಲಾಹನೇ ಅದನ್ನು ಬಾಧ್ಯತೆಯಾಗಿಸಿ, ಅದರ ವ್ಯಾಪ್ತಿಯನ್ನು ನಿರ್ಣಯಿಸಿದ್ದಾನೆ. ಈ ಸಮಸ್ಯೆಯನ್ನು ವ್ಯವಹರಿಸಿದ ಕಮ್ಯೂನಿಸ್ಟರು ಅದನ್ನು ವಿಕೃತಗೊಳಿಸಿ ಅದರಲ್ಲಿ ಗೊಂದಲ ಹುಟ್ಟಿಸಿದ್ದಾರೆ- "ನೀನು ವಂಚಿತನಾಗಿರುವೆ, ಮಾಲಿಕನು ನಿನ್ನನ್ನು ವಂಚಿಸಿದ್ದಾನೆ" ಎಂದು ಬಡವರೊಡನೆ ಅವರು ಹೇಳಿದರು. ಮಾಲಿಕರ ವಿರುದ್ಧ ಕೆರಳಿಸಿ ಅವರಲ್ಲಿ ದ್ವೇಷ ಹುಟ್ಟಿಸಿದರು. ನ್ಯಾಯವಿರಲಿ, ಇಲ್ಲದಿರಲಿ, ಶ್ರೀಮಂತರ ಹಣದಲ್ಲಿ ಕೈ ಹಾಕುವ ಪ್ರೇರಣೆ ನೀಡಿದರು. ವಸ್ತುತಃ ಎಲ್ಲ ಬಡವರೂ ವಂಚಿತರಲ್ಲ. ಬಡತನಕ್ಕೆ ಶ್ರೀಮಂತನೂ ಹೊಣೆಗಾರನಲ್ಲ. ಬಡವರಲ್ಲಿಯೇ ಅದರ ಹೊಣೆಗಾರರಿದ್ದಾರೆ. ಏನಿದ್ದರೂ ಕಮ್ಯೂನಿಝಮ್‌ನ ಮಿತವಾದಿಗಳು ಕೊನೆಗೆ, ಡಾ|ಇಬ್ರಾಹೀಮ್ ಸಲ್ಲಾಮ 'ಧರ್ಮ ಮತ್ತು ಶಿಷ್ಟಾಚಾರ' ಎಂಬ ಕೃತಿಯಲ್ಲಿ ಹೇಳಿರುವಂತೆ, ಇಸ್ಲಾಮೀ ಕಾನೂನುಗಳ ಸನಿಹಕ್ಕೆ ಬಂದಿದ್ದಾರೆ. ಅದರಲ್ಲಿ ಪ್ರವೇಶಿಸಿಲ್ಲ ಅಷ್ಟೆ.

"ಮಾಲಿಕ ಮತ್ತು ಕಾರ್ಮಿಕರ ನಡುವೆ ಸಹಜ ಸಂಬಂಧವಿದೆ. ಅದು ಕಾಗದದಲ್ಲಿ ನಮೂದಿಸಲಾದುದಲ್ಲ. ಆದರೆ, ವಾಸ್ತವಿಕತೆಗಳ ನಿಸರ್ಗದಲ್ಲಿ ಅದು ದಾಖಲಿಸಲ್ಪಟ್ಟಿದೆ. ಕಾರ್ಮಿಕನು ದುಡಿಯುತ್ತಾನೆ, ಮಾಲಿಕನು ಸಂಪಾದಿಸುತ್ತಾನೆ. ಮಾಲಿಕನ ಸಂಪತ್ತು, ಕಾರ್ಮಿಕನ ದುಡಿಮೆಯ ಫಲವಾಗಿದೆ. ಮಾಲಿಕ ಮತ್ತು ಕಾರ್ಮಿಕನು, ಬಂಡವಾಳ ಮತ್ತು ದುಡಿಮೆಯಿಂದ ಜೋಡಿಸಲ್ಪಟ್ಟಿದ್ದಾರೆ. ಇವರ ಈ ಪರಸ್ಪರ ಅಂತರವು ಸಾಮಾಜಿಕ ವ್ಯವಸ್ಥೆಯಲ್ಲಿ ಪ್ರಕಟಗೊಂಡು ಮಾಲಿಕನು ಕಾರ್ಮಿಕನೊಂದಿಗಿನ ಹೊಣೆಯನ್ನು ನಿರ್ವಹಿಸದಿರುವುದರಿಂದ ಕಾರ್ಮಿಕನಿಗೆ ದೊರೆಯಬೇಕಾದ ಹಕ್ಕು ವರ್ಷಾನುಗಟ್ಟಲೆ ಬಾಕಿ ಉಳಿದರೆ ಸ್ವಂತ ಬೇಡಿಕೆಗಳ ಈಡೇರಿಕೆಗಾಗಿ ತನ್ನ ಹಕ್ಕನ್ನು ಕೊಡುವ ಹೊಣೆಗಾರನ ವಿರುದ್ಧ ದಂಗೆಯೇಳುತ್ತಾನೆ." ಈ ಕಮ್ಯೂನಿಸ್ಟ್ ಸಿದ್ಧಾಂತದಲ್ಲಿ ಸ್ವಲ್ಪಂಶ ಸರಿಯಿದೆ. ಆದರೆ ಅದು

ಅಸ್ಪಷ್ಟ ಮತ್ತು ತಪ್ಪು ತಿಳುವಳಿಕೆಯಿಂದ ಕೂಡಿದೆ. ಅದು ಶ್ರೀಮಂತನ ಬಗ್ಗೆ ಬಡವನಲ್ಲಿ ದ್ವೇಷ ಹುಟ್ಟಿಸುತ್ತದೆ. ಇದು ಮಾಲಿಕ ಮತ್ತು ಕಾರ್ಮಿಕನ ಈ ಏಕೈಕ ಸಂಬಂಧದಿಂದಾಗಿ ಮಾಲಿಕನ ಹಣವನ್ನು ಬಲಾತ್ಕಾರದಿಂದ ವಸೂಲು ಮಾಡುವ ಬೆದರಿಕೆಯ ಪ್ರಭಾವವನ್ನು ಹೊಂದಿದೆ. ಈ ವಿಚಾರಧಾರೆಯನ್ನು ಇಸ್ಲಾಮೀ ದೃಷ್ಟಿಕೋನದೊಂದಿಗೆ ಹೋಲಿಸಿದಾಗ ಕೆಲವು ವಿಷಯಗಳು ಸ್ಪಷ್ಟವಾಗುತ್ತವೆ.

ಮೊದಲನೆಯದಾಗಿ, ಇಸ್ಲಾಮೀ ದೃಷ್ಟಿಕೋನದಂತೆ ಬಡವನ ಪಾಲು, 'ಹಕ್ಕು' ಎಂಬಷ್ಟರ ಮಟ್ಟಿಗೆ ಭದ್ರ ಮತ್ತು ದೃಢವಾಗಿರುತ್ತದೆ. ಅದು ಸಾಮಾನ್ಯ ಸಂಬಂಧವಲ್ಲ. ಅದು ನಿರ್ದಿಷ್ಟ ಮತ್ತು ಪರಿಚಿತವಾಗಿದೆ, ಕಾಲ್ಪನಿಕವಲ್ಲ. ಹೀಗೆ ಇಸ್ಲಾಮ್ ಝಕಾತನ್ನು, ದೇವನ ದಾಸರಿಗೆ ದೇವನೊಂದಿಗೆ ಮತ್ತು ಮಾನವ ಸಹೋದರರೊಂದಿಗಿರುವ ಬಾಧ್ಯತೆಯಾಗಿ ನಿರ್ಣಯಿಸಿತು. ಆದ್ದರಿಂದ ಅದು ಮಾನವನ ಸೃಷ್ಟಿಕರ್ತ, ಅನ್ನದಾತ, ಸಂಪತ್ತಿನ ಸೃಷ್ಟಿಕರ್ತ, ದಾತ ಮತ್ತು ಪ್ರಪಂಚದಲ್ಲಿರುವ ಎಲ್ಲವನ್ನೂ ಮಾನವನ ಸೇವೆಗಾಗಿ ಅಧೀನಗೊಳಿಸಿಕೊಟ್ಟ ಅಲ್ಲಾಹನೊಂದಿಗಿನ ಬಾಧ್ಯತೆಯಾಗಿದೆ. ಅದೇ ವೇಳೆ ಅಪೇಕ್ಷಿತ ದರಿದ್ರನಿಗೆ ತನ್ನ ಶ್ರೀಮಂತ ಸಹೋದರನ ಸಂಪತ್ತಿನಲ್ಲಿರುವ ಹಕ್ಕು ಕೂಡಾ ಆಗಿದೆ. ಇದು ಸೈದ್ಧಾಂತಿಕ, ಮಾನವೀಯ ಅಥವಾ ಇವೆರಡರ ಆಧಾರದಲ್ಲಿರುವ ಸಹೋದರ ಸಂಬಂಧದ ಅನಿವಾರ್ಯ ಬೇಡಿಕೆಯಾಗಿದೆ. ಶ್ರೀಮಂತನ ಸಂಪತ್ತಿನಲ್ಲಿ ಬಡವನೊಂದಿಗಿರುವ ಹಕ್ಕುಗಳ ಬಗ್ಗೆ ಇಮಾಮ್ ರಾಝೀ ನಡೆಸಿದ ಒಂದು ವಿಶ್ಲೇಷಣೆಯನ್ನು ಇಲ್ಲಿ ಉಲ್ಲೇಖಿಸುವುದು ಸೂಕ್ತವೆನಿಸುತ್ತದೆ-

1. ಕೇವಲ ತನ್ನ ಬೇಡಿಕೆಗಳಿಗೆ ತಕ್ಕಷ್ಟು ಹಣ ಲಭಿಸುವಾತನು ಅದನ್ನು ಕೈವಶವಿರಿಸಲು ಅತ್ಯಂತ ಅರ್ಹತೆ ಹೊಂದಿರುತ್ತಾನೆ. ಏಕೆಂದರೆ ಬೇಡಿಕೆ ಎಂಬ ಅಂಶದಲ್ಲಿ ಆತನು ಇತರ ಬಡವರಿಗೆ ಸಮಾನನಾಗಿದ್ದಾನೆ. ಆದರೆ ಬೇಡಿಕೆಗೆ ತಕ್ಕಷ್ಟು ಹಣ ಸಂಪಾದಿಸಲು ಆತನು ಪ್ರಯತ್ನಿಸಿದ್ದಾನೆಂಬುದೇ ಆತನ ವೈಶಿಷ್ಟ್ಯವಾಗಿದೆ. ಆದ್ದರಿಂದ ಆ ಹಣದಲ್ಲಿ ಆತನಿಗೆ ಇತರರಿಗಿಂತ ಹೆಚ್ಚಿನ ಹಕ್ಕಿದೆ.

ಇನ್ನು ಆತನ ಬಳಿ ಬೇಡಿಕೆ ಪೂರೈಸಿದ ಬಳಿಕ ಹಣ ಉಳಿಯಿತೆಂದು ಭಾವಿಸೋಣ, ಈಗ ಮತ್ತೊಬ್ಬ ಬಡವ ಬರುತ್ತಾನೆ. ಈಗ ಇವರಿಬ್ಬರಿಗೂ ಉಳಿದ ಹಣವನ್ನು ತಮ್ಮದಾಗಿಸಲು ಸೂಕ್ತ ಕಾರಣಗಳಿವೆ. ದುಡಿದು ಸಂಪಾದಿಸಲಾಗಿದೆ ಮತ್ತು ಮನಸ್ಸಿಗೆ ಅದರೊಂದಿಗೆ ತೀವ್ರ ಸಂಬಂಧವಿದೆಯೆಂಬುದು - ಮಾನಸಿಕ ಸಂಬಂಧವೂ ಬೇಡಿಕೆಯ ಒಂದಂಶವಾಗಿದೆಯಷ್ಟೆ - ಒಡೆಯನ ಕಾರಣಗಳಾಗಿವೆ. ಆದರೆ, ಈಗ ಅದು ಅಗತ್ಯವಾಗಿ ಬೇಕಿದೆಯೆಂಬುದು ಅದನ್ನು ತನ್ನದಾಗಿಸಲು ಬಡವನಿಗೆ ಕಾರಣಗಳಾಗಿವೆ. ಹೀಗೆ 2 ನ್ಯಾಯೋಚಿತ ಕಾರಣಗಳಿರುವಾಗ ಎರಡಕ್ಕೂ ಸೂಕ್ತ ಗಮನ ನೀಡಬೇಕೆಂಬುದು ದೇವ ನೀತಿಯಾಗಿದೆ. ದುಡಿದು ಸಂಪಾದಿಸಲಾಗಿದೆ ಮತ್ತು ಅದರೊಂದಿಗೆ ಮಾನಸಿಕ ಸಂಬಂಧವಿದೆಯೆಂಬುದು ಒಡೆಯನ ನ್ಯಾಯವಾಗಿದೆ. ಅಗತ್ಯವಿದೆಯೆಂಬುದು ಬಡವನ ನ್ಯಾಯವಾಗಿದೆ. ಈ ಹಿನ್ನೆಲೆಯಲ್ಲಿ ಉಭಯತ್ರರ ಆಧಾರಗಳನ್ನು ಆದಷ್ಟು ಸಮನ್ವಯಗೊಳಿಸಿ

ಒಡೆಯನ ಪಾಲಿಗೆ ಆದ್ಯತೆ ನೀಡಿ ಉಳಿದ ಸಂಪತ್ತಿನ ಬಹುವಂಶವನ್ನು ಆತನಿಗೇ ಬಿಟ್ಟುಕೊಟ್ಟು, ಒಂದಂಶವನ್ನು ಬಡವನಿಗೆ ನೀಡಲಾಯಿತು.

2. ಉಳಿತಾಯದ ಹಣವನ್ನು ಜನರು ಶೇಖರಿಸಿಟ್ಟರೆ ಅದು ನಿರುಪಯುಕ್ತವಾಗುತ್ತದೆ. ಅದನ್ನು ಯಾವ ಅಗತ್ಯಕ್ಕಾಗಿ ಸೃಷ್ಟಿಸಲಾಗಿದೆಯೋ ಅದು ಈಡೇರಲಾರದು. ಅದು ದೇವನ ದೃಷ್ಟಿಯಲ್ಲಿ ಸಂಪತ್ತನ್ನು ತಡೆದಿರಿಸುವ ಪ್ರಯತ್ನವಾಗಿದೆ- ಅದು ಸಲ್ಲದು. ಆದ್ದರಿಂದ ಅದರಲ್ಲೊಂದು ಅಂಶವನ್ನು ಬಡವನಿಗೆ ನೀಡಲು ಅಲ್ಲಾಹನು ಆದೇಶಿಸಿದ್ದಾನೆ. ಆ ಮೂಲಕ ಹಣವನ್ನು ಸೃಷ್ಟಿಸಿದ ಉದ್ದೇಶವು ಸಂಪೂರ್ಣ ನಿಷ್ಫಲವಾಗದಂತೆ ನೋಡಿಕೊಳ್ಳಬಹುದು.

3. ಬಡವರು ಅಲ್ಲಾಹನ ಆಶ್ರಿತರಾಗಿದ್ದಾರೆ, ಶ್ರೀಮಂತನು ಆತನ ಖಜಾನೆಯಾಗಿದ್ದಾನೆ. ಯಾಕೆಂದರೆ, ಶ್ರೀಮಂತನ ವಶವಿರುವ ಹಣವು ಅಲ್ಲಾಹನ ನ್ಯಾಸವಾಗಿದೆ. ಸಂಪತ್ತಿನ ನೈಜ ಒಡೆಯನು ಅದರ ಕೋಶಾಧಿಕಾರಿಯೊಡನೆ ಆ ಖಜಾನೆಯ ಹಣದಿಂದ ಸ್ವಲ್ಪಂಶವನ್ನು ನನ್ನ ಆಶ್ರಿತರಾದ ಬಡವರಿಗೆ ನೀಡೆಂದು ಹೇಳುವುದರಲ್ಲಿ ಯಾವುದೇ ಅಸಹಜತೆಯಿಲ್ಲ.

(ಅತ್ತಫ್ಸೀರುಲ್ ಕಬೀರ್ - ಅರ್ರಾಝಿ, ಭಾಗ - 12, ಪುಟ: 103)

ಎರಡನೆಯದಾಗಿ, ಝಕಾತ್‌ನ ಪಾಲುನಿರ್ಣಯವು ಸಂಪೂರ್ಣವಾಗಿ ನ್ಯಾಯ ನಿಷ್ಠವಾಗಿದೆ. ಶ್ರೀಮಂತನ ಪ್ರಯತ್ನ ಮತ್ತು ಬಡವನ ಹಕ್ಕನ್ನು ಅದರಲ್ಲಿ ಪರಿಗಣಿಸಲಾಗಿದೆ. ಅದು ಶ್ರೀಮಂತನನ್ನು ಪೀಡಿಸುವುದಿಲ್ಲ ಅಥವಾ ಬಡವನ ಹಕ್ಕನ್ನು ಮೊಟಕುಗೊಳಿಸುವುದಿಲ್ಲ.

ಝಕಾತ್‌ನ ಬಗ್ಗೆ ಪ್ರವಾದಿಯವರು ನೀಡಿದ ಆದೇಶಗಳನ್ನು ಇಬ್ನು ಖಯ್ಯಿಮ್ ಹೀಗೆ ವಿಶ್ಲೇಷಿಸಿದ್ದಾರೆ:

ಝಕಾತ್ ಲೆಕ್ಕ ಹಾಕುವ ಕಾಲ, ಅದರ ಪಾಲು, ಮೊತ್ತ, ಕೊಡಬೇಕಾದವರು, ಪಡೆಯಬೇಕಾದವರು ಇತ್ಯಾದಿಗಳ ನಿರ್ಣಯದಲ್ಲಿ ಪ್ರವಾದಿಯವರ ಆದೇಶಗಳು ಸಮಗ್ರವಾಗಿದೆ. ಶ್ರೀಮಂತನ ಮತ್ತು ಬಡವನ ಹಿತಾಸಕ್ತಿಗಳನ್ನು ಅದರಲ್ಲಿ ಪರಿಗಣಿಸಲಾಗಿದೆ. ಸಂಪತ್ತನ್ನು ಮತ್ತು ಶ್ರೀಮಂತನನ್ನು ಸಂಸ್ಕರಿಸಲಿಕ್ಕಾಗಿ ಅಲ್ಲಾಹನು ಝಕಾತನ್ನು ಕಡ್ಡಾಯಗೊಳಿಸಿರುತ್ತಾನೆ. ಅದು ಶ್ರೀಮಂತರಿಗೆ ಅನುಗ್ರಹ ಪ್ರಾಪ್ತಿಗೆ ಹೇತುವಾಗುತ್ತದೆ. ಹಣವನ್ನು ಕೊಡುವ ಮತ್ತು ಅದಕ್ಕಾಗಿ ಹಣವನ್ನು ಉಳಿಸಿ ಬೆಳೆಸಿ ಅದನ್ನು ನಾಶವಾಗದಂತೆ ತಡೆದು, ಝಕಾತನ್ನು ಹಣದ ಸಂರಕ್ಷಕ ಮತ್ತು ಕಾವಲುಗಾರನಾಗಿ ಮಾಡುವವರಿಗೆ ಆ ಮೂಲಕ ಅನುಗ್ರಹಗಳು ದೊರೆಯುತ್ತಲಿರುತ್ತವೆ.

ಇಸ್ಲಾಮ್ ಝಕಾತನ್ನು ವರ್ಷದಲ್ಲೊಂದಾವರ್ತಿ ಕಡ್ಡಾಯಗೊಳಿಸಿದೆ. ಕೊಯ್ಲಿನ ವೇಳೆಯಲ್ಲಿ ಕೃಷಿ ಸಂಪನ್ಮೂಲಗಳ ವರ್ಷಪೂರ್ಣಗೊಳ್ಳುತ್ತದೆ. ಇದು ಬಹಳ ನ್ಯಾಯೋಚಿತವಾದ ಕಾಲ ನಿರ್ಣಯವಾಗಿದೆ. ಪ್ರತಿ ತಿಂಗಳು ಅಥವಾ ಪ್ರತಿವಾರ ನೀಡಬೇಕೆಂದು ನಿರ್ಣಯಿಸಿದ್ದರೆ ಮಾಲಿಕನಿಗೆ ಅದರಿಂದ ತೊಂದರೆಯಾಗುತ್ತಿತ್ತು. ಜೀವನದಲ್ಲೊಮ್ಮೆ ಎಂದು ನಿರ್ಧರಿಸಿದ್ದರೆ ಬಡವರಿಗೆ ತೊಂದರೆಯಾಗುತ್ತಿತ್ತು. ಆದ್ದರಿಂದ ವರ್ಷದಲ್ಲೊಮ್ಮೆ ಎಂಬುದು ಅತ್ಯಂತ

ನ್ಯಾಯೋಚಿತವಷ್ಟೆ. ಝಕಾತ್‌ನ ಪಾಲನ್ನು ನಿರ್ಣಯಿಸುವಾಗ ಸಂಪಾದಿಸುವವನ ದುಡಿಮೆಯಲ್ಲಿರುವ ಹೆಚ್ಚು ಕಡಿಮೆಗಳನ್ನು ಪರಿಗಣಿಸಲಾಗಿದೆ. ಆಕಸ್ಮಿಕವಾಗಿ ಒಮ್ಮೆಲೆ ಸಿಗುವ ನಿಧಿಯಂತಹ ಸಂಪತ್ತಿಗೆ $^1/_5$ ಝಕಾತ್ ಇದೆ. ವರ್ಷ ಪೂರ್ತಿಯಾಗುವುದನ್ನು ಕಾಯದೆ ದೊರೆತ ಕೂಡಲೇ ಅದನ್ನು ನೀಡಬೇಕು. ಪ್ರಯತ್ನ ಪರಿಶ್ರಮಗಳಿರುವ ಸಂಪಾದನೆಗಳಿಗೆ $^1/_{10}$ ನೀಡಿದರೆ ಸಾಕು. ಇದು ಉತ್ತು-ಬಿತ್ತಿ ಬೆಳೆಸಬೇಕಾದ ಮತ್ತು ನೀರುಣಿಸುವ ಹೊಣೆಯನ್ನು ಅಲ್ಲಾಹನೇ ವಹಿಸಿಕೊಂಡಿರುವ ಬೆಳೆಗಳಾಗಿವೆ. ಅರ್ಥಾತ್ ಬಾವಿ ತೋಡಿ ನೀರು ಹಾಯಿಸುವ ಅಗತ್ಯವಿಲ್ಲ, ಕೇವಲ ಮಳೆನೀರಿನಿಂದ ಬೆಳೆಯುವ ಕೃಷಿಗಳು. ನೀರು ಹಾಯಿಸಿ ಅಥವಾ ಯಂತ್ರಗಳನ್ನು ಬಳಸಿ ನೀರಾವರಿ ಮಾಡುವ ಬೆಳೆಗಳಿಗೆ ಕೇವಲ $^1/_{20}$ ಝಕಾತ್ ಇದೆ. ಪ್ರಯಾಣ, ತಾಳ್ಮೆ, ನಿರೀಕ್ಷೆ, ನಿರಂತರ ಮತ್ತು ಸೂಕ್ಷ್ಮ ಗಮನ, ಶ್ರಮ ಅಗತ್ಯವಿರುವ ವ್ಯಾಪಾರ ಇತ್ಯಾದಿಗಳಲ್ಲಿ $^1/_{40}$ ಝಕಾತ್ ನೀಡಿದರೆ ಸಾಕು. ಯಾಕೆಂದರೆ, ಅದಕ್ಕೆ ಧಾನ್ಯ, ಬೆಳೆ ಅಥವಾ ಫಲಗಳನ್ನು ಉತ್ಪಾದಿಸುವುದಕ್ಕಿಂತ ಹೆಚ್ಚಿನ ಪ್ರಯತ್ನದ ಅಗತ್ಯವಿದೆ. ಮಾತ್ರವಲ್ಲ, ಕೃಷಿ ಸಂಪನ್ಮೂಲಗಳ ಬೆಳವಣಿಗೆಯು ವ್ಯಾಪಾರಕ್ಕಿಂತ ವ್ಯತಿರಿಕ್ತವಾಗಿರುತ್ತದೆ. ಆದ್ದರಿಂದ ಕೃಷಿಸಂಪನ್ಮೂಲಗಳ ಪಾಲನ್ನು ವ್ಯಾಪಾರಕ್ಕಿಂತ ಅಧಿಕವಾಗಿ ನಿರ್ಣಯಿಸಲಾಯಿತು. ಹಾಗೆಯೇ ಮಳೆನೀರಿನಿಂದ ಬೆಳೆಯುವ ಮತ್ತು ನೀರಾವರಿಯಿಂದಾಗುವ ಬೆಳೆಗಳ ವ್ಯತ್ಯಾಸವೂ ನಿಧಿ ಮತ್ತು ಇತರ ಸಂಪಾದನೆಗಳ ಪರಸ್ಪರ ವ್ಯತ್ಯಾಸವೂ ಬಹಳ ಸ್ಪಷ್ಟವಾಗಿದೆ.

ಝಕಾತ್‌ನ ಹಕ್ಕನ್ನು ಅಲ್ಲಾಹನೇ ನಿರ್ಣಯಿಸಿದ್ದಾನೆ. ಅವರ ಎಂಟು ವರ್ಗಗಳಿವೆ. ಅವರನ್ನು ಸಾಮಾನ್ಯವಾಗಿ ಎರಡು ವರ್ಗಗಳಾಗಿ ವಿಂಗಡಿಸಬಹುದು:

1. ಝಕಾತ್‌ನ ಅಗತ್ಯವಿರುವವರು, ಅಗತ್ಯಕ್ಕೆ ತಕ್ಕಂತೆ ಅವರಿಗೆ ಝಕಾತ್ ನೀಡಲಾಗುತ್ತದೆ. ಬಡವರು, ನಿರ್ಗತಿಕರು, ಗುಲಾಮರು, ಯಾತ್ರಿಕರು ಈ ವರ್ಗಕ್ಕೆ ಸೇರಿದ್ದಾರೆ.

2. ಸಮಾಜ ಸೇವೆ ಮಾಡುವವರು, ಝಕಾತ್ ನಿರ್ವಾಹಕ, ಮನವೊಲಿಸಿದ ಮುಸ್ಲಿಮೇತರರು, ಮಾನವೀಯ ಸಂಬಂಧಗಳನ್ನು ಉತ್ತಮ ಪಡಿಸಲಿಕ್ಕಾಗಿ ಪ್ರಯತ್ನಿಸುವ ಮೂಲಕ ಸಾಲಗಾರರಾದವರು, ದೇವ ಮಾರ್ಗದಲ್ಲಿ ಹೋರಾಡುವವರು ಇವರು ಎರಡನೇ ವರ್ಗಕ್ಕೆ ಸೇರಿದ್ದಾರೆ. ಝಕಾತ್ ಲಭಿಸಬೇಕಾದ ಅಗತ್ಯವಿಲ್ಲದವರಿಗೆ ಮತ್ತು ಸಮಾಜಕ್ಕೆ ಯಾವುದೇ ಪ್ರಯೋಜನ ದೊರೆಯದವರಿಗೆ ಝಕಾತ್‌ನಲ್ಲಿ ಪಾಲಿಲ್ಲ.

(ಝಾದುಲ್ ಮಆದ್: (ಭಾಗ-1, ಪುಟ: 306-307))

## ರಾಷ್ಟ್ರದ ಹೊಣೆ

ಝಕಾತ್, ಶಾಶ್ವತ ಮತ್ತು ನಿರ್ದಿಷ್ಟವಾದ ಕರ್ತವ್ಯವೆಂದು ನಾವು ತಿಳಿದೆವು. ಅದು ಅಲ್ಲಾಹನ ಕಡ್ಡಾಯ ಆಜ್ಞೆಯಾಗಿದೆ. ಆದರೆ ಅದನ್ನು ಕೇವಲ ವ್ಯಕ್ತಿಗಳ ದೇವಭಯ ಮತ್ತು ಪರಲೋಕ ವಿಶ್ವಾಸವನ್ನು ಮಾತ್ರ ಅವಲಂಬಿಸುವ, ಅವುಗಳ ಏರಿಳಿತಗಳ ಮೇಲೆ ಪ್ರಭಾವ

ಬೀರುವ ರೀತಿಯಲ್ಲಿ ವ್ಯಕ್ತಿಗಳ ಇಚ್ಛೆಗೆ ಬಿಟ್ಟುಕೊಡಲಾಗಿಲ್ಲ. ಅದು ರಾಷ್ಟ್ರವು ಮೇಲ್ನೋ ವಹಿಸುವ ಒಂದು ಸಾಮಾಜಿಕ ಪದ್ಧತಿಯಾಗಿದೆ. ಹಕ್ಕುದಾರರಿಂದ ಝಕಾತನ್ನು ವಸೂ ಮಾಡಿ ಅರ್ಹರಾದವರಿಗೆ ವಿತರಣೆ ಮಾಡುವುದಕ್ಕಾಗಿ ಸುವ್ಯವಸ್ಥಿತ ಏರ್ಪಾಡು ಮಾಡಬೇಕಾದುದ ರಾಷ್ಟ್ರದ ಕರ್ತವ್ಯವಾಗಿದೆ. ಅದಕ್ಕೆ ಕುರ್‌ಆನ್‌ನಲ್ಲಿ ಆಧಾರಗಳಿವೆ. ಝಕಾತ್‌ನ ಸಂಗ್ರಹ ವಿತರಣೆಯ ಕೆಲಸವನ್ನು ನಿರ್ವಹಿಸುವವರನ್ನು ಕುರ್‌ಆನ್ ಒತ್ತಿ ಹೇಳಿದ್ದು ಅವರನ 'ನೌಕರ'ರೆಂದು ಕರೆದು, ಅವರು ಕೆಲಸದ ಸುಸೂತ್ರ ನಿರ್ವಹಣೆಗಾಗಿ ಮತ್ತು ಅವರನ ಜೀವನದ ಸಮಸ್ಯೆಗಳು ಕಾಡದಿರಲಿಕ್ಕಾಗಿ ಝಕಾತ್‌ನಲ್ಲಿ ಅವರಿಗೆ ಪಾಲು ನಿರ್ಣಯಿಸಿರುವುದ ಝಕಾತ್‌ನ ಸಾಮಾಜಿಕ ಸ್ವಭಾವಕ್ಕೆ ಸ್ಪಷ್ಟ ಆಧಾರವಾಗಿದೆ.

ಅಲ್ಲಾಹನು ಹೇಳಿರುವನು:

"ವಾಸ್ತವದಲ್ಲಿ ಈ ಕಡ್ಡಾಯ ದಾನವು(ಸದಕಃ) ಬಡವರು, ದರಿದ್ರರು, ಝಕಾ ಸಂಗ್ರಹ ಮತ್ತು ವಿತರಣೆ ಕಾರ್ಯಗಳ ನಿರ್ವಾಹಕರಿಗೆ, ಮನವೊಲಿದು ಬಂದವರಿ ಗುಲಾಮ ವಿಮೋಚನೆಗೆ, ಸಾಲಗಾರರಿಗೆ, ಅಲ್ಲಾಹನ ಮಾರ್ಗದಲ್ಲಿ ಮತ್ತು ಯಾತ್ರಿಕ ನೆರವಿಗಾಗಿ ವ್ಯಯಿಸಲಿಕ್ಕಾಗಿರುತ್ತದೆ. ಇದು ಅಲ್ಲಾಹನ ನಿರ್ಣಿತ ವ್ಯವಸ್ಥೆಯಾಗಿದೆ. ಅಲ್ಲಾಹ ಸರ್ವಜ್ಞನೂ ಮಹಾಧೀಮಂತನೂ ಆಗಿದ್ದಾನೆ." (ತೌಬಾ:6

ಕುರ್‌ಆನ್, ಝಕಾತ್‌ನ ಹಕ್ಕುದಾರರನ್ನು ಈ ರೀತಿ ಸ್ಪಷ್ಟವಾಗಿ ನಿರ್ಣಯಿಸಿರುವುದರಿಂ ಅದರಲ್ಲಿ ವ್ಯಾಖ್ಯಾನ, ಸೇರ್ಪಡೆ ಅಥವಾ ತಿದ್ದುಪಡಿಗಳಿಗೆ ಅವಕಾಶವಿಲ್ಲ. ಅದೇ ಅಧ್ಯಾಯದ ಅಲ್ಲಾಹನು ಹೀಗೆ ಹೇಳಿದ್ದಾನೆ:

"ನೀವು ಅವರ ಹಣದಿಂದ ಅವರನ್ನು ಸಂಸ್ಕರಿಸಿ, ಬೆಳೆಸುವ 'ಸದಕಃ'ವನ್ನು ಪಡೆಯಿ ಮತ್ತು ಅವರಿಗಾಗಿ ಪ್ರಾರ್ಥಿಸಿರಿ. ನಿಮ್ಮ ಪ್ರಾರ್ಥನೆಯಿಂದ ಅವರಿಗೆ ಶಾಂತಿ ದೊರೆಯುವುದು (ಅತ್ತಾಬಃ:10

ಈ ವಾಕ್ಯದಲ್ಲಿರುವ 'ಸದಕಃ' ಎಂಬ ಪದದ ತಾತ್ಪರ್ಯವು ಝಕಾತ್ ಆಗಿದೆಯೆಂ ಹೆಚ್ಚಿನ ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಪ್ರವಾದಿ(ಸ) ಮತ್ತು ಅವರ ಬ ಮುಸ್ಲಿಮರ ಆಡಳಿತಗಾರರು ಈ ವಾಕ್ಯದ ಅಭಿಸಂಬೋಧಿತರಾಗಿದ್ದಾರೆ.

## ಪ್ರವಾದಿ ಚರ್ಯೆ

ಇಬ್ನು ಅಬ್ಬಾಸ್ ವರದಿ ಮಾಡಿದ್ದಾರೆ: ಪ್ರವಾದಿಯವರು ಮುಆದ್‌ರನ್ನು ಯಮನ ಕಳುಹಿಸಿದರು- ಅವರೊಡನೆ ಹೇಳಿದರು: "ಶ್ರೀಮಂತರಿಂದ ಪಡೆದು ಬಡವರಿಗೆ ಹಂಚಬೇಕಾ ಸದಕಃವನ್ನು ಅಲ್ಲಾಹನು ಕಡ್ಡಾಯಗೊಳಿಸುತ್ತಾನೆಂದು ನೀವು ಅವರಿಗೆ ತಿಳಿಸಿರಿ. ಆದೇಶವನ್ನು ಅವರು ಪಾಲಿಸಿದರೆ ಅವರ ಮಿಗತೆ ಹಣವನ್ನು ಮುಟ್ಟಬಾರದು. ಆದ ಮರ್ದಿತನ ಪ್ರಾರ್ಥನೆಯ ಬಗ್ಗೆ ಎಚ್ಚರ ವಹಿಸಿರಿ. ಆತನ ಮತ್ತು ಅಲ್ಲಾಹನ ಮ

ಾವುದೇ ಪರದೆಯಿಲ್ಲ."

ಈ ಪ್ರವಾದಿವಚನವು ಕಡ್ಡಾಯ ಸದಕಃವು ಶ್ರೀಮಂತರಿಂದ ಪಡೆದು ಬಡವರಿಗೆ ಡಬೇಕಾದ ಕಾರ್ಯವೆಂದು ಸ್ಪಷ್ಟಪಡಿಸುತ್ತದೆ. ಆದ್ದರಿಂದ ಅದನ್ನು ವಸೂಲು ಮಾಡಿ ರಣೆ ಮಾಡುವವರು ಯಾರಾದರೂ ಬೇಕು. ಹೊಣೆಗಾರರ ಸ್ವಾತಂತ್ರ್ಯಕ್ಕೆ ಅದನ್ನು ಬಿಟ್ಟು ಡಬಾರದೆಂದರ್ಥ. ಈ ಪ್ರವಾದಿ ವಚನದ ಆಧಾರದಲ್ಲಿ ಶೈಕುಲ್ ಇಸ್ಲಾಮ್ ಇಬ್ನು ಂರ್ ಹೀಗೆ ಹೇಳಿದ್ದಾರೆ:

"ಆಡಳಿತಾಧಿಕಾರಿಯು ಝಕಾತನ್ನು ಶೇಖರಿಸಿ ವಿತರಣೆ ಮಾಡಬೇಕು. ಸ್ವತಃ ಅಥವಾ ತಿನಿಧಿಯಿಂದ ಆ ಕೆಲಸ ಮಾಡಿಸಬೇಕು. ಕೊಡಲು ನಿರಾಕರಿಸಿದರೆ ಬಲಪ್ರಯೋಗಿಸಿ ಅದನ್ನು ೂಲು ಮಾಡಬೇಕು." 'ನೈಲುಲ್ ಔತಾರ್' ಎಂಬ ಕೃತಿಯಲ್ಲಿ ಶೌಕಾನೀಯವರು ಈ ಳಿಕೆಯ ಪೂರ್ಣಪಾಠವನ್ನು ಉದ್ಧರಿಸಿದ್ದಾರೆ.

ಪ್ರವಾದಿ ವಚನಗಳು, ಪ್ರವಾದಿಚರ್ಯೆ, ಪ್ರವಾದಿಯವರ ಮತ್ತು ಖಿಲಫಾವುರ್‍ರಾಶಿದೀನ್‌ರ ಂದಲ್ಲಿಯೂ ಆ ಬಳಿಕವೂ ಕಂಡು ಬಂದ ಚಾರಿತ್ರಿಕ ಸ್ಥಿತಿಗಳು ಈ ವಾಸ್ತವಿಕತೆಯನ್ನು ಿ ಪಡಿಸುತ್ತದೆ. ಆದ್ದರಿಂದಲೇ ಝಕಾತ್ ಶೇಖರಣೆಗಾಗಿ ಅಧಿಕಾರಿಗಳನ್ನು ಕಳುಹಿಸಬೇಕಾದುದು ಳಿತಗಾರರ ಕರ್ತವ್ಯವೆಂದು ವಿದ್ವಾಂಸರು ಹೇಳಿರುವುದು. ಪ್ರವಾದಿ(ಸ) ಮತ್ತು ಲಫಾವುರ್‍ರಾಶಿದರು ಝಕಾತ್ ಸಂಗ್ರಹಕ್ಕಾಗಿ ಅಧಿಕಾರಿಗಳನ್ನು ನೇಮಿಸಿದ್ದರು. ಏಕೆಂದರೆ, ಮಂತರಲ್ಲಿ ಝಕಾತಿನ ಪಾಲು ಎಷ್ಟೆಂದು ಸರಿಯಾಗಿ ತಿಳಿಯದವರಿದ್ದರು. ಅವರಲ್ಲಿ ಣರೂ ಇದ್ದರು. ಆದ್ದರಿಂದ ಝಕಾತ್ ಸಂಗ್ರಹಕ್ಕಾಗಿ ಅಧಿಕಾರಿಗಳನ್ನು ಕಳುಹಿಸುವುದೂ ತ್ಯವಾಗಿತ್ತು.

ಝಕಾತ್ ಸಂಗ್ರಹಕ್ಕಾಗಿ ಬರುವವರೊಡನೆ ಸಹಕರಿಸಬೇಕಾದುದು ಶ್ರೀಮಂತರ ್ವ್ಯವಾಗಿದೆ. ಝಕಾತ್‌ನ ಮೊತ್ತದಲ್ಲಿ ಏನನ್ನೂ ಕಡಿತಗೊಳಿಸದೆ ನೀಡಬೇಕೆಂದು ಪ್ರವಾದಿ ಮತ್ತು ಸಹಾಬಿಗಳು ಆಜ್ಞಾಪಿಸಿದ್ದಾರೆ.ಜಾಬಿರ್ ಬಿನ್ ಅತೀಕ್ ವರದಿ ಮಾಡಿದ ಪ್ರವಾದಿ ನದಲ್ಲಿ ಹೀಗಿದೆ:

ಪ್ರವಾದಿ(ಸ) ಹೇಳಿದರು:ನಿಮ್ಮನ್ನು ಕುಪಿತಗೊಳಿಸುವ ಒಂದು ತಂಡವು ನಿಮ್ಮನ್ನು ತಿಯಾಗುವುದು. ಆಗ ನೀವು ಅವರನ್ನು ಸ್ವಾಗತಿಸಬೇಕು. ಅವರು ಅಪೇಕ್ಷಿಸುವ ಭ್ಯಗಳನ್ನು ಒದಗಿಸಬೇಕು. ಅವರು ನ್ಯಾಯ ಪಾಲಿಸಿದರೆ ಅವರಿಗೇ ಹಿತ. ಅನ್ಯಾಯ ಡಿದರೆ ಅವರಿಗೇ ಅದರ ದೋಷ ತಟ್ಟುವುದು. ನೀವು ಝಕಾತನ್ನು ಸಂಪೂರ್ಣವಾಗಿ ದರೆ ಅವರು ತೃಪ್ತರಾಗುತ್ತಾರೆ. ನಿಮಗಾಗಿ ಅವರು ಪ್ರಾರ್ಥಿಸುತ್ತಾರೆ. (ಅಬೂ ದಾವೂದ್)

ಝಕಾತ್ ಸಂಗ್ರಾಹಕರು ಹಣವನ್ನು ಅಪೇಕ್ಷಿಸುತ್ತಾರೆ. ಮಾನವನಿಗೆ ಅದರೊಂದಿಗೆ ದ್ಯ ಮಾನಸಿಕ ಸಂಬಂಧವಿದೆ. ಆದ್ದರಿಂದಲೇ ಜಿಪುಣನಾಗಿರುತ್ತಾನೆ. 'ಮಾನವನು ಮಹಾ ಣ'ನೆಂದು ಕುರ್‌ಆನ್ ಹೇಳಿದೆ. ಆದ್ದರಿಂದಲೇ ಝಕಾತ್ ವಸೂಲು ಮಾಡುವವರನ್ನು

ಪ್ರವಾದಿಯವರು, ನಿಮ್ಮನ್ನು ಕುಪಿತಗೊಳಿಸುವ ತಂಡವೆಂದು ವರ್ಣಿಸಿದ್ದಾರೆ. ಅನಸ್(ರ
ವರದಿ ಮಾಡಿದ ಘಟನೆ ಹೀಗಿದೆ:

ಓರ್ವರು ಪ್ರವಾದಿಯವರೊಡನೆ ಕೇಳಿದರು: ನೀವು ನೇಮಿಸಿದ ವ್ಯಕ್ತಿಗೆ ಝಕಾತ
ಒಪ್ಪಿಸಿದರೆ ಅಲ್ಲಾಹ್ ಮತ್ತು ಪ್ರವಾದಿಯವರೊಂದಿಗಿನ ಕರ್ತವ್ಯದಿಂದ ನಾನ
ಮುಕ್ತನಾಗುತ್ತೇನೆಯೇ? ಪ್ರವಾದಿ ಹೇಳಿದರು: ಹೌದು, ನನ್ನ ದೂತನಿಗೆ ಅದನ್ನು ಒಪ್ಪಿಸಿದ
ಅಲ್ಲಾಹ್ ಮತ್ತು ಪ್ರವಾದಿಯೊಂದಿಗಿನ ಕರ್ತವ್ಯವನ್ನು ನೀವು ಪೂರೈಸಿದಂತಾಗುವುದು. ಅದ
ಪ್ರತಿಫಲ ನಿಮಗೆ ದೊರೆಯುವುದು. ಆದರೆ, ಅದರಲ್ಲಿ ಯಾರಾದರೂ ಭ್ರಷ್ಟಾಚಾರ ನಡೆಸಿದ
ಅವರೇ ಅಪರಾಧಿಗಳಾಗುತ್ತಾರೆ.

**ಸಹಾಬಿಗಳ ತೀರ್ಪು**

ಸಹ್ಲ್ ಬಿನ್ ಅಬೀ ಸಾಲಿಹ್‌ರು ಅವರ ತಂದೆಯಿಂದ ಉಲ್ಲೇಖಿಸಿದ್ದಾರೆ: ಅವ
ಹೇಳಿದರು- ನನ್ನ ಬಳಿ ಝಕಾತ್ ಕಡ್ಡಾಯವಾಗುವಷ್ಟು ಹಣವಿದ್ದರೆ ಅದನ್ನು ನಾನೇ ವಿತರ
ಮಾಡಬೇಕೇ ಅಥವಾ ಆಡಳಿತಗಾರರಿಗೆ ಒಪ್ಪಿಸಬೇಕೇ ಎಂದು ಸಅದ್ ಬಿನ್ ಅಬೀ ವಕ್ಕಾಸ
ಇಬ್ನು ಉಮರ್, ಅಬೂ ಹುರೈರಾ ಮತ್ತು ಅಬೂ ಸಈದ್ ಕುದ್ರಿಯವರೊಡನೆ ಹೇಳಿದರ
ಎಲ್ಲರೂ ಆಡಳಿತಗಾರನಿಗೆ ಒಪ್ಪಿಸಬೇಕೆಂದು ಉತ್ತರಿಸಿದರು. ಇದೇ ವಿಷಯವು ಇನ್ನೊಂ
ವರದಿಯಲ್ಲಿ ಸ್ವಲ್ಪ ವ್ಯತ್ಯಾಸದೊಂದಿಗೆ ಹೀಗಿದೆ: ಈ ಆಡಳಿತಗಾರರ ಕೆಲಸವನ್ನು ನೀ
ನೋಡುತ್ತಿಲ್ಲವೇ? ಹೀಗಿರುತ್ತಾ ನನ್ನ ಝಕಾತನ್ನು ಅವರಿಗೆ ಒಪ್ಪಿಸಬೇಕೆಂದು ನೀ
ಹೇಳುತ್ತಿರುವಿರಾ? ಎಂದು ಕೇಳಿದರು "ಹೌದು, ನೀವು ಅವರಿಗೆ ಒಪ್ಪಿಸಲೇ ಬೇಕೆಂದ
ಉತ್ತರಿಸಿದರು.

ಇಬ್ನು ಉಮರ್ ಹೇಳುತ್ತಾರೆ- "ನಿಮ್ಮ ಆಡಳಿತವನ್ನು ಅಲ್ಲಾಹನು ಯಾರ ಕೈ
ಒಪ್ಪಿಸಿರುವನೋ ಅವರಿಗೆ ನಿಮ್ಮ ಝಕಾತನ್ನು ಒಪ್ಪಿಸಬೇಕು. ಯಾರಾದರೂ ಒಳಿ
ಮಾಡಿದರೆ ಅವರಿಗೇ ಹಿತ. ಕೆಡುಕು ಮಾಡಿದರೆ ದೋಷವೂ ಅವರಿಗೇ."

ಮುಗೀರ ಬಿನ್ ಶುಅ್‌ಬ ತಾಯಿಫ್‌ನಲ್ಲಿರುವ ತನ್ನ ಸೊತ್ತಿನ ಮೇಲ್ನೋಟವ
ಓರ್ವ ನಿರ್ವಾಹಕನಿಗೆ ವಹಿಸಿ ಕೊಟ್ಟರು. ಅದರ ಝಕಾತನ್ನು ಏನು ಮಾಡುತ್ತಿರುವಿರೆಂ
ಮುಗೀರ ಕೇಳಿದರು, "ನಾನೇ ಸ್ವತಃ ವಿತರಣೆ ಮಾಡುವುದೂ ಇದೆ. ಆಡಳಿತಗಾರ
ಒಪ್ಪಿಸುವುದೂ ಇದೆ."- ನಿರ್ವಾಹಕ ಹೇಳಿದ.' ಝಕಾತ್‌ನ ಆ ರೀತಿಯ ವಿತರಣೆ ಸರಿಗಾಣ
ಮುಗೀರ ಕೇಳಿದರು: "ಹಾಗೆ ಮಾಡುವುದೇಕೆ?" "ಅವರು ಅದರಿಂದ ಜಮೀನು ಖರೀದಿಸುತ್ತಾ
ವಿವಾಹವಾಗುತ್ತಾರೆ" ಎಂದು ಉತ್ತರಿಸಿದರು. ಆಗ ಮುಗೀರ ಹೇಳಿದರು: "ಅದು ಅವರಿ
(ವಸೂಲು ಮಾಡಲು ಬರುವವರಿಗೆ) ನೀಡಬೇಕು. ಅವರಿಗೆ ಒಪ್ಪಿಸಬೇಕೆಂದು ಪ್ರವಾದಿಯವ
ಆಜ್ಞಾಪಿಸಿದ್ದಾರೆ."

ಸರಕಾರವೇ ಝಕಾತ್‌ನ ವ್ಯವಹಾರ ನಡೆಸಬೇಕೆಂಬುದು ಇಸ್ಲಾಮೀ ಕಾನೂನು ಸಂಹಿತೆಯ ಮೂಲ ನೀತಿಯಾಗಿದೆ. ಮೇಲಿನ ಪ್ರವಾದಿ ವಚನಗಳು ಮತ್ತು ಸಹಾಬಿಗಳ ತೀರ್ಪುಗಳು ಇದನ್ನು ಸ್ಪಷ್ಟವಾಗಿ ಸಾರಿವೆ. ಸರಕಾರವು ಝಕಾತನ್ನು ಸಂಗ್ರಹಿಸಿ ಹಕ್ಕುದಾರರಿಗೆ ವಿತರಣೆ ಮಾಡುವುದು. ಇಸ್ಲಾಮೀ ವ್ಯವಸ್ಥೆಯ ಸುಭದ್ರತೆ ಮತ್ತು ಮುಸ್ಲಿಮರ ಸಾರ್ವಜನಿಕ ಬೊಕ್ಕಸದ ಪೋಷಣೆಗಾಗಿ ಈ ಬಗ್ಗೆ ಆಡಳಿತಗಾರರೊಡನೆ ಸಹಕರಿಸಬೇಕಾದುದು ಸಮುದಾಯದ ಕರ್ತವ್ಯವಾಗಿದೆ.

**ಇಸ್ಲಾಮಿನ ಪರಿಪೂರ್ಣತೆ**

ಹೃದಯಗಳನ್ನು ಎಚ್ಚರಿಸಿ ಅವುಗಳಿಗೆ ಸ್ಫೂರ್ತಿ ನೀಡಿ, ಜನರಿಗೆ ಉನ್ನತ ಮಾದರಿಯನ್ನು ತೋರಿಸಿಕೊಟ್ಟು, ಪಾರತ್ರಿಕ ರಕ್ಷಾ ಶಿಕ್ಷೆಗಳ ಬಗೆಗಿನ ಪ್ರಜ್ಞೆಯ ಆಧಾರದಲ್ಲಿ ಅವರನ್ನು ನಿಯಂತ್ರಿಸುವುದು ಧರ್ಮಗಳ ಕೆಲಸ, ಲೌಕಿಕ ಜೀವನವನ್ನು ಸುವ್ಯವಸ್ಥಿತಗೊಳಿಸಿ ಜನರ ಹಕ್ಕುಗಳನ್ನು ಒದಗಿಸಿ, ಅವರ ವಿರುದ್ಧ ಶಿಕ್ಷಾ ಕ್ರಮ ಕೈಗೊಳ್ಳುವ ಅಧಿಕಾರವನ್ನು ರಾಜಕೀಯ ಆಂದೋಲನ ಮತ್ತು ಸರಕಾರಗಳಿಗೆ ಬಿಟ್ಟು ಕೊಡಬೇಕು; ಈ ರೀತಿಯ ಒಂದು ವಿಚಾರ ಧಾರೆಯಿದೆ. ಇಸ್ಲಾಮೇತರ ಧರ್ಮಗಳ ಮಟ್ಟಿಗೆ ಇದು ಸರಿಯಾಗಿರಬಹುದು. ಆದರೆ ಇಸ್ಲಾಮಿಗೆ ಇದು ಅಂಗೀಕಾರಾರ್ಹವಲ್ಲ. ಇಸ್ಲಾಮ್, ಒಂದು ವಿಶ್ವಾಸ ಸಿದ್ಧಾಂತ, ಜೀವನ ವ್ಯವಸ್ಥೆ, ನೀತಿ ಸಂಹಿತೆ, ಕಾನೂನು ವ್ಯವಸ್ಥೆ ಮತ್ತು ರಾಜಕೀಯ ಆಂದೋಲನವೂ ಆಗಿದೆ. ಧಾರ್ಮಿಕ ಮತ್ತು ಐಹಿಕವೆಂದು ಮಾನವನನ್ನು ವಿಭಜಿಸಲು ಅದರಿಂದ ಸಾಧ್ಯವಿಲ್ಲ. ಜೀವನವೂ ಮಾನವನೂ ಪ್ರಪಂಚವೂ ಸಂಪೂರ್ಣವಾಗಿ ಅಲ್ಲಾಹನದ್ದಾಗಿವೆ. ಇಸ್ಲಾಮ್, ಸಮಗ್ರ ಮಾರ್ಗದರ್ಶನವಾಗಿದೆ. ವ್ಯಕ್ತಿಯನ್ನು ವಿಮೋಚನೆಗೊಳಿಸಿ ಆತನನ್ನು ಗೌರವಿಸಬೇಕಾದುದು ಅದರ ಹೊಣೆಯಾಗಿದೆ. ಸಮಾಜದಲ್ಲಿ ಸುಭಿಕ್ಷೆ ಸಾಧಿಸಿ ಜನತೆಯನ್ನೂ ಆಡಳಿತಗಾರರನ್ನೂ ಒಳಿತು ಮತ್ತು ಸತ್ಯದೆಡೆಗೆ ಸಾಗಿಸಬೇಕಾದುದು ಅದರ ಕರ್ತವ್ಯವಾಗಿದೆ. ಏಕನಾದ ಅಲ್ಲಾಹನನ್ನು ಮಾತ್ರ ಆರಾಧ್ಯರಾಗಿ ಅಂಗೀಕರಿಸಬೇಕು ಮತ್ತು ಮಾನವನು ಮಾನವನನ್ನೇ ದೇವನಾಗಿಸಬಾರದೆಂಬ ಕರೆ ನೀಡುವುದೂ ಅದರ ಕರ್ತವ್ಯವಾಗಿದೆ.

ಈ ಚೌಕಟ್ಟಿನಲ್ಲಿ ಝಕಾತ್ ನೆಲೆನಿಂತಿದೆ. ಆದ್ದರಿಂದ, ಇಸ್ಲಾಮ್ ಅದನ್ನು ವೈಯಕ್ತಿಕವೆಂದು ಪರಿಗಣಿಸಲಿಲ್ಲ. ಬದಲಾಗಿ ಸರಕಾರದ ಹೊಣೆಯಲ್ಲಿ ಸೇರಿಸಿತು. ಅದನ್ನು ಸಂಗ್ರಹಿಸಿ ವಿತರಣೆ ಮಾಡುವುದು ರಾಷ್ಟ್ರದ ಕರ್ತವ್ಯವಾಗಿದೆ. ಅದನ್ನು ವ್ಯಕ್ತಿಗಳ ಹೊಣೆಗೆ ಒಪ್ಪಿಸುವುದರಿಂದ ಹಲವು ದೋಷಗಳಿವೆ. ಮೊದಲನೆಯದಾಗಿ, ಹಣದಾಸೆ ಮತ್ತು ಸ್ವಾರ್ಥದಿಂದ ಕೆಲವು ಮನಸ್ಸುಗಳಾದರೂ ಕಠೋರ ಅಥವಾ ರೋಗ ಪೀಡಿತವಾಗಬಹುದು. ತನ್ಮೂಲಕ ಶ್ರೀಮಂತರು ಬಡವರ ಹಕ್ಕನ್ನು ನಿರಾಕರಿಸಿದರೆ ಅದನ್ನು ಬಡವರು ಗಳಿಸುವುದು ಹೇಗೆ? ಎರಡನೆಯದಾಗಿ ಬಡವರು ತಮ್ಮ ಹಕ್ಕುಗಳಿಗಾಗಿ ವ್ಯಕ್ತಿಗಳನ್ನು ಅವಲಂಬಿಸುವುದರಿಂದ ಅವರ ಪ್ರತಿಷ್ಠೆಗೆ ಧಕ್ಕೆಯುಂಟಾಗುತ್ತದೆ. ಸರಕಾರಗಳಿಂದಾದರೆ ಅಂತಹ ಸಮಸ್ಯೆ ಉದ್ಭವಿಸುವುದಿಲ್ಲ. ಮೂರನೇಯದಾಗಿ, ವ್ಯಕ್ತಿಗಳು ನಿರ್ವಹಿಸಿದರೆ ಝಕಾತ್‌ನ ವಿತರಣೆಯು

ಸುವ್ಯವಸ್ಥಿತವಾಗಲಾರದು. ಅದು ಕೆಲವಾರು ಬಡವರಿಗೆ ಸೀಮಿತಗೊಂಡು ತನ್ಮೂಲಕ ಹೆಚ್ಚು ಅರ್ಹರು ನಿರ್ಲಕ್ಷಿತರಾಗಬಹುದು. ನಾಲ್ಕನೇಯದಾಗಿ, ಝಕಾತ್‌ನ ಹಕ್ಕುದಾರರು ಕೇವಲ ಬಡವರು, ನಿರ್ಗತಿಕರು, ಯಾತ್ರಿಕರು ಮಾತ್ರವಲ್ಲದೆ ಮುಸ್ಲಿಮ್ ಸಮುದಾಯದ ಸಾಮಾನ್ಯ ಹಿತಕ್ಕಾಗಿಯೂ ಅದನ್ನು ವಿನಿಯೋಗಿಸಬೇಕಾಗಿದೆ. ಈ ಕಾರ್ಯವನ್ನು ವ್ಯಕ್ತಿಗಳಿಂದ ಮಾಡಲು ಸಾಧ್ಯವಿಲ್ಲ, ಆಡಳಿತಗಾರರಿಂದ ಮಾತ್ರ ಸಾಧ್ಯ. ಉದಾಹರಣೆಗೆ ಇಸ್ಲಾಮಿನೊಂದಿಗೆ ಸಹಾನುಭೂತಿಯಿರುವ ಮುಸ್ಲಿಮೇತರರು, ದೇವ ಮಾರ್ಗದಲ್ಲಿ ಜಿಹಾದ್, ಇಸ್ಲಾಮೀ ಪ್ರಚಾರ ಇತ್ಯಾದಿಗಳಿಗಾಗಿ ಝಕಾತ್‌ನ ವಿನಿಯೋಗ. ಐದನೇಯದಾಗಿ ಇಸ್ಲಾಮ್ ರಾಜಕೀಯ ಸಂವಿಧಾನವೂ ಸೇರಿರುವ ಧರ್ಮವಾಗಿದೆ. ಇಸ್ಲಾಮಿನ ರಾಜಕೀಯ ವ್ಯವಸ್ಥೆಯ ಜ್ಯಾರಿಗೆ ಹಣ ಬೇಕು. ಸರಕಾರದ ಖಜಾನೆಯ ಆದಾಯದಲ್ಲಿ ಝಕಾತ್ ಸುಪ್ರಧಾನವಾಗಿದೆ.

## ಝಕಾತ್ ವಿಶೇಷ ನಿಧಿ

ಝಕಾತ್‌ಗೆ, ನಿರ್ದಿಷ್ಟ ಸಂಗ್ರಹ ಮತ್ತು ವಿತರಣೆಯ ವ್ಯವಸ್ಥೆಯಿದೆಯೆಂದು ನಾವು ತಿಳಿದೆವಷ್ಟೆ. ಇಸ್ಲಾಮೀ ಮತ್ತು ಮಾನವೀಯ ಬೇಡಿಕೆಗಳಿಗಾಗಿ ಮಾತ್ರ ಅದನ್ನು ವಿನಿಯೋಗಿಸಬಹುದು. ನಾನಾ ರೀತಿಯ ಬೇಡಿಕೆಗಳಿರುವ ರಾಷ್ಟ್ರದ ಸಾಮಾನ್ಯ ಬಜೆಟ್‌ನಲ್ಲಿ ಝಕಾತನ್ನು ಸೇರಿಸಬಾರದು. ಝಕಾತ್‌ನ ಹಕ್ಕುದಾರರನ್ನು ನಿರ್ಣಯಿಸುವ 'ಅತ್ತೌಬಃ' ಅಧ್ಯಾಯದ ವಾಕ್ಯವು ಈ ವೈಶಿಷ್ಟ್ಯದತ್ತ ಬೆಟ್ಟು ಮಾಡುತ್ತದೆ. ಝಕಾತ್ ನಿರ್ವಾಹಕರು ಕೆಲಸದ ಮಜೂರಿಯನ್ನು ಝಕಾತ್‌ನಿಂದಲೇ ಪಡೆಯಬೇಕೆಂಬ ಆದೇಶದಲ್ಲಿಯೂ ಅದರ ಸೂಚನೆಯಿದೆ. ಝಕಾತ್‌ನ ಸಂಗ್ರಹ ಮತ್ತು ವಿತರಣೆಗಾಗಿ ವಿಶೇಷ ಖಾತೆಯಿರಬೇಕೆಂದು ಇದರಿಂದ ವ್ಯಕ್ತವಾಗುತ್ತದೆ. ಹಿಂದಿನ ಕಾಲದಿಂದಲೇ ಮುಸ್ಲಿಮರು ಇದನ್ನು ದೃಢಪಡಿಸಿದ್ದಾರೆ. ಆದ್ದರಿಂದ ಅವರು ಝಕಾತ್‌ನ ಒಂದು ಸ್ವತಂತ್ರ ನಿಧಿಯನ್ನು ಸ್ಥಾಪಿಸಿದರು. ದೇಶದ ಆರ್ಥಿಕ ವ್ಯವಸ್ಥೆಯನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿದರು:

1. ಝಕಾತ್‌ನ ವ್ಯವಹಾರ ನಡೆಸುವ ವಿಭಾಗ- ಝಕಾತ್‌ನ ಸಂಗ್ರಹ, ಶೇಖರಣೆ ಮತ್ತು ಅಗತ್ಯಾನುಸಾರ ವಿತರಣೆ ಮಾಡುವ ಕೆಲಸವನ್ನು ಈ ವಿಭಾಗ ನಿರ್ವಹಿಸುತ್ತಿತ್ತು.

2. ಜಿಝ್ಯಾ, ಖರಾಜ್ ಇತ್ಯಾದಿಗಳನ್ನು ವ್ಯವಹರಿಸುವ ವಿಭಾಗ- ಜಿಝ್ಯಾ ಎಂದರೆ, ತಮ್ಮ ಪ್ರಾಣ ಮತ್ತು ಸೊತ್ತನ್ನು ಸಂರಕ್ಷಿಸಬೇಕೆಂಬ ಒಪ್ಪಂದದ ಮೇರೆಗೆ ಇಸ್ಲಾಮೀ ರಾಷ್ಟ್ರದಲ್ಲಿ ಮುಸ್ಲಿಮರ ಜತೆ ಬಾಳುವ ಮುಸ್ಲಿಮೇತರರಿಂದ ಪಡೆಯುವ ವಿಶೇಷ ತೆರಿಗೆಯಾಗಿದೆ. ಝಕಾತ್, ಫಿತ್ರ್ ಝಕಾತ್, ಆರಾಧನಾ ಕಾರ್ಯಗಳಲ್ಲಿ ಲೋಪ ಮಾಡಿದ್ದಕ್ಕಾಗಿ ಪ್ರಾಯಶ್ಚಿತ್ತ ಇತ್ಯಾದಿ ಮುಸ್ಲಿಮರಿಗೆ ಮಾತ್ರ ಅನ್ವಯವಾಗುವ ಹೊಣೆಗಾರಿಕೆಗಳಿಗೂ ಸೇನೆಯಲ್ಲಿ ಸೇವೆ ಸಲ್ಲಿಸದೆಯೇ ಮುಸ್ಲಿಮೇತರರ ಸಂಪೂರ್ಣ ಸಂರಕ್ಷಣೆ ವಹಿಸುವುದಕ್ಕೂ ಪ್ರತಿಯಾಗಿ ಜಿಝ್ಯಾ ಸ್ವೀಕರಿಸಲಾಗುತ್ತದೆ. ಖರಾಜ್ ಎಂದರೆ, ಭೂಮಿಯ ಉತ್ಪಾದನಾ ಕ್ಷಮತೆಯ ಆಧಾರದಲ್ಲಿ ನಿರ್ಣಯಿಸಿರುವ ವಾರ್ಷಿಕ ತೆರಿಗೆಯಾಗಿದೆ.

3. ಸಮರಾರ್ಜಿತ ಸಂಪತ್ತು ಮತ್ತು ನಿಧಿ ನಿಕ್ಷೇಪಗಳನ್ನು ವ್ಯವಹರಿಸುವ ವಿಭಾಗ.

4. ಬಿದ್ದು ಸಿಕ್ಕಿದ ವಸ್ತುಗಳನ್ನು ವ್ಯವಹರಿಸುವ ವಿಭಾಗ- ಮಾಲಿಕರು ಅಜ್ಞಾತರಾಗಿರುವ ಮತ್ತು ವಾರೀಸುದಾರರಿಲ್ಲದ ಸಂಪತ್ತನ್ನು ಈ ವಿಭಾಗವು ನೋಡಿಕೊಳ್ಳುವುದು.

ಈ ಕೆಳಗಿನ ಮುಖ್ಯಾಂಶಗಳನ್ನು ಗಮನಿಸಬೇಕಾಗಿದೆ- ಇಸ್ಲಾಮಿನ ಝಕಾತ್ ಸ್ವಯಿಚ್ಛೆಯಿಂದ ಮಾಡುವ ದಾನಧರ್ಮಗಳಲ್ಲಿ ಸೇರುವುದಿಲ್ಲ; ಆತ್ಮ ಸಾಕ್ಷಿಗೆ ಬಿಟ್ಟ ವೈಯಕ್ತಿಕ ಕರ್ತವ್ಯವೂ ಅಲ್ಲ. ರಾಷ್ಟ್ರದ ಮೇಲ್ನೋಟದಲ್ಲಿ ಸಂಗ್ರಹ ಮತ್ತು ವಿತರಣೆಗೆ ವಿಶೇಷ ವ್ಯವಸ್ಥೆಯಿರುವ ಒಂದು ಕಡ್ಡಾಯ ಕರ್ಮವಾಗಿದೆ. ತೆರಿಗೆಯ ಸ್ವರೂಪವಿರುವಂತಹ ಆರಾಧನಾ ಕರ್ಮ, ಆರಾಧನೆಯ ಸ್ಫೂರ್ತಿಯಿರುವಂತಹ ತೆರಿಗೆ. ಆದ್ದರಿಂದ, ಅದರ ವಿತರಣೆ ಮತ್ತು ಉಸ್ತುವಾರಿಗೆ ಇಬ್ಬರು ಕಾವಲುಗಾರರಿರುತ್ತಾರೆ. ಒಂದನೆಯದು ಬಾಹ್ಯವಾಗಿದ್ದು, ಅದು ಮುಸ್ಲಿಮರ ಸರಕಾರ ಮತ್ತು ಮುಸ್ಲಿಮ್ ಸಮಾಜವಾಗಿದೆ. ಇನ್ನೊಂದು ಆಂತರಿಕವಾಗಿದ್ದು ದೇವನ ಶಿಕ್ಷೆಗೆ ಭಯಪಟ್ಟು ದೇವ ಸಂಪ್ರೀತಿಯನ್ನು ಬಯಸುವ ಮುಸ್ಲಿಮನ ವಿಶ್ವಾಸ ತುಂಬಿದ ಆತ್ಮ ಸಾಕ್ಷಿಯಾಗಿದೆ. ಬಡವರ ಹಕ್ಕು ಸಂರಕ್ಷಣೆ ಮತ್ತು ಝಕಾತನ್ನು ಬಲಾತ್ಕಾರದಿಂದ ವಸೂಲು ಮಾಡುವುದಕ್ಕಾಗಿ ಪ್ರಥಮ ಖಲೀಫಾ ತೋರಿದ ವಿಧಾನವನ್ನು ಅವಲಂಬಿಸುವ ಸರಕಾರಗಳು ಇಲ್ಲದಂತಹ ಪರಿಸ್ಥಿತಿಯಲ್ಲಿ, ಬಡವರಿಗೆ ತಮ್ಮ ಹಕ್ಕುಗಳ ಪ್ರಾಪ್ತಿಗೆ ದೇವಭಯವಿರುವ, ದೇವ ಸಂಪ್ರೀತಿ ಬಯಸುವ, ವಿಶ್ವಾಸದ ಸ್ವಯಂ ಪ್ರೇರಣೆಯಿಂದ ನೆರೆಯವರ ಹಸಿವು ತಣಿಸಲಿಕ್ಕಾಗಿ ಅರೆಹೊಟ್ಟೆ ಉಂಡು ಮಲಗುವ ಮುಸಲ್ಮಾನನ ಇಸ್ಲಾಮೀ ಮನಸ್ಸನ್ನು ಮಾತ್ರ ಅವಲಂಬಿಸ ಬೇಕಾಗುತ್ತದೆ.

## ಫುಕರಾಅ್ ಮತ್ತು ಮಸಾಕೀನ್

ಕುರ್‌ಆನ್, ಝಕಾತ್ ಸಂಗ್ರಹಕ್ಕಿಂತ ಅದರ ವಿತರಣೆಗೆ ಹೆಚ್ಚು ಗಮನ ನೀಡಿದೆ. ಓರ್ವ ಆಡಳಿತಗಾರನ ಮಟ್ಟಿಗೆ ಝಕಾತ್‌ನ ಸಂಗ್ರಹವು ದೊಡ್ಡ ಸಮಸ್ಯೆಯಲ್ಲ. ಅದನ್ನು ಸೂಕ್ತವಾಗಿ ವಿನಿಯೋಗಿಸಿ ಅರ್ಹರಾದವರಿಗೆ ತಲಪಿಸುವುದೇ ದೊಡ್ಡ ಜವಾಬ್ದಾರಿಕೆಯಾಗಿದೆ. ಆದ್ದರಿಂದ ಝಕಾತ್‌ನ ಹಕ್ಕುದಾರರನ್ನು ನಿರ್ಣಯಿಸುವ ಹೊಣೆಯನ್ನು ಆಡಳಿತಗಾರರಿಗೆ ಅಥವಾ ಝಕಾತ್‌ನ ಹಕ್ಕುದಾರರೆಂದು ನಟಿಸಿ ವಂಚಿಸಲು ಪ್ರಯತ್ನಿಸುವ ದುರಾಗ್ರಹಿಗಳ ಆತ್ಮ ಸಾಕ್ಷಿಗೆ ಕುರ್‌ಆನ್ ಬಿಟ್ಟಿಲ್ಲ. ಬದಲಾಗಿ ಅದರ ನೈಜ ಹಕ್ಕುದಾರರನ್ನೂ ಅದನ್ನು ವಿನಿಯೋಗಿಸಬೇಕಾದ ರಂಗಗಳನ್ನೂ ಕುರ್‌ಆನ್ ಸ್ಪಷ್ಟಪಡಿಸಿದೆ. ಝಕಾತ್‌ನ ಹಕ್ಕುದಾರರನ್ನು ಎತ್ತಿ ಹೇಳಿದ ಕುರ್‌ಆನ್ ವಾಕ್ಯಗಳ ಅವತೀರ್ಣವು ಝಕಾತಿನಲ್ಲಿ ಕಣ್ಣಿರಿಸಿ, ದುರಾಸೆಪಟ್ಟು, ಅದರ ವಿತರಣೆಯಲ್ಲಿ ಪ್ರವಾದಿಯವರು(ಸ) ನಮ್ಮನ್ನು ನಿರ್ಲಕ್ಷಿಸುತ್ತಿರುವರೆಂದು ದೂರುತ್ತಿದ್ದ ಕಪಟವಿಶ್ವಾಸಿಗಳಿಗೆ ಭಾರೀ ಹೊಡೆತವಾಗಿತ್ತು. ಅಲ್ಲಾಹನು ಹೇಳಿರುವನು:

"ಓ ಪೈಗಂಬರರೇ, ಅವರಲ್ಲಿ ಕೆಲವರು ಸದಕಾತ್ (ಕಡ್ಡಾಯ ದಾನಗಳು) ವಿತರಣೆಯ ಬಗ್ಗೆ ನಿಮ್ಮನ್ನು ಆಕ್ಷೇಪಿಸುತ್ತಾರೆ. ಆ ಸೊತ್ತಿನಿಂದ ಅವರಿಗೇನಾದರೂ ಕೊಟ್ಟು ಬಿಟ್ಟರೆ

ತೃಪ್ತರಾಗುತ್ತಾರೆ. ಕೊಡದಿದ್ದರೆ ಸಿಟ್ಟಾಗುತ್ತಾರೆ. ಅಲ್ಲಾಹ್ ಮತ್ತು ರಸೂಲರು ಅವರಿಗೆ ಕೊಟ್ಟುದುದರಲ್ಲಿ ತೃಪ್ತಿ ಪಟ್ಟು, "ಅಲ್ಲಾಹ್ ನಮಗೆ ಸಾಕು. ಅವನು ತನ್ನ ಅನುಗ್ರಹದಿಂದ ಇನ್ನೂ ಧಾರಾಳವಾಗಿ ನೀಡುವನು ಮತ್ತು ಅವನ ರಸೂಲರೂ ನಮಗೆ ದಯಪಾಲಿಸುವರು. ನಾವು ಅಲ್ಲಾಹನ ಕಡೆಗೇ ಕಾಮನೆಯನ್ನಿರಿಸಿ ಕೊಂಡಿದ್ದೇವೆ" ಎನ್ನುತ್ತಿದ್ದರೆ ಅದೆಷ್ಟು ಉತ್ತಮವಾಗುತ್ತಿತ್ತು. ವಾಸ್ತವದಲ್ಲಿ ಈ 'ಕಡ್ಡಾಯ ದಾನಗಳು' ಬಡವರು, ದರಿದ್ರರು, ಝಕಾತ್‌ನ ಕಾರ್ಯ ನಿರ್ವಾಹಕರು, ಮನವೊಲಿಸಬೇಕಾದವರು, ಗುಲಾಮರ ವಿಮೋಚನೆ, ದೇವ ಮಾರ್ಗ, ಸಾಲಗ್ರಸ್ಥರು ಮತ್ತು ಯಾತ್ರಿಕರ ನೆರವಿಗಾಗಿದೆ. ಇದು ಅಲ್ಲಾಹನ ನಿರ್ಣಯವಾಗಿದೆ. ಅಲ್ಲಾಹನು ಸರ್ವಜ್ಞನೂ ಮಹಾಧೀಮಂತನೂ ಆಗಿದ್ದಾನೆ."

(ಅತ್ತೌಬಃ :58-60)

ಅಬೂ ದಾವೂದ್ ವರದಿ ಮಾಡಿದ್ದಾರೆ: ಓರ್ವರು ಪ್ರವಾದಿಯವರ ಬಳಿ ಬಂದು ಝಕಾತ್ ಕೇಳಿದರು. ಪ್ರವಾದಿ(ಸ) ಹೇಳಿದರು: "ಝಕಾತ್‌ನ ವಿಷಯದಲ್ಲಿ ಅಲ್ಲಾಹನು ಯಾವನೇ ಪ್ರವಾದಿಯ ಅಥವಾ ಇತರರ ನಿಯಮವನ್ನು ಅಂಗೀಕರಿಸಿಲ್ಲ. ಅವನು ಅದನ್ನು ಎಂಟು ವಿಭಾಗಗಳಿಗೆ ಹಂಚಿದನು. ಅವುಗಳಲ್ಲಿ ನೀವು ಸೇರಿದ್ದರೆ ನಾನು ಪಾಲು ನೀಡುತ್ತೇನೆ."

ಆ ಎಂಟು ವಿಭಾಗಗಳ ಪೈಕಿ ಝಕಾತ್‌ಗೆ ಅರ್ಹರೆಂದು ಕುರ್‌ಆನ್ ಹೇಳಿರುವ ಆರಂಭದ ಎರಡು ವಿಭಾಗಗಳ ಅರ್ಥಾತ್ ಫುಕರಾಅ್(ಬಡವ) ಮತ್ತು ಮಿಸ್ಕೀನ್ (ದರಿದ್ರ)ರ ಬಗ್ಗೆ ಇಲ್ಲಿ ವಿವೇಚಿಸಬೇಕಾಗಿದೆ. 'ಫಕೀರ್' ಮತ್ತು 'ಮಿಸ್ಕೀನ್' ಎಂಬೀ ಪ್ರಯೋಗಗಳ ತಾತ್ಪರ್ಯ, ಅವುಗಳ ವ್ಯತ್ಯಾಸ, ಅವರಲ್ಲಿ ಹೆಚ್ಚು ಸಂಕಷ್ಟ ಪಡುವವರು ಯಾರು ಎಂಬಿತ್ಯಾದಿಗಳ ಬಗ್ಗೆ ಕರ್ಮಶಾಸ್ತ್ರ ವಿದ್ವಾಂಸರು ಮತ್ತು ಕುರ್‌ಆನ್ ವ್ಯಾಖ್ಯಾನಗಾರರು ವಿಭಿನ್ನ ದೃಷ್ಟಿಕೋನವನ್ನು ಹೊಂದಿದ್ದಾರೆ. ಆದರೆ ಈ ಭಿನ್ನತೆಯು ಅವರಿಗೆ ಝಕಾತ್ ಪಡೆಯುವ ಅರ್ಹತೆಯನ್ನು ಮೊಟಕುಗೊಳಿಸುವ ಯಾವುದೇ ನಿರ್ಣಯಕ್ಕೆ ಅವಕಾಶ ನೀಡುವುದಿಲ್ಲ. ಯಾಕೆಂದರೆ ಅವರು ಜೀವನಾವಶ್ಯಕತೆಗಳನ್ನು ಸ್ವಯಂ ಪೂರೈಸುವ ಸಾಮರ್ಥ್ಯವಿಲ್ಲದ ವಿಭಾಗದ ಎರಡು ವರ್ಗಗಳೆಂಬ ಬಗ್ಗೆ ಭಿನ್ನಾಭಿಪ್ರಾಯವಿಲ್ಲ. ಅವಶ್ಯಕತೆಗಳಿದ್ದರೂ ಜನರಿಂದ ಬೇಡದೆ ಜೀವನ ಸಾಗಿಸುವವರು 'ಫಕೀರರು' ಮತ್ತು ಬೇಡಿ ಪಡೆಯುವವರು 'ಮಿಸ್ಕೀನರು'- ಎಂಬ ಅಭಿಪ್ರಾಯವು ಪ್ರಬಲವಾಗಿದೆ. ಕರ್ಮಶಾಸ್ತ್ರಜ್ಞರ ಅಭಿಪ್ರಾಯದಲ್ಲಿ ಫಕೀರನು ಮಿಸ್ಕೀನ್‌ಗಿಂತ ಹೆಚ್ಚು ಸಂಕಷ್ಟದಲ್ಲಿರುತ್ತಾನೆ. ಸ್ವಂತವಾಗಿ ಏನೂ ಇಲ್ಲದವನು ಅಥವಾ ಒಂದು ವೇಳೆ ಇದ್ದರೂ ತನ್ನ ಮತ್ತು ಕುಟುಂಬದ ಅವಶ್ಯಕತೆಗಳ ಅರ್ಧಾಂಶವನ್ನೂ ಪೂರೈಸಲಾಗದವನು ಫಕೀರ್‌ನ ವರ್ಗಕ್ಕೆ ಸೇರುತ್ತಾನೆ ಅಥವಾ ಅದಕ್ಕಿಂತ ಹೆಚ್ಚು ಪೂರೈಸುವವನು ಮತ್ತು ಸಂಪೂರ್ಣ ಸ್ವಾವಲಂಬಿಯಲ್ಲದವನು ಮಿಸ್ಕೀನ್ ಎಂದೂ ಕೆಲವರು ಅಭಿಪ್ರಾಯ ಪಟ್ಟಿದ್ದಾರೆ.

ಸಾಮಾನ್ಯವಾಗಿ ಬಡತನ ಮತ್ತು ದಾರಿದ್ರ್ಯದ ಸೋಗಿನಿಂದ ಭಿಕ್ಷಾಟನೆಯನ್ನು

ವೃತ್ತಿಯಾಗಿ ಮಾಡಿಕೊಂಡು ಜನಸಂದಣಿಗಳಲ್ಲಿಯೂ ಸಂತೆಗಳಲ್ಲಿಯೂ ಮಸೀದಿಗಳ
ಾಗಿಲಿನಲ್ಲಿಯೂ ನಿಂತು ದಾರಿಹೋಕರ ಮುಂದೆ ಕೈ ಚಾಚುವವರೆಲ್ಲರೂ ಝಕಾತ್‌ನ ನೈಜ
ಕ್ಕುದಾರರೆಂದು ಹೆಚ್ಚಿನವರು ಭಾವಿಸುತ್ತಾರೆ. ಇಸ್ಲಾಮೀ ಶಿಕ್ಷಣಗಳ ಬಗೆಗಿನ ಅಜ್ಞಾನವೇ
ದಕ್ಕೆ ಕಾರಣ. ಹಿಂದಿನ ಕಾಲದಿಂದಲೇ ಜನಮನಗಳಲ್ಲಿ ಮೂಡಿದ್ದ ಮಿಸ್ಕೀನ್‌ನ ಚಿತ್ರವೂ
ದೇ ಆಗಿರಬಹುದು. ಪ್ರವಾದಿಯವರ ಕಾಲದಲ್ಲಿಯೂ ಸಮಾಜದ ನೆರವಿಗೆ ಯಾರು
ರ್ಹರೆಂಬುದನ್ನು ಪ್ರವಾದಿಯವರೇ ವಿವರಿಸಬೇಕಾಯಿತು: "ನೀವು ಒಂದೆರಡು ಖರ್ಜೂರ
ಥವಾ ರೊಟ್ಟಿ ತುಂಡುಗಳನ್ನು ನೀಡುವವರು ದರಿದ್ರರಲ್ಲ- ಬದಲಾಗಿ, ಜನರಿಂದ ಯಾಚಿಸದೆ
ಸ್ವಾಭಿಮಾನ ಮೆರೆಸುವವರೇ ದರಿದ್ರರು. ಅವರು ಜನರೊಡನೆ ಕಾಡಿ ಬೇಡುವುದಿಲ್ಲ" ಎಂಬ
ರ್‌ಆನ್ ವಾಕ್ಯವನ್ನು ಆಲಿಸಿಲ್ಲವೇ! ಎಂದು ಪ್ರವಾದಿ(ಸ) ಹೇಳಿದರು. ಈ ಕುರ್‌ಆನ್
ಕ್ಯವು ಜೀವನಾವಶ್ಯಕತೆಗಳಿಗೆ ಸಾಕಷ್ಟು ಹಣ ಅಥವಾ ಆದಾಯವಿಲ್ಲದೆ ಪ್ರವಾದಿಯವರ
ಳಿ ಬಂದು ಸೇರಿದ ಬಡ ಮುಹಾಜಿರರಿಗೆ ಸಂಬಂಧಿಸಿದ್ದಾಗಿದೆ.

"ಅಲ್ಲಾಹನ ಮಾರ್ಗದಲ್ಲಿ ಕಾರ್ಯವೆಸಗುವ ಭರದಲ್ಲಿ ತಮ್ಮ ಸ್ವಂತ
ೀವನೋಪಾಯಕ್ಕಾಗಿ ಭೂಮಿಯಲ್ಲಿ ಶ್ರಮ ಪಡಲು ಸಾಧ್ಯವಾಗದಿರುವ ಬಡಜನರು
ುಖ್ಯವಾಗಿ ಸಹಾಯಕ್ಕೆ ಅರ್ಹರಾಗಿದ್ದಾರೆ. ಅರಿವಿಲ್ಲದವನು ಅವರ ಸ್ವಾಭಿಮಾನವನ್ನು
ಡು ಅವರು ಸ್ಥಿತಿವಂತರಾಗಿದ್ದಾರೆಂದೇ ಊಹಿಸುತ್ತಾರೆ. ನೀವು ಅವರ ಮುಖ ಭಾವಗಳಿಂದ
ವರ ಆಂತರಿಕ ಸ್ಥಿತಿಯನ್ನು ತಿಳಿದು ಕೊಳ್ಳಬಲ್ಲಿರಿ. ಆದರೆ, ಅವರು ಜನರ ಬೆಂಬತ್ತಿ
ೀಡುವವರಲ್ಲ. ಅವರ ಸಹಾಯಾರ್ಥವಾಗಿ ನೀವು ಖರ್ಚು ಮಾಡುವ ಸಂಪತ್ತು
ಲ್ಲಾಹನಿಂದ ಮರೆಯಾಗದು." (ಅಲ್ ಬಕರಃ, 273)

ವಸ್ತುತಃ ಇಂತಹ ಮಂದಿ ನೆರವಿಗೆ ಅರ್ಹರು. ಮೇಲೆ ಹೇಳಿದ ಪ್ರವಾದಿ ವಚನವು
ನನ್ನೇ ಆದೇಶಿಸುತ್ತದೆ. ಇನ್ನೊಂದು ವಚನದಲ್ಲಿ ಹೀಗಿದೆ:

"ದರಿದ್ರನೆಂದರೆ ಜನರ ಹಿಂದೆಯೇ ಸುಳಿದಾಡುತ್ತಿರುವ ಮತ್ತು ನೀವು ಒಂದೆರಡು
ರ್ಜೂರ ಅಥವಾ ರೊಟ್ಟಿ ತುಂಡುಗಳನ್ನು ನೀಡುವಾತನಲ್ಲ. ಬದಲಾಗಿ, ಯಾವನೇ ಧನಿಕನು
ನ ಬೇಡಿಕೆಗಳನ್ನು ಪೂರೈಸದೆ ಅಥವಾ ಆತನ ಸ್ಥಿತಿಯನ್ನು ಮನಗಂಡು ದಾನ
ಡದಿದ್ದರೂ ಜನರೊಡನೆ ಯಾಚಿಸದವನಾಗಿದ್ದಾನೆ." (ಬುಖಾರಿ, ಮುಸ್ಲಿಮ್)

ವಸ್ತುತಃ ಇವರೇ ನೆರವಿಗೆ ಅರ್ಹರು- ಸಾಮಾನ್ಯವಾಗಿ ಜನರು ಈ ಮಂದಿಯನ್ನು
ಕ್ಷಿಸುತ್ತಾರಾದರೂ, ಪ್ರವಾದಿಯವರು ಅವರಿಗೆ ವಿಶೇಷ ಗಮನ ನೀಡಿದ್ದಾರೆ. ಅಂತಹ
ಂದಿಗಾಗಿಯೇ ಅವರು ಮಾನವೀಯ ಆತ್ಮಸಾಕ್ಷಿಯನ್ನು ಜಾಗೃತಗೊಳಿಸಿದ್ದರು.

ಮನೆ ಮತ್ತು ಸೇವಕನಿರುವ ಓರ್ವರಿಗೆ ಝಕಾತ್ ಪಡೆಯುವ ಅರ್ಹತೆಯಿದೆಯೇ?
ದು ಇಮಾಮ್ ಹಸನ್ ಬಸ್ರಿಯವರೊಡನೆ ಪ್ರಶ್ನಿಸಲಾಯಿತು. "ಅದೊಂದು
ಶ್ಯಕತೆಯೆಂದಾದರೆ ಇದೆ" ಎಂದು ಉತ್ತರಿಸಿದರು."ಒಬ್ಬರಿಗೆ ಆದಾಯವಿರುವ ಎಸ್ಟೇಟ್

ಮತ್ತು ಸುಮಾರು 10,000 ದಿರ್ಹಮ್‌ಗಳ ಸೊತ್ತಿದೆ. ಆದರೆ, ಅದು ಅವರ ಅಗತ್ಯ
ಸಾಕಾಗುವುದಿಲ್ಲ. ಇವರಿಗೆ ಝಕಾತ್‌ನ ಹಕ್ಕಿದೆಯೇ?" ಎಂದು ಇಮಾಮ್ ಅಹ್ಮದ್‌ರೊಡ
ಕೇಳಿದಾಗ, 'ಇದೆ' ಎಂದು ಅವರು ಉತ್ತರಿಸಿದರು. ಶಾಫೀಯವರ ಅಭಿಪ್ರಾಯದಂ
ಸೊತ್ತಿದ್ದರೂ ಆದಾಯವು ಅವಶ್ಯಕತೆಗಳ ಪೂರೈಕೆಗೆ ಅಪರ್ಯಾಪ್ತವಾಗಿರುವವರು ಝಕಾತ
ಸ್ವೀಕರಿಸಬಹುದು, ಸೊತ್ತನ್ನು ಮಾರುವಂತೆ ಅವನನ್ನು ನಿರ್ಬಂಧಿಸಬೇಕಾಗಿಲ್ಲ. ಮಾಲಿ
ಮದ್ಹಬ್‌ನವರ ದೃಷ್ಟಿಯಲ್ಲಿ ಝಕಾತ್ ಕಡ್ಡಾಯವಾಗುವಷ್ಟು ಹಣ ಕೈಯಲ್ಲಿದ್ದರೂ ಧಾರಾ
ಕುಟುಂಬ ಸದಸ್ಯರಿದ್ದರೆ ಝಕಾತ್ ಪಡೆಯಬಹುದು- ಮನೆ ಮತ್ತು ಸೇವಕರಿದ್ದರೂ ಸರಿಯೆ
ಹನಫೀಗಳ ಅಭಿಪ್ರಾಯ ಹೀಗಿದೆ: ಮನೆ, ಪೀಠೋಪಕರಣಗಳು, ಸೇವಕ, ಕುದುರೆ, ಆಯುಧ
ಬಟ್ಟೆ, ಬರೆ, ಶೈಕ್ಷಣಿಕ ಗ್ರಂಥಗಳಿರುವಾತನೂ ಝಕಾತ್ ಪಡೆಯುವುದರಲ್ಲಿ ದೋಷವಿಲ್ಲ
"ಮನೆ, ಸೇವಕ, ಆಯುಧ, ಕುದುರೆ ಇತ್ಯಾದಿ 10,000 ದಿರ್ಹಮ್ ಸೊತ್ತಿರುವಾತನಿಗೂ ಅವ
ಝಕಾತ್ ನೀಡಿದ್ದರು" ಎಂಬ ಹಸನ್ ಬಸ್ರಿಯವರ ಹೇಳಿಕೆಯೇ ಹನಫೀಗಳಿಗೆ ಆಧಾರವಾಗಿದ
ಇಂತಹ ವಸ್ತುಗಳನ್ನು ಕೈಬಿಡಲು ಮಾನವನಿಗೆ ಸಾಧ್ಯವೇ ಇಲ್ಲ. ಅವು ಇರುವುದು ಅಥವ
ಇಲ್ಲದಿರುವುದು (ಝಕಾತ್ ಪಡೆಯುವ ಅರ್ಹತೆಯನ್ನು ಪರಿಗಣಿಸುವಾಗ) ಸಮಾನವಾಗಿದ
ಹೇಳಿಕೆಯಲ್ಲಿ 'ಅವರು' ಎಂಬುದು ಪ್ರವಾದಿಯ ಅನುಚರರು ಎಂಬುದನ್ನು ಸೂಚಿಸುತ್ತದ

ಒಟ್ಟಿನಲ್ಲಿ ಸ್ವಂತ ಸಂಪತ್ತಿಲ್ಲವಾದರೂ ದಿವಾಳಿಯಾದವರೂ ಮಾತ್ರವಲ್ಲದ
ಅವಶ್ಯಕತೆಗಳನ್ನು ಸಂಪೂರ್ಣ ಪೂರೈಸಲಾಗದವರೂ ಝಕಾತ್‌ಗೆ ಅರ್ಹರಾಗಿದ್ದಾರೆ.

## ಸಾಮರ್ಥ್ಯ ಮತ್ತು ಆದಾಯವಿರುವಾತನಿಗೂ ಝಕಾತಿಲ್ಲ-

ಝಕಾತ್‌ನ ಅರ್ಹತೆಗೆ 'ಅಗತ್ಯ' ಎಂಬುದನ್ನು ಮಾನದಂಡವಾಗಿ ನಿರ್ಣಯಿಸಲಾಗಿದ
ತನ್ನ ಮತ್ತು ಕುಟುಂಬದ ಅಗತ್ಯಗಳ ಪೂರೈಕೆಗೆ ಝಕಾತ್‌ನ ಅಗತ್ಯವುಂಟಾಗುವುದು. ಆದ
ಆರೋಗ್ಯವಂತರು ಮತ್ತು ದುಡಿದು ಸಂಪಾದಿಸುವ ಸಾಮರ್ಥ್ಯವಿರುವವರು ಹಾಗೂ ಯಾ
ಕೆಲಸವನ್ನೂ ಮಾಡದೆ ಅನ್ಯರ ನೆರವು ಮತ್ತು ಔದಾರ್ಯದಿಂದಲೇ ದಿನ ದೂ
ಬಯಸುವವರಿಗೆ ಝಕಾತ್ ಸ್ವೀಕರಿಸುವ ಅರ್ಹತೆಯಿದೆಯೇ? ಇಲ್ಲವೆಂದು ಒಂದು ವಿಭಾಗ
ಭಾವಿಸುತ್ತದೆ. ಏಕೆಂದರೆ ಝಕಾತ್, ಕೆಲಸ ಮಾಡದಿರುವುದಕ್ಕೆ ಪ್ರೇರಣೆ ಮತ್ತು ಸೋಮಾರಿಗಳಿಗ
ಆಲಸಿಗಳಿಗೂ ಪ್ರಚೋದನೆಯಾಗುವುದೆಂದು ಅವರು ನಂಬುತ್ತಾರೆ. ಆದರೆ ಇದರ
ಇಸ್ಲಾಮಿನ ದೃಷ್ಟಿಕೋನವು ಮೂಲಭೂತವಾಗಿ ಬೇರೆಯೇ ಆಗಿದೆ.

ಆರೋಗ್ಯ ಮತ್ತು ಸಾಮರ್ಥ್ಯವಿರುವಾತನು ಕೆಲಸ ಮಾಡಲೇಬೇಕು. ಬೆವರಿಳಿಸಿ ದುಡಿ
ಅವಶ್ಯಕತೆಗಳನ್ನು ಪೂರೈಸಬೇಕು. "ತನ್ನ ಕೈಗಳಿಂದ ದುಡಿದು ಸಂಪಾದಿಸಿದುದಕ್ಕಿಂ
ಉತ್ತಮವಾದ ಆಹಾರವನ್ನು ಯಾರೂ ಉಂಡಿಲ್ಲ" ಎಂದು ಪ್ರವಾದಿ(ಸ) ಹೇಳಿದ್ದಾ
ಹಾಗೆಯೇ 'ಶ್ರೀಮಂತ, ಸಾಮರ್ಥ್ಯವುಳ್ಳವ ಮತ್ತು ಆರೋಗ್ಯ ವಂತನಿಗೆ ಝಕಾತ್ ಇಲ್ಲ..
ವೆಂದೂ ಪ್ರವಾದಿಯವರು ಸ್ಪಷ್ಟ ಪಡಿಸಿದ್ದಾರೆ. ಆದರೆ ಉದ್ಯೋಗದಿಂದ ಅಗತ್ಯಗಳನ

ಪೂರೈಸುವಷ್ಟು ಆದಾಯವಿಲ್ಲದಿದ್ದರೆ ಬಲಶಾಲಿ ಅಂಗಾಂಗ ಮತ್ತು ಗಟ್ಟಿ ಮುಟ್ಟಾದ ಶರೀರವಿದ್ದರೂ ಪ್ರಯೋಜನವಿಲ್ಲ. ಆದಾಯ ನೀಡದ ಶಕ್ತಿಯು ನಗ್ನತೆ ಮುಚ್ಚಲು ಅಥವಾ ಹಸಿವು ತಣಿಸಲು ಸಹಾಯಕವಾಗಲಾರದಷ್ಟೆ. ಇಮಾಮ್ ನವವಿ ಹೇಳಿದ್ದಾರೆ: "ಓರ್ವ ಕಾರ್ಮಿಕನ ಉತ್ಪನ್ನಗಳಿಗೆ ಬಳಕೆದಾರರಿಲ್ಲದಿದ್ದರೆ, ಆತನು ಝಕಾತ್ ಸ್ವೀಕರಿಸಬಹುದು. ಯಾಕೆಂದರೆ ಆತನು ದುರ್ಬಲರಲ್ಲಿ ಸೇರುತ್ತಾನೆ."

ಮೇಲೆ ಹೇಳಿದ ವಚನದಲ್ಲಿ ಸಾಮರ್ಥ್ಯವುಳ್ಳ ಮತ್ತು ಆರೋಗ್ಯವಂತನೆಂದು ಹೇಳಲಾಗಿದ್ದರೂ ಇನ್ನೊಂದು ವಚನದಲ್ಲಿ ಸಾಮರ್ಥ್ಯವುಳ್ಳವನು ಎಂಬುದರೊಂದಿಗೆ ಆದಾಯ ವಿರುವವನೆಂದೂ ಸೇರಿಸಿ ಹೇಳಲಾಗಿದೆ. ಉಬೈದುಲ್ಲಾ ಬಿನ್ ಅದಿಯ್ಯ್ ಇಬ್ಬರನ್ನು ಉಲ್ಲೇಖಿಸಿದ್ದಾರೆ-

ಅವರು ಹೇಳಿದರು: ನಾವು ಝಕಾತ್‌ನ ಅಪೇಕ್ಷೆಯಿಂದ ಪ್ರವಾದಿಯವರ ಬಳಿ ಹೋದೆವು. ಪ್ರವಾದಿಯವರು ನಮ್ಮನ್ನೊಮ್ಮೆ ದಿಟ್ಟಿಸಿ ನೋಡಿದರು. ನಾವು ಆರೋಗ್ಯವಂತರೆಂದು ಅವರಿಗೆ ತಿಳಿಯಿತು. ಅನಂತರ ಅವರು ಹೀಗೆಂದರು: "ನೀವು ಅದನ್ನು ಅಪೇಕ್ಷಿಸುವುದಿದ್ದರೆ ನಾನು ಕೊಡುತ್ತೇನೆ. ಆದರೆ, ಶ್ರೀಮಂತ ಮತ್ತು ಆದಾಯವಿರುವ ದೈಹಿಕ ಸಾಮರ್ಥ್ಯವಿರುವವನಿಗೆ ಅದರಲ್ಲಿ ಪಾಲಿಲ್ಲ."

ಅವರ ಬಾಹ್ಯ ರೂಪವು ನಿಜಸ್ಥಿತಿಯನ್ನು ಬಿಂಬಿಸದಿರುವುದರಿಂದ ಪ್ರವಾದಿಯವರು, ನೀವು ಅಪೇಕ್ಷಿಸುವುದಿದ್ದರೆ" ಎಂದು ಹೇಳಿದ್ದರು. ಬಾಹ್ಯ ನೋಟಕ್ಕೆ ಅವರು ಆರೋಗ್ಯವಂತ ಮತ್ತು ದೃಢಕಾಯರಾಗಿದ್ದರೂ ವಾಸ್ತವದಲ್ಲಿ ಆದಾಯವಿಲ್ಲದವರೂ ಅಥವಾ ಆದಾಯವು ಅಗತ್ಯಕ್ಕಿಂತ ಕಡಿಮೆಯಿರುವವರೂ ಆಗಿರಬಹುದು. ಈ ಪ್ರವಾದಿ ವಚನದ ಆಧಾರದಲ್ಲಿ ಝಕಾತ್ ಸ್ವೀಕರಿಸುವಾತನ ನಿಜಸ್ಥಿತಿ ತಿಳಿಯದಿದ್ದರೆ, ಅದನ್ನು ನೀಡುವುದರೊಂದಿಗೆ ಝಕಾತ್ ನೀಡುವವ ಅಥವಾ ಆಡಳಿತಾಧಿಕಾರಿಯು ಶ್ರೀಮಂತನಿಗೂ ದುಡಿಯುವ ಸಾಮರ್ಥ್ಯವುಳ್ಳವರಿಗೂ ಝಕಾತಿಲ್ಲವೆಂದು ಆತನಿಗೆ ನೆನಪಿಸಬೇಕೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಅದು ಪ್ರವಾದಿಯವರ ಮಾದರಿಯಾಗಿದೆಯಷ್ಟೆ. ಆದಾಯವೆಂದರೆ ಅಗತ್ಯಕ್ಕೆ ಸಾಕಾಗುವಷ್ಟು ಆದಾಯವಾಗಿದೆ. ಅಗತ್ಯ ಪೂರೈಸದಿದ್ದರೆ ಆತನು ಝಕಾತಿಗೆ ಅರ್ಹನಾಗಿದ್ದಾನೆ. ಝಕಾತ್‌ಗೆ ಅರ್ಹನಾಗಲು ಕಿಂಚಿತ್ತೂ ಆದಾಯವಿರಬಾರದೆಂದಿಲ್ಲ. ವಿಕಲಾಂಗರು, ರೋಗಿಗಳು ಮತ್ತು ದುರ್ಬಲರಿಗೆ ಮಾತ್ರ ಝಕಾತ್ ಮೀಸಲಿಡಬೇಕೆಂಬ ವಾದವು ಸರಿಯಲ್ಲ. ಓರ್ವನ ಉದ್ಯೋಗವು ಅವನ ಘನತೆ ಮತ್ತು ಸ್ಥಿತಿಗೆ ಅನುಯೋಜ್ಯವಾಗಿಲ್ಲದಿದ್ದರೆ ಅವನನ್ನು ನಿರುದ್ಯೋಗಿಯೆಂದು ಪರಿಗಣಿಸಬಹುದೆಂದು ಇಮಾಮ್ ನವವಿ ಅಭಿಪ್ರಾಯ ಪಟ್ಟಿದ್ದಾರೆ. ಸಾಮರ್ಥ್ಯ ಮತ್ತು ಯೋಗ್ಯ ಉದ್ಯೋಗವಿದ್ದರೂ ಕೆಲಸ ಮಾಡದೆಯೇ ದಿನ ದೂಡಬಯಸುವ ಸೋಮಾರಿಗಳಿಗೆ ಮಾತ್ರ ಹದೀಸ್‌ನಲ್ಲಿ ಸೂಚಿಸಿರುವ ನಿಷೇಧವು ಅನ್ವಯವಾಗುತ್ತದೆಂದರ್ಥ.

ಒಟ್ಟಿನಲ್ಲಿ ದುಡಿಯುವ ಸಾಮರ್ಥ್ಯವಿರುವವರೆಲ್ಲರೂ ಜೀವನ ಸಂಪನ್ಮೂಲ ಸಂಪಾದನೆಗಾಗಿ ಕೆಲಸ ಮಾಡಬೇಕೆಂದು ಇಸ್ಲಾಮ್ ಆಜ್ಞಾಪಿಸುತ್ತದೆ. ಎಳೆ ಪ್ರಾಯ, ಸ್ತ್ರೀತನ,

ಮಂದ ಬುದ್ಧಿ, ಮುದಿತನ, ರೋಗ ಇತ್ಯಾದಿ ದೈಹಿಕ ದೌರ್ಬಲ್ಯಗಳಿಂದ ಉದ್ಯೋ ನಿರ್ವಹಣೆ ಅಸಾಧ್ಯವಾದರೆ ಅಥವಾ ಉದ್ಯೋಗದಿಂದ ಜೀವನಾವಶ್ಯಕತೆಗೆ ತಕ್ಕಷ್ಟು ಆದಾಯ ದೊರೆಯದಿದ್ದರೆ ಅಂಥವರು ಝಕಾತ್‌ಗೆ ಅರ್ಹರಾಗುತ್ತಾರೆ. ಇದು ಇಸ್ಲಾಮಿನ ನೀತಿಯಾಗಿದೆ ನ್ಯಾಯ, ಕರುಣೆ ಮತ್ತು ಹಿತಾಕಾಂಕ್ಷೆಯ ಸಮಂಜಸ ಸಮನ್ವಯ. 'ದುಡಿಯದವ ತಿನ್ನುವುದು ಬೇಡ' ವೆಂಬ ಲೌಕಿಕವಾದಿಗಳ ಘೋಷಣೆಯು ಮಾನವೀಯತೆ ಅಥವಾ ಮಾನವೀಯ ಸ್ವಭಾವಕ್ಕೆ ತಕ್ಕದ್ದಲ್ಲ. ಪಶುಪಕ್ಷಿಗಳು ಕೂಡಾ ತಮ್ಮಲ್ಲಿರುವ ದುರ್ಬಲರಿ ನೆರವಾಗುತ್ತವೆ. ಮಾನವನು ಅವುಗಳ ಮಟ್ಟಕ್ಕೂ ತಲಪಿಲ್ಲವೇ?

## ಸನ್ಯಾಸಿ ಮತ್ತು ವಿದ್ಯಾರ್ಥಿ

ದುಡಿದು ಜೀವನಾವಶ್ಯಕತೆಗಳನ್ನು ಪೂರೈಸಬಲ್ಲವರು ಜೀವನವಿಡೀ ಕೇವಲ ಉಪವಾ ನಮಾಝ್ ಇತ್ಯಾದಿಗಳಲ್ಲಿಯೇ ಕಳೆಯುತ್ತಲಿದ್ದರೆ ಅಂಥವರಿಗೆ ಝಕಾತ್‌ನ ಅರ್ಹತೆಯಿಲ್ಲವೆಂ ಕರ್ಮಶಾಸ್ತ್ರಜ್ಞರ ಅಭಿಪ್ರಾಯವು ಗಮನಾರ್ಹವಾಗಿದೆ. ಯಾಕೆಂದರೆ ದುಡಿಮೆ ಮತ ಭೂಮಿಯಲ್ಲಿ ಸಂಚರಿಸಿ ಜೀವನ ಸಂಪನ್ಮೂಲಗಳ ಸಂಪಾದನೆಯು ಪ್ರತಿಯೊಬ್ಬ ಕರ್ತವ್ಯವಾಗಿದೆ. ಅದಲ್ಲದೇ ಇಸ್ಲಾಮಿನಲ್ಲಿ ಸನ್ಯಾಸವಿಲ್ಲ. ಪ್ರಾಮಾಣಿಕವಾಗಿ ದೇವ ವಿಧಿಗಳನ ಪಾಲಿಸಿ ಜೀವನ ಸಂಪನ್ಮೂಲಗಳನ್ನು ಸಂಪಾದಿಸಲಿಕ್ಕಾಗಿ ದುಡಿಯುವುದೇ ಶ್ರೇಷ್ಠ ಇಬಾದ ಆಗಿದೆ.

ಆದರೆ ಉಪಯುಕ್ತ ವಿದ್ಯಾರ್ಜನೆಗಾಗಿ ಪೂರ್ಣಾವಧಿ ವಿನಿಯೋಗಿಸುವವರಿಗೆ ಅದರೊಂದಿ ಆಹಾರ ಸಂಪಾದಿಸಿಕೊಳ್ಳಲು ಕಷ್ಟವಿದೆ. ಯಾಕೆಂದರೆ ವಿದ್ಯಾರ್ಥಿಯು ಒಂದು ಸಾಮಾಜಿ ಕರ್ತವ್ಯವನ್ನು ನಿರ್ವಹಿಸುತ್ತಿದ್ದಾನೆ. ವಿದ್ಯೆಯ ಪ್ರಯೋಜನವು ಕೇವಲ ವಿದ್ಯಾರ್ಥಿ ಮಾತ್ರವಲ್ಲದೆ ಇಡೀ ಸಮುದಾಯಕ್ಕೂ ದೊರೆಯುತ್ತದೆ. ಈ ದೃಷ್ಟಿಯಿಂದ ಝಕಾತ್‌ನಿಂ ನೆರವು ಪಡೆಯುವುದು ಆತನ ಹಕ್ಕಾಗುತ್ತದೆ. ವಸ್ತುತಃ ಸಮಾಜದಿಂದ ಏನಾದರು ದೊರೆಯುವುದು ಅಗತ್ಯವಾಗಿರುವವರಿಗೂ ಸಮಾಜಕ್ಕೆ ಉಪಯುಕ್ತರಾಗುವವರಿಗೂ ಝಕಾ ನೀಡಬೇಕಾಗಿದೆಯಷ್ಟೆ. ವಿದ್ಯಾರ್ಥಿಯು ಆ ಎರಡು ವರ್ಗಗಳಲ್ಲಿಯೂ ಸೇರುತ್ತಾನೆ.

ವಿದ್ಯಾರ್ಥಿಯು ಬುದ್ಧಿವಂತ ಮತ್ತು ಉನ್ನತ ಯಶಸ್ಸು ಸಾಧಿಸಬಲ್ಲವನಾಗಿದ ಆತನಿಂದ ಮುಸ್ಲಿಮ್ ಸಮುದಾಯಕ್ಕೆ ಪ್ರಯೋಜನ ಲಭಿಸುವುದಿದ್ದರೆ ಮಾತ್ರ ಅ ಝಕಾತ್‌ಗೆ ಅರ್ಹವೆಂದು ಕೆಲವು ವಿದ್ವಾಂಸರು ಹೇಳಿದ್ದಾರೆ. ಈ ಆಧಾರದಲ್ಲಿಯೇ ಇಂತ ವಿದ್ಯಾರ್ಥಿಗಳನ್ನು ಉನ್ನತ ವ್ಯಾಸಂಗಕ್ಕಾಗಿ ಹಲವು ಆಧುನಿಕ ರಾಷ್ಟ್ರಗಳು ಸಹಾ ಸೌಲಭ್ಯಗಳನ್ನು ಒದಗಿಸಿ ದೇಶೀಯ ಮತ್ತು ಅಂತಾರಾಷ್ಟ್ರೀಯ ರಾಯಭಾರಿ ತಂಡಗಳ ಜ ಕಳುಹಿಸುತ್ತಿವೆ.

## ಫಕೀರ್ ಮತ್ತು ಮಿಸ್ಕೀನ್‌ರ ಪಾಲು

ಝಕಾತ್ ವ್ಯವಸ್ಥೆಯ ಸಮಗ್ರ ಚಿತ್ರ ಮತ್ತು ಇಸ್ಲಾಮಿನ ಬಡತನ ವಿರೋ

ಹೋರಾಟದ ವಾಸ್ತವಿಕ ಸ್ವರೂಪವನ್ನು ಗ್ರಹಿಸಲಿಕ್ಕಾಗಿ ಬಡವರ್ಗಕ್ಕೆ ಅದು ನಿರ್ಣಯಿಸಿರುವ ಪಾಲಿನ ನಿಷ್ಪತ್ತಿಯನ್ನೂ ತಿಳಿದಿರಬೇಕಾಗಿದೆ. ಅದರಿಂದ ಸಾಮಾನ್ಯ ಮುಸ್ಲಿಮ್ ಮತ್ತು ಮುಸ್ಲಿಮೇತರರ ಮನದಲ್ಲಿ ಈ ಬಗ್ಗೆ ಮೂಡಿರುವ ತಪ್ಪು ತಿಳುವಳಿಕೆ ನಿವಾರಣೆಯಾಗಬಹುದು. ಲವು ನಾಣ್ಯಗಳು, ಹಿಡಿಧಾನ್ಯ, ಸ್ವಲ್ಪ ರೊಟ್ಟಿತುಂಡು ಅಥವಾ ಕೆಲವಾರು ದಿನಗಳು ಯಾ ಂಗಳುಗಳಿಗೆ ಅಗತ್ಯವಿರುವ ಜೀವನಾನುಕೂಲತೆಗಳನ್ನು ಬಡವರಿಗೆ ನೀಡುವುದೇ ಝಕಾತ್ ಂದು ಹಲವರು ಭಾವಿಸಿದ್ದಾರೆ. ಹಾಗಿದ್ದರೆ ಝಕಾತನ್ನು ನೋವು ನಿವಾರಕ ಮಾತ್ರೆಗಳಿಗೆ ಥವಾ ರೋಗ ಕಾರಣಗಳನ್ನು ಅಳಿಸದೆ ರೋಗ ಲಕ್ಷಣಗಳಿಗೆ ತಾತ್ಕಾಲಿಕ ಶಮನ ನೀಡುವ ಷಧಗಳೊಂದಿಗೆ ಹೋಲಿಸುವುದು ಉತ್ತಮ! ಇಸ್ಲಾಮೀ ಮೌಲ್ಯಗಳು ಮತ್ತು ಕರ್ಮಶಾಸ್ತ್ರಜ್ಞರ ಭಿಪ್ರಾಯಗಳನ್ನು ಚೆನ್ನಾಗಿ ಗ್ರಹಿಸಿದರೆ, ಝಕಾತ್‌ನ ಬಗ್ಗೆ ಇಂದು ಹಲವರ ಧೋರಣೆಗಳು ಸ್ಲಾಮೀ ಶರೀಅತ್‌ಗೆ ಬದ್ಧವಾಗಿಲ್ಲವೆಂದು ವ್ಯಕ್ತವಾಗುತ್ತದೆ.

ಈ ಬಗ್ಗೆ ಇಸ್ಲಾಮಿನ ಮೂಲ ಸಿದ್ಧಾಂತದಂತೆ, ಬಡತನದ ಮೂಲೋತ್ಪಾಟನೆಗೆ ಮತ್ತು ಪುನಃ ಝಕಾತ್ ಪಡೆಯುವ ಸ್ಥಿತಿಯ ನಿವಾರಣೆಗೆ ಸಾಕಷ್ಟು ಹಣವನ್ನು ಝಕಾತ್ ಆಗಿ ಡಬೇಕೆಂಬ ಅಭಿಪ್ರಾಯವೇ ಅತ್ಯಂತ ಸೂಕ್ತವಾಗಿದೆ. ಇಮಾಮ್ ನವವಿಯವರು ತನ್ನ ಲ್ ಮಜ್ಮೂಅ್ ಗ್ರಂಥದಲ್ಲಿ ಹೀಗೆ ಹೇಳಿದ್ದಾರೆ:

ಇನ್ನೊಂದು ಸಮಸ್ಯೆಯು ಫಕೀರ್ ಮತ್ತು ಮಿಸ್ಕೀನ್‌ರಿಗೆ ನೀಡಬೇಕಾದ ಪಾಲಿಗೆ ಂಬಂಧಿಸಿದೆ. ಉಭಯತ್ರರಿಗೂ ಪರಾವಲಂಬನೆಯನ್ನು ತೊರೆದು ಸ್ವಾವಲಂಬಿಯಾಗಲು ೇಕಾದಷ್ಟು ಝಕಾತ್ ನೀಡಬೇಕೆಂದು ಇರಾಖಿ ಮತ್ತು ಖುರಾಸಾನಿಯರಾದ ನಮ್ಮ ಹೆಚ್ಚಿನ ಂಗಾತಿಗಳು ಹೇಳುತ್ತಾರೆ. ಅದರಿಂದಾಗಿ ಅವರು ಶಾಶ್ವತವಾಗಿ ಸ್ವಾವಲಂಬಿಗಳಾಗಬಹುದು. ಮಾಮ್ ಶಾಫಿಈಯವರ ಅಭಿಪ್ರಾಯವೂ ಅದೇ ಆಗಿದೆ. ಅವರ ಸಂಗಾತಿಗಳಿಗೆ ಬೈಸಬಿನ್ ಮಖಾರಿಕಿಲ್ ಹಿಲಾಲ್ ವರದಿ ಮಾಡಿದ ಹದೀಸೇ ಆಧಾರವಾಗಿದೆ. ಕುಬೈಸ್ ರದಿ ಮಾಡಿದ್ದಾರೆ- ಅಲ್ಲಾಹನ ಪ್ರವಾದಿ ಹೇಳಿದರು: "ಮೂರು ವರ್ಗಗಳಿಗೆ ಅನ್ಯರ ನೆರವು ಡೆಯುವ ಅನುಮತಿಯಿದೆ-

1. ಬೇರೊಬ್ಬರ ಸಾಲದ ಹೊಣೆಯನ್ನು ವಹಿಸಿದವರು, ಸಾಲ ಸಂದಾಯ ಮಾಡುವ ನಕ ಅವರು ಅನ್ಯರ ನೆರವು ಪಡೆಯಬಹುದು.

2. ಯಾವುದಾದರೂ ದುರಂತದಿಂದ ಸಂಪೂರ್ಣ ಸಂಪತ್ತನ್ನು ಕಳೆದುಕೊಂಡವನು, ೀವನದಲ್ಲಿ ಸಾಮಾನ್ಯಸ್ಥಿತಿ ಮರಳುವ ತನಕ ಆತನಿಗೂ ಅನ್ಯರಿಂದ ಸಹಾಯ ಪಡೆಯಬಹುದು.

3. ಸಮಾಜದ ಹೊಣೆಗಾರ ವ್ಯಕ್ತಿಗಳು, 'ದಟ್ಟ ದರಿದ್ರ'ರೆಂದು ಸಾರಿದ ಮಂದಿ ಸ್ವಾವಲಂಬಿಗಳಾಗುವ ತನಕ ಅನ್ಯರಿಂದ ಸಹಾಯ ಯಾಚಿಸಬಹುದಾಗಿದೆ.

ಈ ಮೂರು ಸ್ಥಿತಿಗಳಲ್ಲಿ ಹೊರತು ಇತರರಿಂದ ಯಾಚಿಸುವುದು ತಪ್ಪು. ಕುಬೈಸ್! ಂಥವರು ಸೇವಿಸುವ ಆಹಾರವು ಅಕ್ರಮ ಸಂಪಾದನೆಯಾಗಿದೆ." ಸ್ವಂತ ಬೇಡಿಕೆಗಳನ್ನು

ಪೂರೈಸುವ ತನಕ ಮಾತ್ರ ಅನ್ಯರಿಂದ ಸಹಾಯ ಪಡೆಯಲು ಪ್ರವಾದಿಯವರು ಒಪ್ಪಿ ನೀಡಿರುವರೆಂದು ನಮ್ಮ ಸಂಗಾತಿಗಳು ಹೇಳಿದ್ದಾರೆ. ಇದು ನಮ್ಮ ಹೇಳಿಕೆಗೆ ಸರಿಹೊಂದುತ್ತದ ಅವರು ಹೇಳಿದರು: "ಯಾವುದಾದರೂ ಉದ್ಯೋಗ ಮಾಡಿ ಜೀವಿಸುವವರಾಗಿದ್ದರೆ, ಅವರಿ ಉದ್ಯೋಗ ಪ್ರಾಪ್ತಿ ಅಥವಾ ಉದ್ಯೋಗ ಸಲಕರಣೆಗಳಿಗೆ ಬೇಕಾಗುವಷ್ಟು ಹಣವನ್ನು ಕಡಿಮೆಯಿದ್ದರೂ ಅಧಿಕವಿದ್ದರೂ ನೀಡಬೇಕು. ಸ್ವಂತ ಜೀವನಾವಶ್ಯಕತೆಗಳನ ಪೂರೈಸಬಹುದಾದಷ್ಟು ಲಾಭ ಗಳಿಸುವ ಬಂಡವಾಳ ಹೂಡಲು ಸಾಧ್ಯವಾಗಬೇಕು. ಉದ್ಯೋ ಊರು, ಕಾಲ, ವ್ಯಕ್ತಿ ಇತ್ಯಾದಿಗಳನ್ವಯ ಮೊತ್ತದಲ್ಲಿಯೂ ವ್ಯತ್ಯಾಸವಿರಬೇಕು." ನಮ ಸಂಗಾತಿಗಳ ಒಂದು ತಂಡವು ಇದನ್ನು ಸ್ವೀಕರಿಸಿದೆ. ಅವರು ಹೇಳಿದರು: "ಕ ವ್ಯಾಪಾರಿಯಾಗಿದ್ದರೆ ಅವರಿಗೆ ಐದು-ಹತ್ತು ದಿರ್ಹಮ್ ನೀಡಿದರೆ ಸಾಕು. ರತ್ನ ವ್ಯಾಪಾರಿಯಾಗಿದ್ದ ಸಹಸ್ರಾರು ದಿರ್ಹಮ್ ನೀಡಬೇಕಾದೀತು- ಅದಕ್ಕಿಂತ ಕಡಿಮೆ ಹಣದಲ್ಲಿ ಸ್ವಾವಲಂಬಿಯಾಗ ಸಾಧ್ಯವಿಲ್ಲದಿದ್ದರೆ. ರೊಟ್ಟಿ ವ್ಯಾಪಾರಿ ಅಥವಾ ಸುಗಂಧ ದ್ರವ್ಯ ವ್ಯಾಪಾರಿಯಾಗಿದ್ದರೆ- ಅದ ತಕ್ಕುದಾದ ಮೊತ್ತ ನೀಡಬೇಕು. ದರ್ಜಿ, ಬಡಗಿ, ಧೋಬಿ, ಮಾಂಸ ವ್ಯಾಪಾರಿ ಅಥವ ಅಂತಹ ಇತರ ಉದ್ಯೋಗಿಗಳಿಗೆ ಅವಶ್ಯಕ ಉಪಕರಣಗಳನ್ನು ಖರೀದಿಸುವಷ್ಟು ನೀಡಬೇಕ ಹೊಲ ವಿದ್ದವನಾಗಿದ್ದರೆ ಅವಶ್ಯಕ ಧಾನ್ಯ ಉತ್ಪಾದಿಸಬಹುದಾದ ಜಮೀನು ಖರೀದಿ ಕೊಡಬೇಕು."

ನಮ್ಮ ಸಂಗಾತಿಗಳು ಹೇಳುತ್ತಾರೆ: "ಯಾವುದೇ ಉದ್ಯೋಗ ತಿಳಿಯದವರಿಗೆ ಇ ಜೀವನಕ್ಕೆ ಅಗತ್ಯವಿರುವಷ್ಟು ಮೊತ್ತವನ್ನು ಆಯಾ ದೇಶದ ಜೀವನ ಮಟ್ಟಕ್ಕೆ ತಕ್ಕಷ ನೀಡಬೇಕು." ಕೇವಲ ಒಂದು ವರ್ಷಕ್ಕೆ ಬೇಕಾದಷ್ಟು ಹಣವನ್ನು ಲೆಕ್ಕ ಮಾಡಿ ಕೊಡಬೇಕಾಗಿಲ್ಲ ಅವಶ್ಯಕ ಆದಾಯವು ಸದಾ ದೊರೆಯುವ ಒಂದು ತೋಟ ಅಥವಾ ಬೇರೇನಾದರ ಖರೀದಿಸುವ ಮೊತ್ತವೆಂದು ಇದನ್ನು ಅವರು ವಿವರಿಸಿದ್ದರು.

(ಅಲ್ ಮುಹದ್ದಬ್ ವಶರ್ಹು - ಅಲ್ ಮಜ್ಮೂಅ್: ಭಾಗ 6, ಪು: 193-19

ಇದು ಇಮಾಮ್ ಶಾಫಿಈ ಮತ್ತು ಅವರ ಸಂಗಾತಿಗಳ ಅಭಿಪ್ರಾಯವಾಗಿದೆ. ವಿಷಯವು ಇದೇ ರೀತಿಯಲ್ಲಿ ಇಮಾಮ್ ಅಹ್ಮದ್‌ರಿಂದಲೂ ಉದ್ಧರಿಸಲ್ಪಟ್ಟಿದೆ. ಶಾಶ್ವತವಾ ಜೀವನಾವಶ್ಯಕತೆಗಳನ್ನು ಪೂರೈಸಬಹುದಾದ ಉದ್ಯೋಗ ನಿರ್ವಹಣೆಗಾಗಿ ಸರಕು ಯ ಉಪಕರಣಗಳನ್ನು ಖರೀದಿಸಬಹುದಾದ ಮೊತ್ತವನ್ನು ಝಕಾತಾಗಿ ನೀಡಬೇಕೆಂದು ಅವ ವಿಧಿಸಿದ್ದರು.

ಈ ಮೇಲಿನ ವಿವರಣೆಗಳು ತನ್ನ ಸ್ವಂತ ಅಭಿಪ್ರಾಯವಲ್ಲ. ಇದು ಇಸ್ಲಾಮಿನ ಮೂ ಸಿದ್ಧಾಂತ ಮತ್ತು ಸುಸ್ಪಷ್ಟ ನೀತಿಗಳ ಆಧಾರದಲ್ಲಿ ಇಸ್ಲಾಮೀ ವಿದ್ವಾಂಸರು ಮತ್ತು ಕಮ ಶಾಸ್ತ್ರಜ್ಞರು ಪ್ರಕಟಿಸಿದ ವಿಷಯಗಳಾಗಿವೆ. ಬಡತನ ನಿರ್ಮೂಲನಕ್ಕಾಗಿ ಮತ್ತು ಝಕಾ ಬಳಸಿ ಬಡವರನ್ನು ಸ್ವಾವಲಂಬಿಗೊಳಿಸಲಿಕ್ಕಾಗಿ ಇಸ್ಲಾಮ್ ತೋರಿಸಿರುವ ಕ್ರಿಯಾ ಯೋಜನ ಬಗ್ಗೆ ಸೂರ್ಯಪ್ರಕಾಶಕ್ಕಿಂತ ನಿಚ್ಚಳವಾಗಿ ಅವುಗಳನ್ನು ಅವರು ದಾಖಲಿಸಿದ್ದಾರೆ.

## ನೀವು ನೀಡಿರಿ; ಅವರು ಸ್ವಾವಲಂಬಿಗಳಾಗಲಿ!

ಈ ಅಭಿಪ್ರಾಯಗಳು ಹ. ಉಮರ್‌ರ ಕಾರ್ಯಕ್ರಮಗಳಿಗೆ ಬದ್ಧವಾಗಿದೆ. ಅವರ ಆಡಳಿತವು ಈ ತತ್ತ್ವದಲ್ಲಿ ಆಧಾರಿತವಾಗಿತ್ತೆಂದು ನಮಗೆ ತಿಳಿದಿದೆ. "ನೀವು ನೀಡಿರಿ- ಅವರು ಸ್ವಾವಲಂಬಿಗಳಾಗುತ್ತಾರೆ" ಎಂದು ಅವರು ಸಾರಿದ್ದರು. ಒಂದು ಹಿಡಿ ಧಾನ್ಯ ಅಥವಾ ಕೆಲವು ನಾಣ್ಯಗಳನ್ನು ನೀಡಿ ಬಡವನ ತಾತ್ಕಾಲಿಕ ಅಗತ್ಯಗಳನ್ನು ಪೂರೈಸುವ ಬದಲಾಗಿ ಆತನನ್ನು ಸ್ವಾವಲಂಬಿಯಾಗಿ ಮಾಡುವುದೇ ಉಮರ್‌ರ ಧ್ಯೇಯವಾಗಿತ್ತು. ಓರ್ವರು ಉಮರ್‌ರ ಬಳಿ ಬಂದು ತಮ್ಮ ಸಂಕಷ್ಟಗಳನ್ನು ತೋಡಿಕೊಂಡರು. ಅವರು ಮೂರು ಒಂಟೆಗಳನ್ನು ನೀಡಿದರು. ಆ ಕಾಲದಲ್ಲಿ ಒಂಟೆಯು ಬಹಳ ಉಪಯುಕ್ತ ಮತ್ತು ಬೆಲೆಬಾಳುವ ಸಂಪತ್ತಾಗಿತ್ತು. ಒಬ್ಬರಿಗೆ ನೂರು ಒಂಟೆಗಳೇ ದೊರೆತರೂ ನೀವು ಅವರಿಗೆ ಪುನಃ ಝಕಾತ್ ನೀಡಿರಿ, ಎಂದು ಝಕಾತ್ ನಿರ್ವಾಹಕರಿಗೆ ಅವರು ಆದೇಶಿಸಿದ್ದರು. ಬಡವರ ಬಗೆಗಿನ ತಮ್ಮ ಧೋರಣೆಯನ್ನು ಅವರು ಹೀಗೆ ಸ್ಪಷ್ಟಪಡಿಸಿದ್ದರು: "ಒಬ್ಬರಿಗೆ ನೂರು ಒಂಟೆಗಳು ದೊರೆತರೂ ನಾನು ಅವರಿಗೆ ಪುನಃ ಝಕಾತ್ ನೀಡುತ್ತೇನೆ."

ಖ್ಯಾತ ಕರ್ಮ ಶಾಸ್ತ್ರಜ್ಞರಾದ ಅತ್ವಾಲ್ ಹೇಳುತ್ತಾರೆ: "ಓರ್ವರು ತಮ್ಮ ಸಂಪತ್ತಿನ ಝಕಾತನ್ನು ಸಂಪೂರ್ಣವಾಗಿ ಒಂದೇ ಕುಟುಂಬಕ್ಕೆ ನೀಡುವ ಮೂಲಕ ಆ ಕುಟುಂಬದ ಬೇಡಿಕೆ ಈಡೇರುವಂತಾಗಬೇಕು. ಅದನ್ನೇ ನಾನು ಇಷ್ಟಪಡುತ್ತೇನೆ". ಇಸ್ಲಾಮಿನ ಆರ್ಥಿಕ ಕರ್ಮಶಾಸ್ತ್ರದ ಘನ ವಿದ್ವಾಂಸರಾದ ಅಬೂ ಉಬೈದ ಕಾಸಿಮಿಬ್ನಿ ಸಲಾಮ್‌ರು ತಮ್ಮ ಪ್ರಖ್ಯಾತ 'ಅಲ್ ಅಮ್ವಾಲ್' ಎಂಬ ಗ್ರಂಥದಲ್ಲಿ ಈ ಅಭಿಪ್ರಾಯವನ್ನು ಪ್ರಾಮಾಣಿಕವೆಂದು ತೀರ್ಪು ನೀಡಿದ್ದಾರೆ.

## ಎರಡನೇಯ ದೃಷ್ಟಿಕೋನ

ನೀಡ ಬೇಕಾದ ಝಕಾತ್‌ನ ಪ್ರಮಾಣದ ಬಗೆಗಿನ ದ್ವಿತೀಯ ದೃಷ್ಟಿಕೋನದಂತೆ ಓರ್ವ ವ್ಯಕ್ತಿ ಮತ್ತು ಆತನ ಕುಟುಂಬಕ್ಕೆ ಒಂದು ವರ್ಷದ ಅವಶ್ಯಕತೆಗೆ ಸಾಕಾಗುವಷ್ಟು ಮೊತ್ತವನ್ನು ನೀಡಿದರೆ ಸಾಕು. ಮಾಲಿಕಿ ಮದ್ಹಬ್‌ನವರೂ ಹಂಬಲಿಗಳಲ್ಲಿ ಹೆಚ್ಚಿನವರೂ ಇತರ ಕೆಲವು ಕರ್ಮ ಶಾಸ್ತ್ರಜ್ಞರೂ ಇದರ ವಕ್ತಾರರಾಗಿದ್ದಾರೆ. ಅವರ ಅಭಿಪ್ರಾಯದಂತೆ ಇಡೀ ಜೀವನ ಕಾಲದಲ್ಲಿ ಸ್ವಾವಲಂಬಿಗಳಾಗಲಿಕ್ಕೆ ಬೇಕಾದಷ್ಟು ಮೊತ್ತವನ್ನು ನೀಡಬೇಕಾಗಿಲ್ಲ. ಹಾಗೆಯೇ ಒಂದು ವರ್ಷಕ್ಕೆ ಸಾಲದಷ್ಟು ಮೊತ್ತವನ್ನು ನೀಡಬಾರದು. ಯಾಕೆಂದರೆ ಸಾಮಾನ್ಯವಾಗಿ ಎಲ್ಲರೂ ಒಂದು ವರ್ಷಕ್ಕೆ ಬೇಕಾಗುವಷ್ಟು ದಾಸ್ತಾನು ಮಾಡಬಯಸುತ್ತಾರೆ. ಇದಕ್ಕೆ ಪ್ರವಾದಿಯವರಲ್ಲಿ ಮಾದರಿಯಿದೆ. ಅವರು ತಮ್ಮ ಕುಟುಂಬಕ್ಕಾಗಿ ಒಂದು ವರ್ಷಕ್ಕೆ ಬೇಕಾದಷ್ಟು ಆಹಾರ ವಸ್ತುಗಳನ್ನು ಮಾತ್ರ ಶೇಖರಿಸುತ್ತಿದ್ದರು. ಅದಲ್ಲದೇ, ಝಕಾತ್ ವಾರ್ಷಿಕ ಆದಾಯ ಮಾರ್ಗವಾಗಿದೆ. ಅದನ್ನು ಪ್ರತಿವರ್ಷ ಸಂಗ್ರಹಿಸಿ ಆಯಾ ವರ್ಷ ವಿತರಣೆ ಮಾಡಬೇಕಾಗಿದೆ. ಆದ್ದರಿಂದ ಇಡೀ ಜೀವನಕ್ಕೆ ಬೇಕಾಗುವಷ್ಟನ್ನು ಒಮ್ಮೆಲೆ ನೀಡಬೇಕಾಗಿಲ್ಲ.

ಈ ದೃಷ್ಟಿಕೋನವಿರಿಸುವವರು, ಒಂದು ವರ್ಷದ ಪಾಲಿಗೆ ಮಿತಿ ನಿರ್ಧರಿಸಬೇಕಾಗಿಲ್ಲ. ಓವ
ಬಡವನಿಗೆ ಒಂದು ವರ್ಷಕ್ಕೆ ಅಗತ್ಯವಿರುವಷ್ಟು ಮಾತ್ರ ನೀಡಬೇಕು ಎಂದು ಹೇಳುತ್ತಾ
ಅದೇ ಹೆಚ್ಚು ಸೂಕ್ತವಾಗಿದೆ. ಓರ್ವ ಬಡವನಿಗೆ ನೀಡುವ ವಾರ್ಷಿಕ ಹಣ, ಧಾನ್ಯ ಅಥ
ಜಾನುವಾರುಗಳು ಝಕಾತ್ ಕಡ್ಡಾಯವಾಗುವ ಮೊತ್ತಕ್ಕಿಂತ ಅರ್ಧವಾದರೂ ನೀಡಲೇಬೇಕ
ಆದ್ದರಿಂದ ಬಡವನು ಶ್ರೀಮಂತನಾಗಿ ಬಿಟ್ಟರೂ ಸರಿಯೆ. ಯಾಕೆಂದರೆ ಝಕಾತ್ ಪಡೆಯು
ಸಂದರ್ಭದಲ್ಲಿ ಆತನು ಅದಕ್ಕೆ ಅರ್ಹನಾದ ಓರ್ವ ಬಡವನಾಗಿದ್ದನಷ್ಟೆ.

## ವಿವಾಹವೂ ಅವಶ್ಯಕತೆ

ಮಾನವನ ಬೇಡಿಕೆಗಳು ಕೇವಲ ಆಹಾರ ಪಾನೀಯ, ಬಟ್ಟೆ ಬರೆಗಳಿಗೆ ಸೀಮಿತವಲ
ಇಸ್ಲಾಮೀ ವಿದ್ವಾಂಸರು ಈ ವಿಷಯವನ್ನು ಗಮನಿಸಿರುವುದು ಸ್ವಾಗತಾರ್ಹ. ಭೂಮಿಯ
ಸಂರಕ್ಷಿಸಲ್ಪಟ್ಟು ಅದರಲ್ಲಿ ಮಾನವ ಕುಲವು ನೆಲೆ ನಿಲ್ಲಬೇಕೆಂದು ಅಲ್ಲಾಹನು ಬಯಸಿದ್ದಾ
ಈ ಬಯಕೆಯ ಈಡೇರಿಕೆಗಾಗಿ ಅಲ್ಲಾಹನು ಮಾನವರಲ್ಲಿ ಕೆಲವು ಜನ್ಮಸಿದ್ಧ ಭಾವನೆ ಮ
ಸಹಜ ಪ್ರಜ್ಞೆಯನ್ನು ನಿಕ್ಷೇಪಿಸಿದ್ದಾನೆ. ಅವುಗಳಲ್ಲಿ ಲೈಂಗಿಕ ಅವಶ್ಯಕತೆಯೂ ಸೇರಿದೆ.
ಸಹಜ ಗುಣಗಳನ್ನು ಇಸ್ಲಾಮ್ ಧರ್ಮವು ದಮನಿಸುವ ಬದಲಾಗಿ ದೇವಾದೇಶದನ್ವ
ಸಾಗಬಲ್ಲ ರೀತಿಯಲ್ಲಿ ಅವುಗಳನ್ನು ನಿಯಂತ್ರಿಸಿ ಶಿಸ್ತು ಬದ್ಧಗೊಳಿಸಿದೆ. ಈ ಮಾನ
ಸಹಜವಾದ ಕಾಮನೆಗಳನ್ನು ಅಳಿಸುವ ಬ್ರಹ್ಮಚರ್ಯೆ, ನಪುಂಸಕೀಕರಣ ಇತ್ಯಾದಿ ಎ
ಕಾರ್ಯಗಳನ್ನೂ ಅದು ನಿಷಿದ್ಧವೆಂದು ಪರಿಗಣಿಸಿದೆ. ಸಾಮರ್ಥ್ಯ ವಿರುವವರೆಲ್ಲರ
ವಿವಾಹವಾಗಬೇಕೆಂದು ಅದು ಆಜ್ಞಾಪಿಸುತ್ತದೆ. ಈ ಹಿನ್ನೆಲೆಯಲ್ಲಿ ವಿವಾಹವಾಗ ಬಯಸಿದರ
ಬಡತನದಿಂದಾಗಿ ಅದನ್ನು ನಿರ್ವಹಿಸಲಾಗದವರಿಗೆ ನೆರವು ನೀಡುವುದನ್ನು ಇಸ್ಲಾಮ್ ನೈ
ಹೊಣೆಯೆಂದು ನಿರ್ಧರಿಸುವುದರಲ್ಲಿ ಅಚ್ಚರಿಯಿಲ್ಲ. ಆದ್ದರಿಂದಲೇ ವಿವಾಹದ ಅವಶ್ಯಕತೆಯಿರು
ಓರ್ವ ಬಡವನಿಗೆ ವಿವಾಹಕ್ಕೆ ಬೇಕಾದಷ್ಟು ಪಾಲು ದೊರೆತರೆ ಮಾತ್ರ ಆತನ ಜೀವನಾವಶ್ಯ
ಸಂಪೂರ್ಣವಾಗಿ ಈಡೇರುವುದೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಹ. ಉಮರ್(
ಅವರು ತಮ್ಮ ಪುತ್ರ ಆಸಿಮ್‌ನ ವಿವಾಹ ಮಾಡಿಸಿ ಅವರ ಖರ್ಚಿಗೆ ಒಂದು ತಿಂಗ
ಬೇಕಾಗುವ ಹಣವನ್ನು ಸರಕಾರೀ ಖಜಾನೆಯಿಂದ ನೀಡಿದರೆಂದು ಅಬೂ ಉಬೈದ ವರ
ಮಾಡಿದ್ದಾರೆ. ಉಮರ್ ಬಿನ್ ಅಬ್ದುಲ್ ಅಝೀಝ್‌ರಾದರೋ ಬಡವರು, ಸಾಲಗ್ರಸ್ತ
ಅನಾಥರು, ವಿವಾಹವಾಗಬಯಸುವವರು ಎಂಬೀ ವರ್ಗವನ್ನು ಪ್ರತ್ಯೇಕವಾಗಿ ಕ
ಜೀವನಾನುಕೂಲತೆಗಳನ್ನು ಸ್ವಯಂ ಸಂಪಾದಿಸಬಲ್ಲಷ್ಟು ಹಣವನ್ನು ನೀಡಿದ್ದರು. ವಿವಾ
ವೆಚ್ಚವನ್ನು ನೀಡಬೇಕೆಂಬುದಕ್ಕೆ ಅಬೂ ಹುರೈರಾ ವರದಿ ಮಾಡಿದ ಒಂದು ಹದೀ
ಆಧಾರವಾಗಿದೆ-

ಓರ್ವರು ಪ್ರವಾದಿಯವರ ಬಳಿ ಬಂದು ಹೇಳಿದರು: "ನಾನು ಓರ್ವ ಅನ್ಸಾ

ಮಹಿಳೆಯನ್ನು ವಿವಾಹವಾಗಿದ್ದೇನೆ."ಮಹ್ರ್ ಎಷ್ಟು? "ಪ್ರವಾದಿ(ಸ) ವಿಚಾರಿಸಿದರು. 'ನಾಲ್ಕು ಅವಾಕ್[1]' ಎಂದು ಅವರು ಉತ್ತರಿಸಿದರು. "ನಾಲ್ಕು ಅವಾಕ್‌ಗಳೇ? ನೀನು ಈ ಕಣಿವೆಯಿಂದ ಬೆಳ್ಳಿಯನ್ನು ತೋಡಿ ತೆಗೆದಂತಿದೆಯಲ್ಲಾ. ಅಷ್ಟು ಮೊತ್ತ ನನ್ನ ಬಳಿಯಿಲ್ಲ. ಆದರೆ, ಅದನ್ನು ಸಂಪಾದಿಸಲಿಕ್ಕಾಗಿ ಒಂದು ತಂಡದ ಜತೆ ನಿನ್ನನ್ನು ಕಳುಹಿಸಲು ನಾನು ಪ್ರಯತ್ನಿಸುತ್ತೇನೆ."

(ನೈಲುಲ್ ಔತಾರ್: ಭಾಗ - 6, ಪುಟ: 316)

ವಿವಾಹಾಪೇಕ್ಷಿತರಿಗೆ ಪ್ರವಾದಿಯವರು ಏನಾದರೂ ನೀಡುತ್ತಿದ್ದರೆಂದು ಈ ಘಟನೆಯಿಂದ ವ್ಯಕ್ತವಾಗುತ್ತದೆ. ಆದ್ದರಿಂದಲೇ ನಿನಗೆ ಕೊಡುವಷ್ಟು ನನ್ನ ಬಳಿ ಇಲ್ಲ, ಎಂದು ಪ್ರವಾದಿಯವರು ಹೇಳಿದ್ದರು. ಸಮಸ್ಯೆಯ ಪರಿಹಾರಕ್ಕಾಗಿ ಬೇರೊಂದು ಮಾರ್ಗವನ್ನೂ ಸೂಚಿಸಿದರು.

## ಶೈಕ್ಷಣಿಕ ಗ್ರಂಥಗಳು

ಇಸ್ಲಾಮ್ ಶಿಕ್ಷಣವನ್ನು ಗೌರವಿಸುತ್ತದೆ. ಜ್ಞಾನಾರ್ಜನೆಯ ಕರೆ ನೀಡುತ್ತದೆ. ವಿದ್ವಾಂಸರಿಗೆ ಉನ್ನತ ಸ್ಥಾನ ನೀಡುತ್ತದೆ. ವಿದ್ಯೆಯನ್ನು ಸತ್ಯವಿಶ್ವಾಸದ ಕೀಲಿಕೈ ಮತ್ತು ಸತ್ಕರ್ಮಗಳ ಮೂಲವೆಂದು ಪರಿಗಣಿಸುತ್ತದೆ. ಕುರುಡು ಅನುಕರಣೆ ಮತ್ತು ಮೂಢ ಆರಾಧನೆಗಳಿಗೆ ಅದು ಹೆಚ್ಚು ಪ್ರಾಮುಖ್ಯ ನೀಡುವುದಿಲ್ಲ. ಕುರ್‌ಆನ್ ಪ್ರಶ್ನಿಸುತ್ತದೆ:

"ಜ್ಞಾನಿಯೂ ಅಜ್ಞಾನಿಯೂ ಸಮಾನರಾಗಬಲ್ಲರೇ?" (ಅಝ್ಝುಮರ್:9)

ಜ್ಞಾನಿ ಮತ್ತು ಅಜ್ಞಾನಿಯ ಹಾಗೂ ತಿಳುವಳಿಕೆ ಮತ್ತು ಅಜ್ಞಾನಗಳ ಅಂತರವನ್ನು ಕುರ್‌ಆನ್ ಹೀಗೆ ಚಿತ್ರೀಕರಿಸಿದೆ:

"ಕಣ್ಣು ಕಾಣಿಸುವವನೂ ಕಾಣಿಸದವನೂ ಸಮಾನರಾಗಲಾರರು. ಕತ್ತಲೆ ಮತ್ತು ಬೆಳಕು ಸಮಾನವಾಗಲಾರದು." (ಫಾತಿರ್: 19, 120)

ಪ್ರವಾದಿ ಹೇಳಿದ್ದಾರೆ:

"ವಿದ್ಯಾರ್ಜನೆಯು ಪ್ರತಿಯೊಬ್ಬ ಮುಸ್ಲಿಮನಿಗೆ ಕಡ್ಡಾಯವಾಗಿದೆ."

ಶಿಕ್ಷಣವು ಧಾರ್ಮಿಕ ತಿಳುವಳಿಕೆಗಳಿಗೆ ಸೀಮಿತವಲ್ಲ. ಉಪಯುಕ್ತವಾದ ಎಲ್ಲ ತಿಳುವಳಿಕೆಗಳೂ ಅದರಲ್ಲಿ ಸೇರಿವೆ. ಅವುಗಳ ಅಭ್ಯಾಸವು ಸಾಮಾಜಿಕ ಹೊಣೆಗಾರಿಕೆಯಾಗಿದೆ. ಇಮಾಮ್ ಗಝ್ಝಾಲಿ, ಶಾತಿಬಿ ಮುಂತಾದ ವಿದ್ವಾಂಸರೆಲ್ಲರೂ ಈ ವಾಸ್ತವಿಕತೆಯನ್ನು

---

1. ಅವಾಕ್ ಎಂಬುದು ಊಕಿಯದ ಬಹುವಚನ. ಅಂದು ಅದಕ್ಕೆ 40 ದಿರ್ಹಮ್ ಬೆಲೆಯಿತ್ತು. ಮಹ್ರ್ ನೀಡಲು ಪರರ ಸಹಾಯ ಅಗತ್ಯವಿರುವ ಈತನು ನಿರ್ಣಯಿಸಿದ ಮಹ್ರ್‌ನ ಮೊತ್ತ ಅಧಿಕವಾಯಿತೆಂದು ಸೂಚಿಸಲಾಗಿದೆ.

ದೃಢೀಕರಿಸಿದ್ದಾರೆ. ವಿದ್ವಾಂಸರು ಝಕಾತ್‌ನ ಹಕ್ಕುಗಳನ್ನು ನಿರ್ಣಯಿಸುವಾಗ, ಉದ್ಯೋಗ ಮಾಡದೆ ಇಡೀ ದಿನ ಆರಾಧನೆಗಳಲ್ಲಿಯೇ ತಲ್ಲೀನವಾಗಿರುವವರಿಗೆ ಅದನ್ನು ನಿರಾಕರಿಸಿ, ಸಂಪೂರ್ಣ ಸಮಯವನ್ನು ಜ್ಞಾನಾರ್ಜನೆಯಲ್ಲಿ ವ್ಯಯಿಸುವವರಿಗೆ ಅನುಮತಿಸಿರುವುದನ್ನು ನಾವು ನೋಡಿದೆವು. ಇದರಲ್ಲಿ ಅಚ್ಚರಿಯೇನಿಲ್ಲ. ಇಸ್ಲಾಮಿನ ಆರಾಧನೆಗಳಿಗೆ ವಿದ್ಯಾರ್ಜನೆಯಂತೆ ಸಂಪೂರ್ಣ ಸಮಯವನ್ನು ವಿನಿಯೋಗಿಸಬೇಕಾಗಿಲ್ಲ. ಆರಾಧನೆಯ ಲಾಭವು ಆರಾಧಕನಿಗೆ ಸೀಮಿತವಾಗಿದೆ. ಆದರೆ ವಿದ್ಯೆಯ ಲಾಭವು ಇಡೀ ಸಮುದಾಯಕ್ಕೆ ದೊರೆಯುತ್ತದೆ. "ಆಧ್ಯಾತ್ಮಿಕ ಮತ್ತು ಲೌಕಿಕ ಸಾಧನೆಗಳಿಗೆ ಅಗತ್ಯವಿರುವ ಶೈಕ್ಷಣಿಕ ಗ್ರಂಥಗಳ ಖರೀದಿಗೆ ಝಕಾತ್ ಪಡೆಯುವ ಅರ್ಹತೆ ಬಡವನಿಗಿದೆ"ಯೆಂದೂ ಕರ್ಮಶಾಸ್ತ್ರಜ್ಞರು ಅಭಿಪ್ರಾಯ ಪಟ್ಟಿದ್ದಾರೆ.

## ಯಾವುದು ಅಂಗೀಕಾರಾರ್ಹ

ಬಡವನಿಗೆ ಜೀವನ ಸಂಪನ್ಮೂಲಗಳನ್ನು ನಿರಂತರ ಲಭ್ಯಗೊಳಿಸುವ ಯಾವುದಾದರೂ ಉದ್ಯೋಗಕ್ಕೆ ಬೇಕಾದಷ್ಟು ಹಣವನ್ನು ಝಕಾತ್ ಆಗಿ ನೀಡಬೇಕು ಅಥವಾ ಒಂದು ವರ್ಷಕ್ಕೆ ಬೇಕಾದಷ್ಟು ಜೀವನ ಸಾಮಾಗ್ರಿಗಳನ್ನು ಒದಗಿಸಿದರೆ ಸಾಕೆಂಬ ಎರಡು ಅಭಿಪ್ರಾಯಗಳನ್ನು ನಾವು ನೋಡಿದೆವು. ಇದರಲ್ಲಿಯಾವುದು ಅಂಗೀಕಾರಾರ್ಹ. ಉಭಯತ್ರರಿಗೂ ಸಮರ್ಥನೆಗಳಿವೆ. ಝಕಾತ್‌ನ ವ್ಯವಹಾರವನ್ನು ಸರಕಾರವೇ ನಿರ್ವಹಿಸಬೇಕೆನ್ನುವಾಗ, ಯಾವ ಕ್ರಮವು ಹೆಚ್ಚು ಅಂಗೀಕಾರಾರ್ಹವೆಂದು ನಿರ್ಣಯಿಸುವುದು ಅತ್ಯಗತ್ಯವಾಗಿದೆ. ಆದರೆ, ನನ್ನ ಅಭಿಪ್ರಾಯದಂತೆ ಅವೆರಡಕ್ಕೂ ಸ್ವಂತ ಆಯಾಮಗಳಿವೆ.

ಬಡವರು ಮತ್ತು ನಿರ್ಗತಿಕರಲ್ಲಿಯೂ ಎರಡು ರೀತಿಯವರಿದ್ದಾರೆ-

1. ಜೀವನಾವಶ್ಯಕತೆಗಳನ್ನು ದುಡಿದು ಸಂಪಾದಿಸಬಲ್ಲವರು ಮತ್ತು ಉದ್ಯೋಗ ಬಲ್ಲವರು. ಬಡವ, ರೈತ, ವ್ಯಾಪಾರಿ ಮುಂತಾದವರು ಇದರಲ್ಲಿ ಸೇರಿದ್ದಾರೆ. ಆದರೆ ಉದ್ಯೋಗ ಸಲಕರಣೆ, ಕೃಷಿ ಭೂಮಿ ಅಥವಾ ಬಂಡವಾಳದ ಕೊರತೆಯಿಂದಾಗಿ ಇವರಿಗೆ ಉದ್ಯೋಗದಿಂದ ದೊರೆಯುವ ಆದಾಯ ಕಡಿಮೆಯಾಗಬಹುದು. ಅದರಿಂದ ಜೀವನವು ಕ್ಲಿಷ್ಟಕರವಾಗುತ್ತದೆ. ಈ ಮಂದಿಗೆ ಸಮಸ್ಯೆಯ ಶಾಶ್ವತ ಪರಿಹಾರಕ್ಕೆ ಬೇಕಾದಷ್ಟು ಝಕಾತ್ ನೀಡಬೇಕು. ಇಂದಿನ ಕಾಲದಲ್ಲಿ ಉದ್ಯೋಗ ಮಾಡಬಲ್ಲ ಬಡವರಿಗೆ ಉಪಯುಕ್ತವಾದ ಕಾರ್ಖಾನೆ, ನೀರಾವರಿ ಸೌಲಭ್ಯಗಳನ್ನು ಸುಲಭದಲ್ಲಿ ಒದಗಿಸಬಹುದು.

2. ಸ್ವಯಂ ದುಡಿಯುವ ಸಾಮರ್ಥ್ಯವಿಲ್ಲದವರು. ಉದಾ: ಕುರುಡರು, ಅಂಗವಿಕಲರು, ವೃದ್ಧರು, ವಿಧವೆಯರು, ಮಕ್ಕಳು ಮುಂತಾದವರು. ಇವರಿಗೆ ಒಂದು ವರ್ಷದ ಅವಶ್ಯಕತೆಗಳನ್ನು ಆಯಾ ವರ್ಷ ಒದಗಿಸುವುದೇ ಉತ್ತಮ. ಅವರು ದುರ್ವ್ಯಯ ಮಾಡಬಹುದೆಂಬ ಆಶಂಕೆಯಿದ್ದರೆ ಒಂದು ತಿಂಗಳಿಗೆ ಬೇಕಾದ ಸಾಧನಾನುಕೂಲತೆಗಳನ್ನು ಒದಗಿಸಿದರೆ ತಪ್ಪಾಗಲಾರದು. ಉದ್ಯೋಗಿಗಳಿಗೆ ಸಂಬಳ ನೀಡುವಂಥ ವ್ಯವಸ್ಥೆ. ಈ ಕಾಲದಲ್ಲಿ ಇದು

ಹೆಚ್ಚು ಯೋಗ್ಯವಾಗಿದೆ.

ಝಕಾತಿಗೆ ಅರ್ಹರಾದ ಬಡವರನ್ನು ಈ ರೀತಿ ಎರಡು ವಿಭಾಗಗಳಾಗಿ ವಿಂಗಡಿಸಬಹುದೆಂದು ನಾನು ಸ್ವಯಂ ಮನಗಂಡ ಬಳಿಕ, ಹಂಬಲಿ ಮದ್ಹಬ್‌ನವರ 'ಗಾಯತುಲ್ ಮುಂತಹಾ' ಎಂಬ ಕೃತಿಯಲ್ಲಿ ಈ ಬಗ್ಗೆ ವಿವರಣೆಯನ್ನು ನೋಡಿ ನನಗೆ ಅಚ್ಚರಿಯಾಯಿತು. ಅದರಲ್ಲಿ ಇಮಾಮ್ ಅಹ್ಮದ್‌ರ, 'ಹತ್ತು ಸಾವಿರ ಅಥವಾ ಅದಕ್ಕಿಂತ ಹೆಚ್ಚು ಆದಾಯ ವಿರುವವನಾಗಿದ್ದರೂ ಆ ಮೊತ್ತದಿಂದ ಜೀವನಾವಶ್ಯಕತೆಗಳನ್ನು ಸಂಪೂರ್ಣ ಈಡೇರಿಸಲಾಗದ ಜಮೀನ್ದಾರನಿಗೂ ಝಕಾತ್‌ನ ಅರ್ಹತೆಯಿದೆ' ಎಂಬ ಹೇಳಿಕೆಯನ್ನು ಉದ್ಧರಿಸಿದ ಬಳಿಕ ಹೀಗೆನ್ನಲಾಗಿದೆ: "ಅವರಿಗೆ ಉದ್ಯೋಗ ಸಲಕರಣೆಗಳ ಬೆಲೆ ನೀಡಬೇಕು. ವ್ಯಾಪಾರಿಯಾಗಿದ್ದರೆ ಮೂಲ ಬಂಡವಾಳ ನೀಡಬೇಕು. ಇವರ ಹೊರತು ಫಕೀರ್, ಮಿಸ್ಕೀನ್ ಮತ್ತು ಅವರ ಕುಟುಂಬಗಳಿಗೆ ಒಂದು ವರ್ಷದ ಸಾಧನಾನುಕೂಲತೆಗಳನ್ನು ನೀಡಬೇಕು. ಯಾಕೆಂದರೆ ಝಕಾತ್ ವರ್ಷಂಪ್ರತಿ ದೊರೆಯುತ್ತದಲ್ಲವೇ"

## ಜೀವನ ಮಟ್ಟ

ಈ ವರೆಗಿನ ವಿವರಣೆಯಿಂದ, ಬಡವರ್ಗಗಳಿಗೆ ಕೆಲವು ನಾಣ್ಯಗಳನ್ನು ಲಭ್ಯಗೊಳಿಸುವುದು ಝಕಾತ್‌ನ ಧ್ಯೇಯವಲ್ಲವೆಂದು ವ್ಯಕ್ತವಾಗುತ್ತದೆ. ಅಲ್ಲಾಹನು ಗೌರವಾದರಗಳಿಂದ ಭೂಮಿಗೆ ಕಳುಹಿಸಿದ ಪ್ರತಿನಿಧಿ; ನ್ಯಾಯನಿಷ್ಠ ಮತ್ತು ಒಳಿತು ತುಂಬಿರುವ ಧರ್ಮದ ಅನುಯಾಯಿ; ಜನರಿಗಾಗಿ ಸೃಷ್ಟಿಸಲಾದ ಉತ್ತಮ ಸಮುದಾಯದ ಓರ್ವ ಸದಸ್ಯ ಎಂಬೀ ಪದವಿಗಳಿಗೆ ತಕ್ಕುದಾದ ಜೀವನ ಮಟ್ಟವನ್ನು ವ್ಯಕ್ತಿಗಳಿಗೆ ಒದಗಿಸಬೇಕೆಂದು ಝಕಾತ್‌ನಿಂದ ನಿರೀಕ್ಷಿಸಲಾಗಿದೆ. ತನಗೂ ಕುಟುಂಬಕ್ಕೂ ಆಹಾರ ಪಾನೀಯಗಳು, ಸೆಕೆಗಾಲ- ಬೇಸಿಗೆ ಕಾಲದ ಉಡುಪುಗಳು, ಸ್ವಂತ ಮಟ್ಟಕ್ಕೆ ಸರಿ ಹೊಂದುವ ವಸತಿ- ಇತ್ಯಾದಿಗಳು ಎಲ್ಲರಿಗೂ ಅಗತ್ಯವಾಗಿದೆ. ಇಬ್ನು ಹಝ್ಮ್‌ರು 'ಮುಹಲ್ಲಾ' ದಲ್ಲಿಯೂ ಇಮಾಮ್ ನವವಿಯವರು 'ಅಲ್ ಮಜ್ಮೂಅ್' ನಲ್ಲಿಯೂ ಇದನ್ನು ಹೇಳಿದ್ದಾರೆ. ಇತರ ಅನೇಕ ವಿದ್ವಾಂಸರು ಇದೇ ಅಭಿಪ್ರಾಯವನ್ನು ಹೊಂದಿದ್ದಾರೆ.

ಓರ್ವನು ಬಡವನಾಗದಿರಲಿಕ್ಕೆ ಅಗತ್ಯವಿರುವ ಗರಿಷ್ಠ ಸಾಧನಾನುಕೂಲತೆಗಳನ್ನು ಇಮಾಮ್ ನವವಿ 'ಅಲ್ ಮಜ್ಮೂಅ್'ನಲ್ಲಿ ಹೀಗೆ ಹೇಳಿದ್ದಾರೆ- "ವ್ಯಕ್ತಿಗೂ ಆತನ ಆಶ್ರಿತರಿಗೂ ತಂತಮ್ಮ ಸ್ಥಿತಿಗೆ ತಕ್ಕಂತೆ, ಬಟ್ಟೆ ಬರೆ, ವಸತಿ ಹಾಗೂ ಇತರ ಅವಶ್ಯಕ ಜೀವನಾನುಕೂಲತೆಗಳು ದುಂದು ಯಾ ದುರ್ವ್ಯಯವಾಗದ ರೀತಿಯಲ್ಲಿ ಲಭ್ಯವಾಗಬೇಕು." ಅತ್ಯವಶ್ಯಕತೆಗಳ ಸಾಲಿನಲ್ಲಿ ಇಂದಿನ ಕಾಲದಲ್ಲಿ ಮಕ್ಕಳ ಇಸ್ಲಾಮಿ ವಿದ್ಯಾಭ್ಯಾಸ ಮತ್ತು ಅವರ ಸಾಂಸ್ಕೃತಿಕ ಶಿಕ್ಷಣವೂ ಸೇರಿದೆ. ಅಜ್ಞಾನದ ಕತ್ತಲೆಯನ್ನು ತೊಲಗಿಸಿ, ಗೌರವಾರ್ಹ ಜೀವನ ಪಥ ತೋರಿಸಿ, ಧಾರ್ಮಿಕ ಮತ್ತು ಲೌಕಿಕ ಹೊಣೆ ನಿರ್ವಹಣೆಗೆ ವಿದ್ಯೆ ಅಗತ್ಯವಾಗಿದೆಯಷ್ಟೆ.

ಕರ್ಮಶಾಸ್ತ್ರಜ್ಞರು ಮುಸ್ಲಿಮರ ಮೂಲಭೂತ ಬೇಡಿಕೆಗಳ ಸಾಲಿನಲ್ಲಿ 'ಅಜ್ಞಾನ ನಿವಾರಣೆ'ಯನ್ನೂ ಸೇರಿಸಿದ್ದಾರೆ. ಯಾಕೆಂದರೆ ಅಜ್ಞಾನದ ಅಸ್ತಿತ್ವವು ಮನಸ್ಸಿನ ಮರಣವಾಗಿದೆ. ತನಗೆ ಅಥವಾ ಕುಟುಂಬದವರಿಗೆ ರೋಗ ಬಂದರೆ ಚಿಕಿತ್ಸೆ ಮಾಡಬೇಕು. ಅದಕ್ಕೆ ಸೌಲಭ್ಯ ಒದಗಿಸಬೇಕಾದುದು ಇಂದಿನ ಅನಿವಾರ್ಯ ಬೇಡಿಕೆಯಾಗಿದೆ. ತನ್ನನ್ನು ಅಥವಾ ಕುಟುಂಬವನ್ನು ರೋಗಕ್ಕೆ ಬಲಿ ನೀಡುವುದರಿಂದ ನಾಶವನ್ನು ಸ್ವಯಂ ಆಹ್ವಾನಿಸಿದಂತಾಗುವುದು. "ದೇವನ ದಾಸರೇ ಶುಶ್ರೂಷೆ ಮಾಡಿರಿ. ರೋಗ ಸೃಷ್ಟಿಸಿದಾತನೇ ಅದಕ್ಕೆ ಔಷಧವನ್ನೂ ಸೃಷ್ಟಿಸಿದ್ದಾನೆ" ಎಂಬ ಪ್ರವಾದಿ ವಚನವಿದೆ. ಅಲ್ಲಾಹನು ಹೇಳಿರುವನು, "ಸ್ವಕರಗಳನ್ನು ನಾಶಕ್ಕೆ ಹಾಕಬೇಡಿರಿ" ಇನ್ನೊಂದೆಡೆಯಲ್ಲಿ, "ನೀವು ನಿಮ್ಮನ್ನೇ ವಧಿಸಬೇಡಿರಿ. ನಿಶ್ಚಯವಾಗಿಯೂ ಅಲ್ಲಾಹನು ನಿಮ್ಮ ಬಗ್ಗೆ ಕರುಣೆಯುಳ್ಳವನಾಗಿದ್ದಾನೆ." "ಮುಸ್ಲಿಮರು ಪರಸ್ಪರ ಸಹೋದರರು ಒಬ್ಬನು ಇನ್ನೊಬ್ಬನನ್ನು ಆಕ್ರಮಿಸುವುದಿಲ್ಲ. ಅನ್ಯರ ಆಕ್ರಮಣಕ್ಕೆ ಬಿಡುವುದಿಲ್ಲ" ಎಂದು ಪ್ರವಾದಿಯವರು ಹೇಳಿದ್ದಾರೆ. ಓರ್ವ ಮುಸ್ಲಿಮನು ತನ್ನ ಮುಸ್ಲಿಮ್ ಸಹೋದರನನ್ನು ಅಥವಾ ಮುಸ್ಲಿಮ್ ಸಮುದಾಯದ ಓರ್ವನನ್ನು ರೋಗಕ್ಕೆ ಬಿಟ್ಟುಕೊಟ್ಟರೆ ಅದು ಆತನನ್ನು ಅಕ್ರಮಿಗೆ ಬಲಿ ನೀಡಿದಂತಾಗುವುದು.

ಒಟ್ಟಿನಲ್ಲಿ ಜನರ ಜೀವನ ಮಟ್ಟಕ್ಕೆ ಸಮಗ್ರ ಮತ್ತು ಸ್ಪಷ್ಟ ವ್ಯಾಖ್ಯಾನ ನೀಡಲು ಸಾಧ್ಯವಿಲ್ಲ. ಕಾಲದ ಪರಿಸ್ಥಿತಿ, ಸಮಾಜದ ಆರ್ಥಿಕ ಮಟ್ಟ ಮತ್ತು ರಾಷ್ಟ್ರೀಯ ಆದಾಯದ ವ್ಯತ್ಯಾಸದನ್ವಯ ಅದು ಬದಲಾಗುತ್ತದೆ. ಒಂದು ಕಾಲದಲ್ಲಿ ಅಥವಾ ಸಮುದಾಯದಲ್ಲಿ ಆಡಂಬರವೆಂದು ತೋಚುವ ವಸ್ತುಗಳು ಇನ್ನೊಂದು ಕಾಲದಲ್ಲಿ ಸಮಾಜದ ಬೇಡಿಕೆ ಮತ್ತು ಅವಶ್ಯಕತೆಗಳಾಗಿ ಮಾರ್ಪಡಬಹುದು.

## ಸುವ್ಯವಸ್ಥಿತ ನೆರವು

ಉದ್ಯೋಗ ತಿಳಿಯದ ಅಥವಾ ಉದ್ಯೋಗ ಮಾಡುವ ಸಾಮರ್ಥ್ಯವಿಲ್ಲದ ಬಡವರಿಗೂ ಅವರ ಕುಟುಂಬದವರಿಗೂ ಸಾಮಾನ್ಯ ಸಾಧನಾನುಕೂಲತೆಗಳನ್ನು ಒದಗಿಸಿ, ಒಂದು ವರ್ಷದ ಜೀವನಾವಶ್ಯಕತೆಗಳನ್ನು ಲಭ್ಯಗೊಳಿಸುವುದನ್ನು ಇಸ್ಲಾಮ್ ಝಕಾತ್‌ನ ಧ್ಯೇಯವಾಗಿರಿಸಿದೆ ಎಂಬುದನ್ನು ನಾವು ಅರಿತೆವು. ಇದು ನಿರಂತರ ಲಭಿಸುತ್ತಲಿರುವ ಸ್ಥಿರ ಮತ್ತು ಸುವ್ಯವಸ್ಥಿತ ನೆರವೆಂಬುದನ್ನೂ ಜ್ಞಾಪಿಸಬೇಕಾಗಿದೆ. ಅದು ಬಡತನ ತೊಲಗಿ ಸಂಪನ್ನತೆ ಸಾಧಿಸಿ ಉದ್ಯೋಗವಿಲ್ಲದವರಿಗೆ ಉದ್ಯೋಗ ಪ್ರಾಪ್ತಿಯಾಗಿ ಉದ್ಯೋಗ ನಿರ್ವಹಿಸುವ ಸಾಮರ್ಥ್ಯವಿಲ್ಲದವರಿಗೆ ಆ ಸಾಮರ್ಥ್ಯ ಹೊಂದುವ ತನಕ ನಿರಂತರ ದೊರೆಯಬೇಕಾದ ಸಹಾಯವಾಗಿದೆ. ಅಬೂ ಉಬೈದ ವರದಿ ಮಾಡಿದ ಘಟನೆಯಿಂದ ಇದು ವ್ಯಕ್ತವಾಗುತ್ತದೆ- ಅದೊಂದು ಮಧ್ಯಾಹ್ನ ಉಮರ್‌ರು ಮರದ ನೆರಳಲ್ಲಿ ವಿಶ್ರಾಂತಿ ಪಡೆಯುತ್ತಿದ್ದರು. ಆಗ ಅರಬೇತರ ಮಹಿಳೆಯೊಬ್ಬಳು ಅಲ್ಲಿಗೆ ಬಂದು ಹೀಗೆಂದರು: "ನಾನು ನಿರ್ಗತಿಕಳಾಗಿದ್ದೇನೆ. ನನಗೆ ಮಕ್ಕಳಿದ್ದಾರೆ. ಅಮೀರುಲ್ ಮುಅ್‌ಮಿನೀನ್ ಉಮರ್ ಬಿನ್ ಖತ್ತಾಬ್‌ರು, ಮುಹಮ್ಮದ್ ಮಸ್ಲಮರನ್ನು ನಮ್ಮ ಪ್ರದೇಶದ ಝಕಾತ್ ನಿರ್ವಾಹಕರಾಗಿ ನೇಮಿಸಿದ್ದರು.

ಅವರು ನಮಗೆ ಏನೂ ನೀಡಲಿಲ್ಲ. ನೀವು ಸ್ವಲ್ಪ ಶಿಫಾರಸು ಮಾಡುತ್ತೀರಾ? ಅಲ್ಲಾಹನು ನಿಮಗೆ ಅನುಗ್ರಹ ನೀಡುವನು." ಮುಹಮ್ಮದ್ ಬಿನ್ ಮಸ್ಲಮರನ್ನು ಕರೆ ತಾ!" ಉಮರ್‌ರು ತಮ್ಮ ಸೇವಕನಿಗೆ ಆಜ್ಞಾಪಿಸಿದರು. ಇದನ್ನು ಕೇಳಿ ಮಹಿಳೆ ಹೇಳಿದರು: "ನೀವು ನನ್ನ ಜತೆ ಅವರ ಬಳಿಗೆ ಬಂದರೆ ನನಗೆ ಪ್ರಯೋಜನವಾದೀತು." ಉಮರ್ ಹೇಳಿದರು, "ಇನ್ಶಾ ಅಲ್ಲಾಹ್, ಅವರು ಸೂಕ್ತ ಏರ್ಪಾಡು ಮಾಡುವರು."

"ಅಸ್ಸಲಾಮು ಅಲೈಕುಮ್, ಅಮೀರುಲ್ ಮೂಮಿನೀನ್" ಎಂದು ಅಭಿನಂದಿಸುತ್ತಾ ಮುಹಮ್ಮದ್ ಬಿನ್ ಮಸ್ಲಮರು ಆಗಮಿಸಿದಾಗ ಆ ಮಹಿಳೆಗೆ ನಾಚಿಕೆಯಾಯಿತು. ಉಮರ್ ಹೇಳಿದರು: "ನಿಮ್ಮ ಪೈಕಿ ಉತ್ತಮರನ್ನು ಆರಿಸುವ ವಿಷಯದಲ್ಲಿ ನನ್ನಿಂದ ತಪ್ಪು ಸಂಭವಿಸಿಲ್ಲ. ಈ ಮಹಿಳೆಯ ಕುರಿತು ಅಲ್ಲಾಹನು ಪ್ರಶ್ನಿಸಿದರೆ ನೀವು ಹೇಗೆ ಉತ್ತರಿಸುವಿರಿ?" ಇದನ್ನು ಕೇಳಿ ಮುಹಮ್ಮದ್ ಬಿನ್ ಮಸ್ಲಮರ ಕಣ್ಣುಗಳು ತೇವಗೊಂಡವು. ಉಮರ್ ಮುಂದುವರಿಸಿದರು, "ಅಲ್ಲಾಹನು ನಮಗೆ ಆತನ ಪ್ರವಾದಿಯನ್ನು ಕಳುಹಿಸಿದನು. ನಾವು ಅವರಲ್ಲಿ ವಿಶ್ವಾಸವಿರಿಸಿದೆವು. ಅನುಗಮಿಸಿದೆವು. ಅಲ್ಲಾಹನ ಆಜ್ಞೆಯಂತೆ- ಅವರು ವರ್ತಿಸಿದರು- ಮರಣದ ತನಕ, ಝಕಾತನ್ನು ಬಡ ನಿರ್ಗತಿಕರಾದ ಅದರ ಹಕ್ಕುದಾರರಿಗೆ ಲಭ್ಯಗೊಳಿಸಿದರು. ತರುವಾಯ ಅಬೂಬಕರ್‌ರನ್ನು ಅಲ್ಲಾಹನು ಖಲೀಫರಾಗಿ ನೇಮಿಸಿದನು. ಪ್ರವಾದಿ ಚರ್ಯೆಯನ್ನೇ ಅವರು ವರ್ತಿಸಿದರು. ಅಲ್ಲಾಹನು ಅವರನ್ನು ಮರಳಿ ಕರೆದಾಗ ಅಲ್ಲಾಹನು ನನ್ನನ್ನು ಖಲೀಫನಾಗಿ ಮಾಡಿದನು. ನಿಮ್ಮನ್ನು ನೇಮಿಸುವಾಗ ನಿಮ್ಮ ಪೈಕಿ ಉತ್ತಮರನ್ನು ಚುನಾಯಿಸುವ ವಿಷಯದಲ್ಲಿ ನನ್ನಿಂದ ಖಂಡಿತ ತಪ್ಪು ಸಂಭವಿಸಿಲ್ಲ. ಆದ್ದರಿಂದ ಈ ಮಹಿಳೆಗೆ ಗತ ವರ್ಷದ ಮತ್ತು ಈ ವರ್ಷದ ಝಕಾತ್ ನೀಡಬೇಕು." ತರುವಾಯ ಉಮರ್‌ರು ಒಂದು ಒಂಟೆಯು ಹೊರಬಹುದಾದಷ್ಟು ಗೋಧಿ ಹಿಟ್ಟು ಮತ್ತು ತೈಲವನ್ನು ಆ ಮಹಿಳೆಗೆ ನೀಡಿ ಹೀಗೆಂದರು: "ಇದನ್ನು ಈಗ ಕೊಂಡೊಯ್ಯಿರಿ. ನಾನು ಖೈಬರ್‌ಗೆ ಹೋಗುತ್ತಿದ್ದೇನೆ. ಅಲ್ಲಿ ಪುನಃ ಭೇಟಿಯಾಗೋಣ. ಆ ಮಹಿಳೆ ಖೈಬರ್‌ಗೆ ಹೋದರು. ಉಮರ್‌ರು ಎರಡು ಒಂಟೆಗಳು ಹೊರ ಬಹುದಾದಷ್ಟು ಆಹಾರ ವಸ್ತುಗಳನ್ನು ಅವರಿಗೆ ನೀಡಿದರು. "ಈಗ ಇದನ್ನು ಕೊಂಡೊಯ್ಯಿರಿ. ಮುಹಮ್ಮದ್ ಬಿನ್ ಮಸ್ಲಮ ನಿಮ್ಮ ನಾಡಿಗೆ ಬರುವ ತನಕ ತಿನ್ನುವಷ್ಟು ಇದರಲ್ಲಿದೆ. ಗತ ಮತ್ತು ಈ ವರ್ಷದ ಪಾಲನ್ನು ನೀಡುವಂತೆ ನಾನು ಅವರಿಗೆ ಆಜ್ಞಾಪಿಸಿದ್ದೇನೆ." (ಅಲ್ ಅಮ್‌ವಾಲ್-ಪುಟ:599)

ಇಸ್ಲಾಮೀ ರಾಷ್ಟ್ರದ ಪ್ರತಿಯೋರ್ವ ಪೌರನ ಬಗ್ಗೆ ತಮಗಿರುವ ಹೊಣೆಯನ್ನು ಆಡಳಿತಗಾರರೂ, ಸೂಕ್ತ ಜೀವನ ಮಟ್ಟಕ್ಕಾಗಿ ಸರಕಾರದ ಬಳಿಯಿರುವ ಸಂಪನ್ಮೂಲಗಳಲ್ಲಿ ತಮಗಿರುವ ಹಕ್ಕುಗಳ ಬಗ್ಗೆ ಪೌರರೂ ಪ್ರಜ್ಞಾವಂತರಾಗಿರಬೇಕೆಂದು ಈ ಘಟನೆ ಕಲಿಸುತ್ತದೆ. ಝಕಾತ್; ಪೌರರ ಜೀವನ ಭದ್ರತೆಯ ಶಂಕು ಶಿಲೆಯಾಗಿದ್ದು ಅದು ನಿರಂತರ ಮತ್ತು ಕ್ರಮಬದ್ಧವಾಗಿ ದೊರೆಯಬೇಕಾಗಿದೆ. ಒಂದು ವೇಳೆ ದೊರೆಯದಿದ್ದರೆ ಅದರ ಪ್ರಾಪ್ತಿಗಾಗಿ ದೂರು ನೀಡುವ ಸ್ವಾತಂತ್ರ್ಯ ಮತ್ತು ಬಾಧ್ಯತೆಯಿದೆಯೆಂದು ಈ ಘಟನೆ ಸ್ಪಷ್ಟಪಡಿಸುತ್ತದೆ.

ಉಮರ್‌ರು, ವ್ಯಕ್ತಿಯ ಬೇಡಿಕೆಗಳು ಸಂಪೂರ್ಣವಾಗಿ ಈಡೇರಿ ಆತನು ಸ್ವಾವಲಂಬಿಯಾಗುವಷ್ಟು ಮೊತ್ತವನ್ನು ಝಕಾತ್ ಆಗಿ ನೀಡುವ ನೀತಿಯನ್ನು ಅವಲಂಬಿಸಿದ್ದರು. ಮೊದಲು ಅವರ ಒಂದು ಒಂಟೆ ಹೊರುವಷ್ಟು ಆಹಾರ ವಸ್ತುಗಳನ್ನು ನೀಡಿದರು. ಅದಾದರೋ ಮುಹಮ್ಮದ್ ಬಿನ್ ಮಸ್ಲಿಮರಿಂದ ದೊರೆಯಬೇಕಾಗಿದ್ದ ಗತ ಮತ್ತು ಹಾಲೀ ವರ್ಷದ ಝಕಾತ್‌ನಿಂದ ಹೊರತಾಗಿತ್ತು. ಪ್ರಸ್ತುತ ಕ್ರಮವು ಉಮರ್‌ರ ಸ್ವಂತ ಅಭಿಪ್ರಾಯವಾಗಿರಲಿಲ್ಲ, ಅದಕ್ಕೆ ಪ್ರವಾದಿ(ಸ) ಮತ್ತು ಅಬೂಬಕರ್‌ರಲ್ಲಿ(ರ) ಮಾದರಿಯಿದೆಯೆಂದು ಈ ಘಟನೆಯಿಂದ ವ್ಯಕ್ತವಾಗುತ್ತದೆ.

## ವಿತರಣೆ ಎಲ್ಲಿ ಮಾಡಬೇಕು?

ಆಧುನಿಕ ಯುಗದ ಯಾವುದೇ ವ್ಯವಸ್ಥೆ ಮತ್ತು ನೀತಿ ಸಂಹಿತೆಯನ್ನು ಸುಧಾರಿತ ಮತ್ತು ವೈಜ್ಞಾನಿಕವೆಂದು ಭಾವಿಸುವ ಅನೇಕ ಮಂದಿಯಿದ್ದಾರೆ. ಆದರೆ ಇಸ್ಲಾಮ್‌ನ ಝಕಾತ್ ವ್ಯವಸ್ಥೆಯು ಈ ಕಾಲದ ಯಾವುದೇ ರಾಜಕೀಯ- ಆರ್ಥಿಕ ವ್ಯವಸ್ಥೆಯನ್ನು ಮೀರಿಸುವ ಸುಧಾರಿತ, ನ್ಯಾಯನಿಷ್ಠ ಮತ್ತು ತರ್ಕಬದ್ಧ ವ್ಯವಸ್ಥೆಯೆಂದು ಹೆಚ್ಚಿನವರು ಗ್ರಹಿಸಿಲ್ಲ. ಜಾಹಿಲಿಯ್ಯಾ ಕಾಲದಲ್ಲಿ ಅರೇಬಿಯಾದಲ್ಲಿಯೂ 'ತಮೋಯುಗ'ದ ಯುರೋಪಿನಲ್ಲಿಯೂ ಯಾವ ರೀತಿ ತೆರಿಗೆ ಸಂಗ್ರಹಿಸಿ ವಿನಿಯೋಗಿಸಲಾಗುತ್ತಿತ್ತೆಂದು ಆ ಕಾಲದ ಜನರಿಗೆ ತಿಳಿದಿದೆ. ಅಹೋರಾತ್ರಿ ಸೊಂಟ ಮುರಿಯುವಂತೆ ದುಡಿದರೆ ಮಾತ್ರ ಬಹಳ ಕಷ್ಟದಿಂದ ಜೀವನಾವಶ್ಯಕತೆಗಳನ್ನು ಸಂಪಾದಿಸಬಹುದಾಗಿತ್ತು. ಬಡ ರೈತರು, ಕಾರ್ಮಿಕರು ಮತ್ತು ವ್ಯಾಪಾರಿಗಳಿಂದ ಸಂಗ್ರಹಿಸಿದ ಹಣವು ರಾಜನ ಖಜಾನೆಗೆ ಸೇರುತ್ತಿತ್ತು. ರಾಜನು ಅದನ್ನು ತನ್ನ ಸ್ಥಾನವನ್ನು ಭದ್ರಪಡಿಸಿ, ಐಷಾರಾಮಗಳಿಗಾಗಿಯೂ ತನ್ನ ಸುತ್ತಲಿರುವ ಸೇವಕರು, ಆಶ್ರಿತರು ಮತ್ತು ಮೃಗ ಪಕ್ಷಿಗಳ ಪೋಷಣೆಗಾಗಿಯೂ ಬಳಸಿದನು. ಉಳಿದ ಹಣದಿಂದ ರಾಜಧಾನಿಯನ್ನು ಅಲಂಕರಿಸಿ, ನಗರ ವಾಸಿಗಳನ್ನು ಸಂತೃಪ್ತಗೊಳಿಸಿದನು. ಅನಂತರವೂ ಏನಾದರೂ ಉಳಿದಿದ್ದರೆ ಹತ್ತಿರದ ನಗರಕ್ಕೆ ವಿನಿಯೋಗಿಸಿದನು. ಅಂತಹ ಸಂದರ್ಭಗಳಲ್ಲಿ ಈ ತೆರಿಗೆ ಸಂಗ್ರಹಿಸಿದ ಹಳ್ಳಿ ಪ್ರದೇಶಗಳಲ್ಲಿ ಸಂಕಷ್ಟಪಡುವ ಶ್ರಮ ಜೀವಿಗಳನ್ನು ರಾಜನು ಜ್ಞಾಪಿಸುತ್ತಿರಲಿಲ್ಲ.

ಅರೇಬಿಯಾದಲ್ಲಿ ಇಸ್ಲಾಮ್ ಆಗತವಾದ ಬಳಿಕ, ಶ್ರೀಮಂತರಿಂದ ವಸೂಲು ಮಾಡಿದ ಝಕಾತನ್ನು ಬಡತನ ಮತ್ತು ಹಸಿವು ನಿವಾರಣೆ ಹಾಗೂ ದರಿದ್ರರ ವಿಮೋಚನೆಗಾಗಿ ಬಳಸಬೇಕೆಂದು ಆಜ್ಞಾಪಿಸಲಾಯಿತು. ಸಮಾಜದ ನ್ಯಾಯ, ನೀತಿ ಮತ್ತು ಭದ್ರತೆಗಳಿಗಾಗಿ ಅದನ್ನು ವಿನಿಯೋಗಿಸಬೇಕು. ಈ ಆಜ್ಞೆಯ ಸಾಕ್ಷಾತ್ಕಾರಕ್ಕಾಗಿ ಪ್ರವಾದಿಯವರು ದೇಶದ ವಿವಿಧ ಕಡೆಗಳಿಗೆ ರಾಜ್ಯಪಾಲರು ಮತ್ತು ಝಕಾತ್ ನಿರ್ವಹಣಾಧಿಕಾರಿಗಳನ್ನು ನೇಮಿಸಿದರು. ಅವರು ಆ ಪ್ರಾಂತ್ಯದ ಶ್ರೀಮಂತರಿಂದ ಝಕಾತ್ ಶೇಖರಿಸಿ ಅಲ್ಲಿನ ಬಡವರಿಗೆ ವಿತರಣೆ ಮಾಡಿದರು. "ಅವರಲ್ಲಿರುವ ಶ್ರೀಮಂತರಿಂದ ಝಕಾತ್ ಸ್ವೀಕರಿಸಿ ಅವರಲ್ಲಿರುವ ಬಡವರಿಗೆ ನೀಡಿರಿ" ಎಂದು ಆಜ್ಞಾಪಿಸಿ ಪ್ರವಾದಿಯವರು ಮುಆದ್‌ರನ್ನು ಯಮನಿಗೆ ಕಳುಹಿಸಿದ

ಘಟನೆಯನ್ನು ಈ ಹಿಂದೆ ಸೂಚಿಸಲಾಗಿದೆಯಷ್ಟೆ. ಹಾಗೆಯೇ ಮುಆದ್‌ರು ಯಮನ್‌ನ ಝಕಾತನ್ನು ಅಲ್ಲಿಯೇ ವಿತರಣೆ ಮಾಡಿದರು. ಓರ್ವರು ಬೇರೆಡೆವಾಸವಾಗಿದ್ದರೆ ಅವರ ಸೊತ್ತುಗಳಿರುವ ಪ್ರದೇಶದಲ್ಲಿಯೇ ಅವುಗಳ ಝಕಾತ್ ವಿತರಣೆ ಮಾಡಬೇಕೆಂದು ಅವರಿಗೆ ಕಲಿಸಿದರು.

ಅಬೂ ಜುಹೈಫ ಹೇಳಿರುವರು: ಪ್ರವಾದಿಯ ಝಕಾತ್ ನಿರ್ವಾಹಕನು ನಮ್ಮ ಪ್ರದೇಶಕ್ಕೆ ಬಂದು ಶ್ರೀಮಂತರಿಂದ ಝಕಾತ್ ಸಂಗ್ರಹಿಸಿ ಬಡವರಿಗೆ ವಿತರಣೆ ಮಾಡುತ್ತಿದ್ದನು. ಅಂದು ನಾನೋರ್ವ ಅನಾಥ ಬಾಲಕನಾಗಿದ್ದೆ. ಅವರು ನನಗೊಂದು ಒಂಟೆ ನೀಡಿದರು. ಒಮ್ಮೆ ಓರ್ವ ಅರಬ್ ಹಳ್ಳಿಗನು ಪ್ರವಾದಿಯವರೊಡನೆ(ಸ) ಕೇಳಿದ ಹಲವು ಪ್ರಶ್ನೆಗಳಲ್ಲಿ ಒಂದು ಹೀಗಿತ್ತು: "ನಿಮ್ಮನ್ನು ಪ್ರವಾದಿಯಾಗಿ ಕಳುಹಿಸಿದ ಅಲ್ಲಾಹನಾಣೆ, ನಮ್ಮಲ್ಲಿರುವ ಶ್ರೀಮಂತರಿಂದ ಝಕಾತ್ ಸಂಗ್ರಹಿಸಿ ನಮ್ಮಲ್ಲಿರುವ ಬಡವರಿಗೆ ನೀಡಬೇಕೆಂದು ಅಲ್ಲಾಹನು ನಿಮಗೆ ಆಜ್ಞಾಪಿಸಿದ್ದಾನೆಯೇ?" ಪ್ರವಾದಿ ಹೇಳಿದರು, 'ಹೌದು.' ಉಮರುಲ್ ಫಾರೂಕ್‌ರು ತಮ್ಮ ಶಿಷ್ಯರಿಗೆ ನೀಡಿರುವ ಉಪದೇಶಗಳಲ್ಲಿ ಗ್ರಾಮೀಣ ಅರಬರ ಬಗ್ಗೆ ಹೀಗೆ ಹೇಳಿದ್ದರು: "ಅವರಿಗೆ ಒಳಿತು ಮಾಡಬೇಕೆಂದು ನಾನು ಉಪದೇಶಿಸುತ್ತೇನೆ. ಅವರು ಅರಬರ ಸಾರ ಸರ್ವಸ್ವವಾಗಿದ್ದಾರೆ. ಅವರಲ್ಲಿರುವ ಶ್ರೀಮಂತರಿಂದ ಝಕಾತ್ ಸಂಗ್ರಹಿಸಿ ಅವರಲ್ಲಿರುವ ಬಡವರಿಗೆ ವಿತರಣೆ ಮಾಡಬೇಕೆಂದು ನಾನು ನಿಮಗೆ ಉಪದೇಶಿಸುತ್ತೇನೆ."

ಉಮರ್‌ರು ತಮ್ಮ ಜೀವನಾವಧಿಯಲ್ಲಿ ಹೀಗೆಯೇ ಮಾಡಿದ್ದರು. ಝಕಾತ್ ಸಂಗ್ರಹಿಸಿದ ಪ್ರದೇಶದಲ್ಲಿಯೇ ಅದರ ವಿತರಣೆ ಮಾಡಿದರು. ಆ ಕಾಲದಲ್ಲಿ ಝಕಾತ್ ನಿರ್ವಾಹಕರು ಕೆಲಸ ಮುಗಿಸಿ ಊರಿಗೆ ಮರಳುವಾಗ ಅವರ ಬಳಿ ತಮ್ಮ ಕುದುರೆಯ ದಂಡು ಮತ್ತು ಊರುಗೋಲಿನ ವಿನಾ ಬೇರೇನೂ ಉಳಿದಿರುತ್ತಿರಲಿಲ್ಲ. ಕಿಲಾಬ್ ಗೋತ್ರಕ್ಕೆ (ಸಅ್‌ದ್ ಗೋತ್ರಕ್ಕೆ ಎಂಬ ಅಭಿಪ್ರಾಯವೂ ಇದೆ) ಉಮರ್‌ರು ಝಕಾತ್‌ನ ನಿರ್ವಾಹಕರಾಗಿ ನೇಮಿಸಿದ ಮುಆದ್‌ರು ಮರಳಿ ಬಂದಾಗ ಅವರ ಬಳಿ ತನ್ನ ಕುದುರೆಗಳ ಹೊರತು ಬೇರೇನೂ ಇರಲಿಲ್ಲವೆಂದು ಸಈದ್ ಬಿನ್ ಮುಸಯ್ಯಬ್ ವರದಿ ಮಾಡಿದ್ದಾರೆ. "ನಾವು ಝಕಾತ್ ಸಂಗ್ರಹಕ್ಕೆ ಹೋದೆವು. ಮರಳಿ ಬಂದಾಗ ಕುದುರೆಯ ಚಾಟಿ ಮಾತ್ರ ಉಳಿದಿತ್ತೆಂದು" ಯಅ್‌ಲ ಬಿನ್ ಉಮಯ್ಯ ಗೋತ್ರದ ಕೆಲವರು ಹೇಳಿದ್ದರೆಂದು ತಿಳಿಯುತ್ತದೆ.

ಪ್ರವಾದಿ ಮತ್ತು ಖುಲಫಾವುರ್ರಾಶಿದರು ತೋರಿದ ಈ ಹಾದಿಯಲ್ಲಿಯೇ ನ್ಯಾಯನಿಷ್ಠ ಮುಸ್ಲಿಮ್ ಆಡಳಿತಗಾರರೂ ಸಾಗಿದರು. ಪ್ರವಾದಿಯವರ(ಸ) ಸಂಗಾತಿಗಳು ಮತ್ತು ಅವರ ಅನುಯಾಯಿಗಳಾದ ಕರ್ಮಶಾಸ್ತ್ರ ವಿದ್ವಾಂಸರು ನೀಡಿದ ಧಾರ್ಮಿಕ ತೀರ್ಪುಗಳು ಈ ಸ್ಫೂರ್ತಿಯನ್ನು ಒಳಗೊಂಡಿತ್ತು. ಉಮವೀ ಖಲೀಫರೋರ್ವರ- (ಪ್ರಾಯಶಃ ಅದು ಝಿಯಾದ್ ಬಿನ್ ಅಬೀಹ್‌ರಾಗಿರಬೇಕು) ಕಾಲದಲ್ಲಿ ಝಕಾತ್ ನಿರ್ವಾಹಕನಾಗಿ ನೇಮಿಸಿದ್ದ ಇಮ್ರಾನ್ ಬಿನ್ ಹುಸೈನ್ ವರದಿ ಮಾಡಿದ ಘಟನೆಯು ಅದನ್ನು ಸಾಬೀತುಪಡಿಸುತ್ತಿದೆ. ಝಕಾತ್ ವಿತರಣೆ ಮುಗಿಸಿ ಮರಳಿದ ಬಳಿಕ ಖಲೀಫರು ಅವರೊಡನೆ ಪ್ರಶ್ನಿಸಿದರು: 'ಹಣವೆಲ್ಲಿದೆ?'

ಅದಕ್ಕೆ ಅವರು ಹೀಗೆ ಉತ್ತರಿಸಿದರು: "ನೀವು ನನ್ನನ್ನು ಹಣ ತರಲಿಕ್ಕಾಗಿ ಕಳಿಸಿದ್ದಿರ ಪ್ರವಾದಿಯವರ(ಸ) ಕಾಲದಲ್ಲಿ ಅದನ್ನು ಸಂಗ್ರಹಿಸ ಬೇಕಾದವರಿಂದ ಸಂಗ್ರಹಿಸಿ, ವಿತರ ಮಾಡಬೇಕಾದವರಿಗೆ ವಿತರಿಸಲಾಗುತ್ತಿತ್ತು." (ನೈಲುಲ್ ಔತಾರ್, ಭಾಗ:4, ಪು: 16

ಅಬೂ ಉಬೈದ ಹೇಳುತ್ತಾರೆ: ಯಾವ ಪ್ರದೇಶದಿಂದ ಝಕಾತ್ ಸಂಗ್ರಹಿಸಲಾಗುವುದೋ ಆ ಪ್ರದೇಶದ ಜನರೇ- ಅವರು ಸ್ವಾವಲಂಬಿಗಳಾಗುವ ತನಕ- ಅದಕ್ಕೆ ಅರ್ಹರು. ನೆರೆಯವರಿ ಆದ್ಯತೆ ನೀಡಬೇಕೆಂದು ಪ್ರವಾದಿಯವರು(ಸ) ಆಜ್ಞಾಪಿಸಿರುವುದರಿಂದ ಆಯಾ ಪ್ರದೇಶ ಜನರೇ ಝಕಾತ್‌ಗೆ ಅರ್ಹರೆಂದು ಗ್ರಹಿಸಬಹುದು. (ಅಲ್ ಅಮ್ವಾಲ್- ಪುಟ: 59

ಅಜ್ಞಾನದಿಂದಾಗಿ ಓರ್ವರು ನಿರ್ದಿಷ್ಟ ಪ್ರದೇಶದಲ್ಲಿ ವಿತರಿಸಬೇಕಾದ ಝಕಾತನ ಬೇರೊಂದು ಪ್ರದೇಶಕ್ಕೆ ಸಾಗಿಸಿದರೆ ಅದನ್ನು ಮರಳಿ ತಂದು ನೈಜ ಹಕ್ಕುದಾರರಿ ವಿತರಿಸಬೇಕಾದುದು ಆಡಳಿತಗಾರರ ಕರ್ತವ್ಯವಾಗಿದೆ. ಉಮರ್ ಬಿನ್ ಅಬ್ದುಲ್ ಅಝೀಝ್ ಹಾಗೆ ಮಾಡಿದ್ದಾರೆ. ಸಈದ್ ಬಿನ್ ಜುಬೈರ್ ಈ ರೀತಿಯ ತೀರ್ಪು ನೀಡಿದ್ದಾರೆ.

(ಅಲ್ ಅಮ್ವಾಲ್- ಪು: 59

ಆದರೆ, ಸ್ವಕುಟುಂಬ ಸಂಬಂಧಿಕರಿಗೆ ಆದ್ಯತೆ ನೀಡಬೇಕಾದ ಹೊಣೆಯಿರುವ ವ್ಯಕ್ತಿ ಇಬ್ರಾಹೀಮ್ ನಖ್‌ಈ, ಹಸನುಲ್ ಬಸ್ರಿ ಮುಂತಾದವರು ಬೇರೆ ಪ್ರದೇಶದಲ್ಲಿ ಝಕಾತ ವಿತರಿಸುವ ವಿಷಯದಲ್ಲಿ ವಿನಾಯಿತಿ ನೀಡಿದ್ದಾರೆ. ಅಬೂ ಉಬೈದ್‌ರ ಅಭಿಪ್ರಾಯದಲ್ಲಿ ತಾನು ವಿಶೇಷವಾಗಿ ನೀಡ ಬಯಸುವ ಹಣದಲ್ಲಿ ಮಾತ್ರ ಈ ವಿನಾಯಿತಿ ಅನ್ವಯವಾಗುತ್ತದ ಸರ್ಕಾರವು ನಿರ್ವಹಿಸುವ, ಬಹು ಸಂಖ್ಯಾತ ಜನ ಸಾಮಾನ್ಯರ ಹಕ್ಕಿಗೆ ಸೇರಿದ ಝಕಾತನ್ನು ಪ್ರದೇಶ ಬದಲಾಯಿಸಿ ವಿತರಣೆ ಮಾಡಬಾರದೆಂದು ಅವರು ಅಭಿಪ್ರಾಯ ಪಟ್ಟಿದ್ದಾರೆ. "ನ ಝಕಾತನ್ನು ನಾನು ಮದೀನಾಕ್ಕೆ ಕೊಂಡೊಯ್ದಿದ್ದೆ!" ಎಂಬ ಅಬುಲ್ ಆಲಿಯಾರ ಮಾತುಗಳ ಇಬ್ರಾಹೀಮುನ್ನಖ್‌ಈ ಮತ್ತು ಹಸನುಲ್ ಬಸ್ರಿಯವರಿಗೆ ಆಧಾರವಾಗಿದೆ. ಕುಟುಂ ಸಂಬಂಧಿಕರಿಗೂ ಗುಲಾಮರಿಗೂ ವಿಶೇಷವಾಗಿ ಏನಾದರೂ ನೀಡ ಬಯಸಿರುವುದರ ಹೊರತ ಇದಕ್ಕೆ ಬೇರೆ ಯಾವ ಕಾರಣವೂ ಕಾಣಿಸುವುದಿಲ್ಲವೆಂದು ಈ ಬಗ್ಗೆ ಅಬೂ ಉಬೈ ಹೇಳಿದ್ದಾರೆ." (ಅಲ್ ಅಮ್ವಾಲ್: ಪುಟ: 597

ಸಂಗ್ರಹಿಸಿದ ಪ್ರದೇಶದಲ್ಲಿಯೇ ಝಕಾತ್ ವಿತರಿಸಬೇಕೆಂಬ ವಿಷಯದಲ್ಲಿ ವಿದ್ವಾಂಸರಲ್ಲಿ ಒಮ್ಮತಾಭಿಪ್ರಾಯವಿದೆ. ಕೆಲವೊಮ್ಮೆ ನಿರ್ದಿಷ್ಟ ಪ್ರದೇಶಗಳಲ್ಲಿ ಝಕಾತಿಗೆ ಅರ್ಹವಾ ಕೆಲವು ವರ್ಗಗಳು ಇಲ್ಲದಿದ್ದರೆ ಅಥವಾ ಝಕಾತ್ ಧಾರಾಳವಿದ್ದು ಹಕ್ಕುದಾರರು ಕಡಿಮೆಯಿದ್ದ ಅದನ್ನು ಒಂದೆಡೆಯಲ್ಲಿಯೇ ವಿತರಣೆ ಮಾಡುವ ಅಗತ್ಯವಿರಲಾರದು. ಹಾಗಾದರೆ ಉಳಿ ಮೊತ್ತವನ್ನು ಬೇರೆಡೆಗಳಲ್ಲಿ ವಿತರಣೆ ಮಾಡಬಹುದು. ಅಥವಾ ಅಗತ್ಯಾನುಸಾ ವಿನಿಯೋಗಿಸಲಿಕ್ಕಾಗಿ ಆಡಳಿತಗಾರರಿಗೆ ಒಪ್ಪಿಸಬಹುದು ಯಾ ಬೇರೆ ಕರ್

ಕೊಂಡೊಯ್ಯಬಹುದೆಂದು ವಿದ್ವಾಂಸರು ಒಕ್ಕೊರಳಿನಿಂದ ಹೇಳಿದ್ದಾರೆ. ಆದರೆ ಈ ಬಗ್ಗೆ ಇಮಾಮ್ ಮಾಲಿಕ್‌ರ ಹೇಳಿಕೆಯು ನನ್ನನ್ನು ಚಕಿತಗೊಳಿಸಿದೆ; ನಿರ್ದಿಷ್ಟ ಪ್ರದೇಶದವರಿಗೆ ಅಗತ್ಯವಿದ್ದರೆ ಆ ಪ್ರದೇಶದ ಝಕಾತನ್ನು ಬೇರೆಡೆಗೆ ಕೊಂಡೊಯ್ಯಬಾರದು. ಆ ಬಗ್ಗೆ ವಿಚಾರಣೆ, ತನಿಖೆ ನಡೆಸಿದ ಬಳಿಕ ಆಡಳಿತಾಧಿಕಾರಿಯೇ ವಿತರಣೆ ಮಾಡಬೇಕು.

(ಅಲ್ ಅಮ್ವಾಲ್ - ಪುಟ:597)

ಸಹ್ನೂನ್[1] ಹೀಗೆಂದಿದ್ದಾರೆ: ಯಾವುದಾದರೊಂದು ಪ್ರದೇಶದಲ್ಲಿ ಕಡುಬಡತನ ವಿದೆಯೆಂಬ ಸುದ್ದಿ ದೊರೆತರೆ ಆಡಳಿತಗಾರನು ಬೇರೆ ಪ್ರದೇಶದಲ್ಲಿ ವಿತರಣೆ ಮಾಡಬೇಕಾದ ಝಕಾತಿನ ಒಂದಂಶವನ್ನು ಬರಗಾಲ ಪೀಡಿತ ಪ್ರದೇಶದಲ್ಲಿ ವಿತರಣೆ ಮಾಡಬಹುದು. ಯಾಕೆಂದರೆ, ಅಂತಹ ಪ್ರದೇಶಗಳಿಗೆ ಆದ್ಯತೆ ನೀಡಬೇಕಾಗಿದೆ. ಮುಸ್ಲಿಮರು ಪರಸ್ಪರ ಸಹೋದರರು, ಒಬ್ಬನು ಇನ್ನೊಬ್ಬನನ್ನು ಅಕ್ರಮಿಸುವುದಿಲ್ಲ ಅಥವಾ ಅಕ್ರಮಕ್ಕೆ ಒಪ್ಪಿಸುವುದಿಲ್ಲ.

(ಅಲ್ ಮುದವ್ವನ ಭಾಗ :1, ಪುಟ: 246)

## ಝಕಾತ್

### ಪ್ರಥಮ ಸಾಮಾಜಿಕ ವಿಮೆ

ಝಕಾತ್ ವ್ಯವಸ್ಥೆಯು ಜಗತ್ತು ನೋಡಿರುವ ಸಾಮಾಜಿಕ ವಿಮೆಯಲ್ಲಿ ಮೊದಲನೆಯದ್ದಾಗಿದೆ. ಅದು ವೈಯಕ್ತಿಕವಾಗಿ ಸ್ವಂತ ಇಚ್ಛೆಯಿಂದ ನೀಡುವ ದಾನ ಧರ್ಮವಲ್ಲ. ಸರಕಾರವು ಸುವ್ಯಸ್ಥಿತ ಮತ್ತು ಶಾಶ್ವತವಾಗಿ ನೀಡುವ ಸಹಾಯ ಧನವಾಗಿದೆ. ಅದು ಜೀವನಾವಶ್ಯಕತೆಗಳನ್ನು ಪೂರೈಸಲು ಅನ್ಯರ ನೆರವಿನ ಅಗತ್ಯವಿರುವ ಎಲ್ಲರನ್ನೂ ಸ್ವಾವಲಂಬಿಗಳಾಗಿಸುವ ಉದ್ದೇಶವನ್ನು ಹೊಂದಿದೆ. ಆಹಾರ, ಬಟ್ಟೆಬರೆ, ವಸತಿ ಇತ್ಯಾದಿ ಮೂಲಬೇಡಿಕೆಗಳಲ್ಲಿ ದುಂದು ದುರ್ವ್ಯಯವಿಲ್ಲದಂತಹ ಸ್ವಾವಲಂಬನೆ. ಮುಸ್ಲಿಮರಿಗೆ ಮಾತ್ರವಲ್ಲದೇ, ರಾಷ್ಟ್ರದ ಸಂರಕ್ಷಣೆಯಲ್ಲಿ ಬಾಳುವ ಯಹೂದಿ-ಕ್ರೈಸ್ತ ಮುಂತಾದವರೆಲ್ಲರಿಗೂ ಇದರ ಅರ್ಹತೆಯಿದೆ.

ಪಾಶ್ಚಾತ್ಯ ಜಗತ್ತು ಇಂತಹ ಸಾಮಾಜಿಕ ವಿಮೆ ಬಗ್ಗೆ ಇತ್ತೀಚೆಗಷ್ಟೆ ಆಲೋಚಿಸಲಾರಂಭಿಸಿತ್ತು. ಆದರೆ ಪ್ರತಿಯೊಬ್ಬ ಬಡವನನ್ನೂ ಸೇರಿಸಿಕೊಳ್ಳುವ ಮತ್ತು ಆತನಿಗೂ ಕುಟುಂಬಕ್ಕೂ ಜೀವನಾವಶ್ಯಕತೆಗಳನ್ನು ಸಂಪೂರ್ಣವಾಗಿ ಒದಗಿಸುವ ನಿಟ್ಟಿನಲ್ಲಿ ಇಸ್ಲಾಮಿನ ಮಟ್ಟವನ್ನು ತಲಪಲು ಅವರಿಂದ ಸಾಧ್ಯವಾಗಿಲ್ಲ. ಇದಕ್ಕೆ ದೇವ ಸಂಪ್ರೀತಿ ಅಥವಾ ಬಡವರೊಂದಿಗಿನ ಕರುಣೆಯ ಬದಲಾಗಿ ಕಾರ್ಮಿಕರ ಹೋರಾಟ, ಸೋಶಿಯಲಿಝಮ್

---

1. ಅಬ್ದುಸ್ಸಲಾಮ್ ಸಹ್ನೂನ್ (776-856). ಖೈರ್‌ವಾನ್‌ನ ಕಾಝಿ. 'ಅಲ್ ಮುದವ್ವನ' ಎಂಬ ಪ್ರಖ್ಯಾತ ಕೃತಿಯ ಕರ್ತೃ. ಪಶ್ಚಿಮದಲ್ಲಿ ಇವರು ಮಾಲಿಕಿ ಮದ್ಹಬ್‌ನ ಪ್ರಚಾರಕರಾಗಿದ್ದರು.

ಮತ್ತು ಕಮ್ಯೂನಿಝಮ್ ಮುಂತಾದ ತತ್ತ್ವ ಸಿದ್ಧಾಂತಗಳ ಒತ್ತಡವೇ ಪ್ರೇರಕವಾಗಿತ್ತು. ದ್ವಿತೀಯ ಮಹಾಯುದ್ಧವೂ ಇನ್ನೊಂದು ಕಾರಣವಾಗಿತ್ತು. ಜನರನ್ನು ಸಂತೃಪ್ತಗೊಳಿಸಿ ಯುದ್ಧರಂಗದಲ್ಲಿ ಅವರನ್ನು ಸ್ಥಿರಗೊಳಿಸುವ ಸೌಲಭ್ಯಗಳು!

ಪಾಶ್ಚಾತ್ಯ ಜಗತ್ತಿನಲ್ಲಿ ಸಾಮಾಜಿಕ ವಿಮೆಯು 1941 ರಲ್ಲಿ ಜಾರಿಯಾಗಿತ್ತು. ಅಂದಿನ ಖ್ಯಾತ ಅಟ್ಲಾಂಟಿಕ್ ಒಪ್ಪಂದದಲ್ಲಿ, ಅಮೇರಿಕ ಮತ್ತು ಬ್ರಿಟನ್‌ಗಳು ಸಮಾಜಕ್ಕೆ ವ್ಯಕ್ತಿಗಳನೊಡನಿರುವ ಹೊಣೆಯನ್ನು ಕಡ್ಡಾಯವಾಗಿ ಖಾತ್ರಿಗೊಳಿಸುವ ತೀರ್ಮಾನ ಕೈಗೊಂಡಿದ್ದುವು. ಆದರೆ ಇಸ್ಲಾಮ್ ಧರ್ಮವು, ಶ್ರೀಮಂತರ ಹಿಡಿತದಿಂದ ಬಡವರನ್ನು ವಿಮೋಚನೆಗೊಳಿಸಲಿಕ್ಕಾಗಿ ಸಾಮಾಜಿಕ ವಿಮೆಯೆಂಬ ಕಲ್ಪನೆಯನ್ನು ಹಲವು ಶತಮಾನಗಳ ಹಿಂದೆಯೇ ರೂಢಿಗೊಳಿಸಿತ್ತು. ಇಸ್ಲಾಮಿ ರಾಷ್ಟ್ರವು ಅದಕ್ಕೆ ಸುವ್ಯವಸ್ಥಿತ ರೂಪುಗೊಟ್ಟು ಅದಕ್ಕಾಗಿ ಯುದ್ಧವನ್ನೂ ಮಾಡಿತ್ತು. ಹಾಗಿದ್ದರೂ ಈ ಕಲ್ಪನೆಯನ್ನು ರೂಪಿಸಿರುವ ಎಲ್ಲ ಶ್ಲಾಘನೆಗಳನ್ನೂ ಆಧುನಿಕ ಬರೆಹಗಾರರು ಯುರೋಪಿಗೆ ಅರ್ಪಿಸಿರುವುದು ಅಚ್ಚರಿದಾಯಕವಾಗಿದೆ. ಅವರು ನಮ್ಮ ಇತಿಹಾಸ ಮತ್ತು ಪರಂಪರೆಗೆ ಮಣ್ಣು ಹಾಕಿ ಮುಚ್ಚಿದ್ದಾರೆ.

1952 ರಲ್ಲಿ ಲೀಗ್ ಆಫ್ ಅರಬ್ ನೇಶನ್ಸ್, ಸಾಮಾಜಿಕ ಕರ್ತವ್ಯಗಳ ಅಧ್ಯಯನಕ್ಕಾಗಿ ಡೆಮಾಸ್ಕಸ್‌ನಲ್ಲಿ ಜರಗಿಸಿದ ಸಮ್ಮೇಳನದಲ್ಲಿ ಸಾಮಾಜಿಕ ಕರ್ತವ್ಯಗಳ ಇತಿಹಾಸದ ಕುರಿತು ಸಮ್ಮೇಳನಾಧ್ಯಕ್ಷ ಡೇನಿಯಲ್ ಸಿ. ಜೋರ್ಜ್ ಮಾಡಿದ ಭಾಷಣವು ಈ ವರ್ಗಕ್ಕೆ ಸೇರಿದೆ. ಅವರು ತಮ್ಮ ಭಾಷಣದಲ್ಲಿ, ಕಳೆದ ಶತಮಾನಗಳಲ್ಲಿ ಬಡವರಿಗೆ ಹಸಿವಿನ ಮರಣದಿಂದ ಪಾರಾಗಲು ಭಿಕ್ಷೆ ಅಥವಾ ದಾನಧರ್ಮಗಳೇ ಆಧಾರವಾಗಿದ್ದುವು. ಬಡವರ್ಗಗಳ ಸಂರಕ್ಷಣೆಗಾಗಿ ಸರಕಾರಗಳು 17ನೇ ಶತಮಾನದ ಬಳಿಕ ಕ್ರಮ ಕೈಗೊಂಡುವು. ಬಡವರ ಸಂರಕ್ಷಣೆಗಾಗಿ ಆರಂಭ ಕಾಲದಲ್ಲಿ ಏರ್ಪಡಿಸಿದ ವ್ಯವಸ್ಥೆಗಳು ಪ್ರಾದೇಶಿಕ ಮಟ್ಟಕ್ಕೆ ಸೀಮಿತವಾಗಿತ್ತೆಂದು ಹೇಳಿದ್ದರು.

ಈ ಹೇಳಿಕೆಗೆ ಇಸ್ಲಾಮಿ ಇತಿಹಾಸ ಮತ್ತು ಝಕಾತ್ ವ್ಯವಸ್ಥೆಯ ನೈಜ ಸ್ವರೂಪದ ತಿಳುವಳಿಕೆಯಿಲ್ಲದಿರುವುದೇ ಕಾರಣವಾಗಿದೆ. ಝಕಾತ್ ವ್ಯವಸ್ಥೆಯು, ಸಂಗ್ರಹ ಮತ್ತು ವಿತರಣೆಯ ಸಂಪೂರ್ಣ ಹೊಣೆಯನ್ನು ಸರಕಾರಕ್ಕೆ ವಹಿಸಿಕೊಟ್ಟಿರುವ ಹೊಣೆಗಾರಿಕೆಯಾಗಿದೆ.ಅದು ವ್ಯಕ್ತಿಗಳ ಔದಾರ್ಯ ಅಥವಾ ಅವರು ಸ್ವಇಚ್ಛೆಯಿಂದ ನೀಡುವ ದಾನಧರ್ಮಗಳನ್ನು ಅವಲಂಬಿಸಿರುವ ವ್ಯವಸ್ಥೆಯಲ್ಲ. ಬಡವರಿಗೆ ಅಲ್ಲಾಹನು ನಿರ್ಣಯಿಸಿರುವ ಹಕ್ಕು ಮತ್ತು ಶ್ರೀಮಂತರಿಗೆ ಶಾಶ್ವತ ಹೊಣೆಗಾರಿಕೆಯಾಗಿದೆ. ಶಾಶ್ವತ ಮತ್ತು ಸುಸ್ಥಿರವೆಂಬುದೇ ಆ ಹೊಣೆಗಾರಿಕೆಯ ವೈಶಿಷ್ಟ್ಯವಾಗಿದೆ. ಸರಕಾರ ವಸೂಲು ಮಾಡದಿದ್ದರೂ ಶ್ರೀಮಂತರು ಆ ಹೊಣೆಯಿಂದ ಮುಕ್ತರಾಗುವುದಿಲ್ಲ. ತಮ್ಮ ಪ್ರಭುವಿನ ಸಂಪ್ರೀತಿಯ ಆಕಾಂಕ್ಷೆಯಿಂದ ಅದನ್ನು ಸಂದಾಯ ಮಾಡದಿದ್ದರೆ ಅವರ ವಿಶ್ವಾಸ ಪರಿಪೂರ್ಣ ಅಥವಾ ಕರ್ಮವು ಅಂಗೀಕಾರಾರ್ಹವಾಗುವುದಿಲ್ಲ. ಅಲ್ಲಾಹನು ತನ್ನ ದಾಸರಿಗೆ ವಹಿಸಿಕೊಟ್ಟ ಹಣದಲ್ಲಿ ಝಕಾತ್ ಬಡವರ ಹಕ್ಕಾಗಿದ್ದು ಅದರ ಗಳಿಕೆಗಾಗಿ ಹೋರಾಡುವುದು ಕೂಡಾ ಸಮಾಜದ

ಕರ್ತವ್ಯವಾಗಿದೆಯೆಂದು ಇಸ್ಲಾಮ್ ಕಲಿಸುತ್ತದೆ.

ಆಧುನಿಕ ಸಾಮಾಜಿಕ ವಿಮೆಗಳ ಸ್ವರೂಪವನ್ನು ವಿಶ್ಲೇಷಿಸುತ್ತಾ ಮಿ|ಜಾರ್ಜ್ ಹೇಳುತ್ತಾರೆ: ಬಡವರ್ಗದ ನೆರವಿಗಾಗಿ ಹಳೆಯ ಕಾಲದಲ್ಲಿ ರಚಿಸಿದ ವ್ಯವಸ್ಥೆಗಳೊಂದಿಗೆ ಹೋಲಿಸಿದಾಗ ಆಧುನಿಕ ಸಾಮಾಜಿಕ ವಿಮೆಗಳಲ್ಲಿ ಕೆಲವು ವೈಶಿಷ್ಟ್ಯಗಳು ಎದ್ದು ತೋರುತ್ತಿವೆ. ಈ ವ್ಯವಸ್ಥೆಯು ಕೇವಲ ಬಡವರ್ಗಗಳಿಗೆ ಮಾತ್ರವಲ್ಲದೇ ಇತರ ವರ್ಗಗಳಿಗೆ ಸೇರಿದ ಜನರಿಗೂ ಉಪಯುಕ್ತವಾಗಿದೆ. ಕೆಲವು ಸೀಮಿತ ಉಪಾಧಿಗಳು ಪೂರ್ಣಗೊಂಡರೆ, ಅದು ಪರಸ್ಪರ ನೆರವಿನ ಹೊಣೆಗಾರಿಕೆ ಎಂಬ ಪರಿಗಣನೆಗೆ ಹೆಚ್ಚು ಒತ್ತು ನೀಡುತ್ತದೆ. ನಿರ್ದಿಷ್ಟ ನಿಷ್ಪತ್ತಿಯನ್ವಯ ಅದರ ಮೊತ್ತವನ್ನು ಸಲ್ಲಿಸಬೇಕು. ಅದರ ವಿತರಣೆಗೆ ಕೆಲವು ಕ್ರಮಬದ್ಧ ವಿಧಾನಗಳಿವೆ... ಅದರಲ್ಲಿ ಅನ್ಯರಿಂದ ಬೇಡಿ ಪಡೆಯುವುದರಿಂದ ಬಡವರಿಗಾಗಿರುವ ಅವಮಾನವೂ ಬಹಳ ಗೋಪ್ಯವಾಗಿದೆ. ಬಡವರು ಇತರರಿಂದ ನೆರವು ಪಡೆಯಬೇಕಾದ ಹೆಚ್ಚಿನೆಲ್ಲ ಸಂದರ್ಭಗಳಲ್ಲಿಯೂ ಅವರಿಗಾಗುವ ಪೌರ ಹಕ್ಕುಗಳ ನಷ್ಟವು ಈ ವ್ಯವಸ್ಥೆಯಿಂದ ಆಗುವುದಿಲ್ಲ.

ಆಧುನಿಕ ಸಾಮಾಜಿಕ ವಿಮೆಗಳ ವೈಶಿಷ್ಟ್ಯಗಳೆಂದು ವಿಶ್ಲೇಷಕನು ವಾದಿಸುತ್ತಿರುವ ಈ ವೈಶಿಷ್ಟ್ಯಗಳಿರುವ ವ್ಯವಸ್ಥೆ ಹಿಂದಿನ ಕಾಲದಲ್ಲಿ ಇರಲಿಲ್ಲವೆಂಬ ಹೇಳಿಕೆಯೂ ಯುರೋಪಿನ ಇತಿಹಾಸದ ಮಟ್ಟಿಗೆ ಸರಿಯಾಗಿರಬಹುದು. ಆದರೆ, ಇಸ್ಲಾಮಿನ ಇತಿಹಾಸವು ಅವರ ಹೇಳಿಕೆಯನ್ನು ಬೆಂಬಲಿಸುವುದಿಲ್ಲ.

ಇಸ್ಲಾಮಿನ ಝಕಾತ್ ವ್ಯವಸ್ಥೆಯಲ್ಲಿ, ಆಧುನಿಕ ಸಾಮಾಜಿಕ ಭದ್ರತಾ ವ್ಯವಸ್ಥೆ ಅಥವಾ ವಿಮೆ ಎನ್ನಲಾಗುವ ವೈಶಿಷ್ಟ್ಯಗಳೂ ಅದಕ್ಕಿಂತ ಅಧಿಕವೂ ನಿಚ್ಚಳವಾಗಿದೆ. ನಾವು ಗ್ರಹಿಸಿರುವಂತೆ ಇಸ್ಲಾಮೀ ದೃಷ್ಟಿಯಲ್ಲಿ ಝಕಾತ್ ನಿರ್ದಿಷ್ಟ ಹಕ್ಕು ಮತ್ತು ಕರ್ತವ್ಯವಾಗಿದೆ. ಅದರ ಸಂಗ್ರಹ ಮತ್ತು ವಿತರಣೆಯು ಸರಕಾರದ ಹೊಣೆಯಾಗಿದೆ. ಜೀವನೋಪಾಯಕ್ಕೆ ಯಾವುದೇ ಆದಾಯವಿಲ್ಲದವರಿಗೂ, ಇರುವ ಆದಾಯ ಅಪರ್ಯಾಪ್ತವಾಗಿರುವವರಿಗೂ ಝಕಾತ್ ದೊರೆಯುತ್ತದೆ. ಈ ಅಂಶಗಳನ್ನು ಆಧುನಿಕ ಸಾಮಾಜಿಕ ವಿಮೆಯ ವಕ್ತಾರರಿಗೆ ಸಾಧಿಸಲಾಗಿಲ್ಲ.

9

# ಸರಕಾರದ ಕರ್ತವ್ಯ

ಬಡತನ ನಿರ್ಮೂಲನಕ್ಕೆ ಮುಖ್ಯವಾಗಿ ಝಕಾತನ್ನೇ ಬಳಸಬೇಕು. ಆದರೂ ರಾಷ್ಟ್ರದ ಇತರ ಆದಾಯಗಳನ್ನೂ ಬಳಸಬಹುದು. ಖಾಸಗಿ ಒಡೆತನವಿಲ್ಲವೆಂದು ವಿದ್ವಾಂಸರು ಸಾಮಾನ್ಯವಾಗಿ ಅಂಗೀಕರಿಸಿದ ಹಾಗೂ ಸರಕಾರದ ಸಂಪೂರ್ಣ ಸ್ವಾಮ್ಯ ಅಥವಾ ಸಹಭಾಗಿತ್ವವಿರುವ ಖನಿಜ ನಿಕ್ಷೇಪ ಇತ್ಯಾದಿಗಳ ಆದಾಯವನ್ನು ಸಮಾಜ ಕಲ್ಯಾಣಕ್ಕಾಗಿ ಬಳಸ ಬಹುದು. ವಿಶೇಷತಃ ಝಕಾತ್‌ನ ಮೊತ್ತವು ಕಡಿಮೆಯಾದರೆ ಸಮರಾರ್ಜಿತ ಸಂಪತ್ತು, ಗಣಿಗಾರಿಕೆ ಇತ್ಯಾದಿ ದೇಶದ ಆದಾಯಗಳಲ್ಲಿ ಬಡವರಿಗೂ ನಿರ್ಗತಿಕರಿಗೂ ಹಕ್ಕಿದೆ. ಅಲ್ಲಾಹನು ಹೇಳಿರುವನು:

"ಸತ್ಯವಿಶ್ವಾಸಿಗಳೇ ನೀವು ಗಳಿಸಿದ ಯಾವುದೇ ಸಮರಾರ್ಜಿತ ಸೊತ್ತಿನ ಐದನೇ ಒಂದಂಶವು ಅಲ್ಲಾಹನಿಗೆ, ಅವನ ಸಂದೇಶವಾಹಕರಿಗೆ, ಸಂಬಂಧಿಕರಿಗೆ, ಅನಾಥರಿಗೆ, ನಿರ್ಗತಿಕರಿಗೆ ಮತ್ತು ಪ್ರಯಾಣಿಕರಿಗಾಗಿದೆ." (ಅಲ್ ಅನ್‌ಫಾಲ್ :41)

'ಅಲ್ಲಾಹನು ನಗರವಾಸಿಗಳಿಂದ ಸ್ವಾಧೀನಪಡಿಸಿ ತನ್ನ ಸಂದೇಶವಾಹಕರಿಗೆ ನೀಡಿರುವ ಸಂಪತ್ತು, ಅಲ್ಲಾಹನಿಗೂ ಆತನ ಪ್ರವಾದಿಗೂ ಸಂಬಂಧಿಕರಿಗೂ ಅನಾಥರಿಗೂ ನಿರ್ಗತಿಕರಿಗೂ ಪ್ರಯಾಣಿಕರಿಗೂ ಸೇರಿದೆ. ಅದು ನಿಮ್ಮ ಶ್ರೀಮಂತರಲ್ಲಿ ಮಾತ್ರ ವಿನಿಮಯವಾಗುತ್ತಿರಬಾರದೆಂದು (ಹೀಗೆ ಮಾಡಲಾಗಿದೆ.) (ಅಲ್ ಹಶ್ರ್:7)

ಝಕಾತ್‌ನಲ್ಲಿ ಬಡವರ ಹಕ್ಕು ಸಂರಕ್ಷಣೆಯ ಕುರಿತು ಕರ್ಮಶಾಸ್ತ್ರಜ್ಞರು ಬಹಳ ಎಚ್ಚರಿಕೆ ವಹಿಸಿದ್ದಾರೆ. ದೇಶದ ರಕ್ಷಣೆ ಇತ್ಯಾದಿ ಸಾರ್ವಜನಿಕ ಅವಶ್ಯಕತೆಗಳಿಗಾಗಿಯೂ ಝಕಾತ್‌ನಿಧಿಗೆ ಸಾರ್ವಜನಿಕ ಬಜೆಟ್‌ನಲ್ಲಿ ಕೊರತೆಯಿದ್ದು ಝಕಾತ್‌ನ ನಿಧಿಯಲ್ಲಿ ಉಳಿತಾಯವಿದ್ದರೂ ಕೈ ಹಾಕಬಾರದೆಂದು ಅವರು ಅಭಿಪ್ರಾಯ ಪಟ್ಟಿದ್ದಾರೆ. ಇನ್ನು ಗತ್ಯಂತರವಿಲ್ಲದೆ ಝಕಾತ್ ನಿಧಿಯಿಂದ ತೆಗೆದರೂ ಅದನ್ನು ಸಾಲವೆಂದು ಪರಿಗಣಿಸಿ ಸಾರ್ವಜನಿಕ ಬೊಕ್ಕಸದಲ್ಲಿ ಮಿಗತೆಯಾದಾಗ ಮರು ಪಾವತಿ ಮಾಡಬೇಕು. ಇಮಾಮ್ ಅಬೂ ಹನೀಫಾರ ಸಂಗಾತಿಗಳಲ್ಲೋರ್ವರಾಗಿದ್ದ ಇಮಾಮ್ ಮುಹಮ್ಮದ್ ಬಿನ್ ಹಸನ್ ಹೀಗೆ ಹೇಳಿದ್ದಾರೆ:

"ಝಕಾತ್‌ನ ಉಸ್ತುವಾರಿ ವಹಿಸಿರುವ ಆಡಳಿತಾಧಿಕಾರಿಯು ಅಲ್ಲಾಹನ ಭಯವಿರಿಸಿ ಕೊಳ್ಳಲಿ. ಯಾವೊಬ್ಬ ಬಡವನಿಗೂ ಆತನ ಕುಟುಂಬಕ್ಕೂ ಸಾಕಷ್ಟು ಮೊತ್ತ ದೊರೆಯದೆ ವಂಚಿತರಾಗದಂತೆ ಎಚ್ಚರವಹಿಸಲಿ... ಝಕಾತ್ ಖಾತೆಯಲ್ಲಿ ಸಾಕಷ್ಟು ಹಣವಿಲ್ಲದಿದ್ದರೆ ಭೂಕಂದಾಯದಿಂದ ತೆಗೆಯಬೇಕು. ಅದನ್ನು ಝಕಾತ್ ಖಾತೆಯ ಮೇಲಿನ ಸಾಲವೆಂದು ಪರಿಗಣಿಸಲ್ಪಡುವುದಿಲ್ಲ. ಭೂಕಂದಾಯ ಹಾಗೂ ಅಂತಹ ಇತರ ತೆರಿಗೆಗಳನ್ನು ಸಾರ್ವಜನಿಕ

ಅವಶ್ಯಕತೆಗಳಿಗಾಗಿ ಬಳಸಬೇಕೆಂದು ಈ ಹಿಂದೆ ಸ್ಪಷ್ಟಪಡಿಸಲಾಗಿದೆಯಷ್ಟೆ. ಆದರೆ, ತೆರಿಗೆ ಬಾಬ್ತಿನಲ್ಲಿ ಹಣವಿಲ್ಲದಿರುವಾಗ ಝಕಾತ್ ಫಂಡಿನಿಂದ ರಾಷ್ಟ್ರ ರಕ್ಷಣೆಯಂತಹ ಅಗತ್ಯಗಳಿಗಾಗಿ ವ್ಯಯಿಸುವ ಮೊತ್ತವನ್ನು, ಕಂದಾಯ ಖಾತೆಯು ಝಕಾತ್ ಖಾತೆಗೆ ಮರುಪಾವತಿ ಮಾಡಬೇಕು. ಯಾಕೆಂದರೆ, ಝಕಾತ್ ಬಡವರ ಮತ್ತು ನಿರ್ಗತಿಕರ ಹಕ್ಕಾಗಿದೆ.

(ಸರ್‌ಖಸಿ, ಅಲ್ ಮಬ್‌ಸೂತ್ ಭಾಗ -3 ಪುಟ:18)

ಸಾರ್ವಜನಿಕ ಬೊಕ್ಕಸವು ಬಡವರ ಮತ್ತು ನಿರ್ಗತಿಕರ ಅಂತಿಮ ಆಶ್ರಯವಾಗಿದೆ. ಯಾಕೆಂದರೆ ಅದು ಆಡಳಿತಗಾರನ ಅಥವಾ ಗಣ್ಯ ವರ್ಗದ ಗುತ್ತಿಗೆಯಲ್ಲ. ದೇಶದ ಸರ್ವ ಪ್ರಜೆಗಳದ್ದಾಗಿದೆ. ಪ್ರವಾದಿ(ಸ) ಹೇಳಿರುವರು:

"ಓರ್ವ ಮುಸ್ಲಿಮನೊಂದಿಗೆ ಆತನಿಗಿರುವುದಕ್ಕಿಂತ ಹೆಚ್ಚಿನ ಹೊಣೆ ನನಗಿದೆ. ಆತನು ಮರಣ ಹೊಂದಿದರೆ ಸೊತ್ತು ವಾರೀಸುದಾರರಿಗೆ ಸೇರುತ್ತದೆ. ಆತನು ಸಾಲ ಮತ್ತು ಅನಾಥರನ್ನು ತೊರೆದು ಮರಣ ಹೊಂದಿದರೆ ಅದರ ಜವಾಬ್ದಾರಿಯನ್ನು ನಾನೇ ವಹಿಸಬೇಕು."

(ಬುಖಾರಿ, ಮುಸ್ಲಿಮ್)

ಇಮಾಮ್ ಅಹ್ಮದ್‌ರು ಮಾಲಿಕ್‌ಬಿನ್ ಔಸ್‌ರಿಂದ ಉದ್ಧರಿಸಿದ್ದಾರೆ: ಉಮರ್‌ರು ಮೂರು ವಿಷಯಗಳಿಗೆ ಆಣೆ ಹಾಕುತ್ತಿದ್ದರು. 1. ಅಲ್ಲಾಹನಾಣೆ, ಈ ಹಣದಲ್ಲಿ (ಯುದ್ಧ ಸಂಪತ್ತು ಮತ್ತು ಸಾರ್ವಜನಿಕ ಸಂಪತ್ತು) ತುಲನಾತ್ಮಕವಾಗಿ ಯಾರಿಗೂ ಹಕ್ಕಿಲ್ಲ. ಇತರರಂತೆಯೇ ನನಗೂ ಇಲ್ಲ. 2. ಅಲ್ಲಾಹನಾಣೆ, ಈ ಹಣದಲ್ಲಿ ಪಾಲು ಪಡೆಯುವ ಅರ್ಹತೆಯಿಲ್ಲದ ಯಾವೊಬ್ಬ ಮುಸ್ಲಿಮನೂ ಇಲ್ಲ. 3. ಅಲ್ಲಾಹನಾಣೆ! ಈ ಹಣದಲ್ಲಿ ಓರ್ವ ಕುರುಬನು ಸನ್‌ಆ ಪರ್ವತದಷ್ಟು ದೊಡ್ಡ ಪಾಲಿಗೆ ಅರ್ಹನಾದರೂ ಅದನ್ನು ಸಂಪೂರ್ಣವಾಗಿ ನಾನು ಆತನಿಗೆ ನೀಡುತ್ತೇನೆ.

ಶೌಕಾನಿ ಹೇಳಿರುವಂತೆ ಉಮರ್‌ರ ಈ ಮಾತುಗಳಲ್ಲಿ ಕೆಲವು ಪಾಠಗಳಿವೆ. ಆಡಳಿತಗಾರನೂ ಇತರ ಜನರೂ ಸಮಾನರು. ಪರಿಗಣನಾ ಕ್ರಮ ಅಥವಾ ಪಾಲಿನ ಪ್ರಮಾಣದಲ್ಲಿ ಅವರಿಗೆ ಯಾವುದೇ ಶ್ರೇಷ್ಠತೆಯಿಲ್ಲ. ಎಲ್ಲ ಮಾನವರೂ- ಅವರು ರಾಷ್ಟ್ರದ ಯಾವುದೇ ಮೂಲೆಯಲ್ಲಿರಲಿ ಅಥವಾ ಎಷ್ಟೇ ಕೆಳಮಟ್ಟದಲ್ಲಿರಲಿ- ಇಸ್ಲಾಮೀ ರಾಷ್ಟ್ರದ ಆಶ್ರಯದಲ್ಲಿದ್ದಾರೆ. ಪ್ರತಿಯೊಬ್ಬರಿಗೂ ಸ್ವಂತ ಹಕ್ಕು ಮತ್ತು ಬೇಡಿಕೆಯನ್ವಯ ಸಾರ್ವಜನಿಕ ಸಂಪತ್ತಿನಿಂದ ಪಾಲು ಪಡೆಯುವ ಅರ್ಹತೆಯಿದೆ.

ಸಹಾಯ ಧನದ ಈ ಅರ್ಹತೆ ಕೇವಲ ಮುಸ್ಲಿಮರಿಗೆ ಸೀಮಿತವಲ್ಲ. ಇಸ್ಲಾಮೀ ರಾಷ್ಟ್ರದ ಮುಸ್ಲಿಮೇತರರಿಗೂ ಸಾರ್ವಜನಿಕ ಸಂಪತ್ತಿನಲ್ಲಿ ಹಕ್ಕಿದೆ. ಹಿರಾದ ಕ್ರೈಸ್ತರೊಡನೆ ಖಾಲಿದ್ ಬಿನ್ ವಲೀದ್ ಮಾಡಿದ ಒಪ್ಪಂದದ ಶರ್ತಗಳನ್ನು ಅಬೂ ಯೂಸುಫ್‌ರು 'ಅಲ್ ಖರಾಜ್' ಎಂಬ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ. ಈ ರಾಜಕೀಯ ಒಪ್ಪಂದದಲ್ಲಿ, ಇರಾಕಿನ ಕ್ರೈಸ್ತ ಜನತೆಯನ್ನು ಬಡತನ, ರೋಗ, ವಾರ್ಧಕ್ಯ ಮುಂತಾದ ವಿವಶತೆಗಳಿಂದ ಸಂರಕ್ಷಿಸಿ ಅದಕ್ಕಾಗಿ

ಹಣ ವ್ಯಯಿಸುವ ಹೊಣೆಯನ್ನು, ಮುಸ್ಲಿಮ್ ರಾಷ್ಟ್ರವು ವಹಿಸಿಕೊಂಡಿತ್ತು. ಜಯಶಾಲಿಯಾದ ಸೇನಾಧಿಪತಿಯು, ಸೋತು ಒಪ್ಪಂದಕ್ಕೆ ಸಿದ್ಧವಾದ ಜನತೆಯ ಸಂರಕ್ಷಣೆಯ ಹೊಣೆಯನ್ನು ಆ ಮೂಲಕ ವಹಿಸಿಕೊಳ್ಳಲಾಗಿತ್ತು. ಅದರೊಂದಿಗೆ ಅವರಿಗೆ ಸ್ವಧರ್ಮಾದನ್ವಯ ಬಾಳುವ ಸ್ವಾತಂತ್ರ್ಯವನ್ನೂ ನೀಡಿಲಾಗಿತ್ತು. ಇದು ಇತಿಹಾಸದಲ್ಲಿಯೇ ಪ್ರಥಮ ಘಟನೆಯಾಗಿದೆ. ಅಲ್ಲಾಹನ ಖಡ್ಗವೆಂದು ಪ್ರಸಿದ್ಧರಾದ ಖಾಲಿದ್ ಬಿನ್ ವಲೀದ್‌ರ ಪ್ರಖ್ಯಾತ ಘೋಷಣೆಯು ಹೀಗಿತ್ತು:

ವೃದ್ಧಾಪ್ಯದಿಂದಾಗಿ ದುಡಿಯಲು ಅಶಕ್ತರಾದ, ಅನಾಹುತಕ್ಕೆ ತುತ್ತಾದ, ಶ್ರೀಮಂತನಾಗಿದ್ದರೂ ಈಗ ದಿವಾಳಿಯಾಗಿ ಸಾಲಗಾರರೇ ಆತನಿಗೆ ದಾನ ನೀಡಬೇಕಾದ ಸ್ಥಿತಿಯಲ್ಲಿರುವಂತಹ ಮಂದಿಗೆ, ಜಿಝಿಯಾದಲ್ಲಿ ವಿನಾಯಿತಿ ನೀಡಲಾಗುವುದು. ಅವರು ಇಸ್ಲಾಮೀ ರಾಷ್ಟ್ರದಲ್ಲಿ ಅಥವಾ ಪಲಾಯನ ಮಾಡಿದ ರಾಷ್ಟ್ರದಲ್ಲಿ ವಾಸವಾಗಿರುವ ತನಕ ಅವರಿಗೂ ಕುಟುಂಬಕ್ಕೂ ಮುಸ್ಲಿಮರ ಸಾರ್ವಜನಿಕ ಬೊಕ್ಕಸದಿಂದ ನೆರವು ಲಭಿಸುವುದು. ಇಸ್ಲಾಮೀ ರಾಷ್ಟ್ರದಿಂದ ಅಥವಾ ಪಲಾಯನ ಮಾಡಿದ ರಾಷ್ಟ್ರದಿಂದ ಹೊರಹೋದರೆ ಅವರಿಗೂ ಕುಟುಂಬಕ್ಕೂ ಜೀವನಾಂಶ ನೀಡುವ ಹೊಣೆ ಮುಸ್ಲಿಮರಿಗೆ ಇರಲಾರದು.

(ಅಲ್ ಖಿರಾಜ್, ಪುಟ:114)

ಈ ಒಪ್ಪಂದವನ್ನು ಅಬೂಬಕರ್‌ರ ಕಾಲದಲ್ಲಿ ಬರೆಯಲಾಗಿತ್ತು ಅದನ್ನು ಖಾಲಿದ್‌ರ ಜತೆ ಯುದ್ಧ ರಂಗದಲ್ಲಿದ್ದ ಸಹಾಬಿಗಳು ಅಂಗೀಕರಿಸಿದ್ದರು. ಖಲೀಫರು ಮತ್ತು ಉನ್ನತ ಸಹಾಬಿವರ್ಯರು ಅದನ್ನು ಪುಷ್ಟೀಕರಿಸಿದ್ದರು. ಇಂತಹ ಒಂದು ಒಪ್ಪಂದವನ್ನು ಮಾಡಿಕೊಂಡದ್ದಕ್ಕಾಗಿ ಖಾಲಿದ್‌ರನ್ನು ಯಾರೂ ನಿಂದಿಸಿದ ದಾಖಲೆಯಿಲ್ಲ. ಹೀಗೆ ಓರ್ವ ಸಹಾಬಿಯು ಇತರ ಸಹಾಬಿಗಳ ಸಂಪೂರ್ಣ ಅಂಗೀಕಾರದಿಂದ ಮಾಡುವ ಕ್ರಿಯೆಯನ್ನು ಕರ್ಮಶಾಸ್ತ್ರ ವಿದ್ವಾಂಸರು ಇಜ್ಮಾಅ್ ಅರ್ಥಾತ್, ಆಯಾ ಕಾಲದ ಇಸ್ಲಾಮೀ ವಿದ್ವಾಂಸರ ಒಮ್ಮತಾಭಿಪ್ರಾಯವೆಂದು ಪರಿಗಣಿಸಿದ್ದಾರೆ.

ಮುಸ್ಲಿಮೇತರರಿಗೆ ಜೀವಭದ್ರತೆ ಒದಗಿಸಬೇಕಾದುದು ಇಸ್ಲಾಮೀ ಸರಕಾರದ ಕರ್ತವ್ಯವೆಂದು ಸೂಚಿಸುವ ಒಂದು ಪ್ರಮುಖ ಘಟನೆಯು ಉಮರ್‌ರ ಕಾಲದಲ್ಲಿ ನಡೆದಿತ್ತು. ಇತಿಹಾಸವು ಅದನ್ನು ದಾಖಲಿಸಿದೆ. ಖುಲಫಾವುರ್ರಾಶಿದರ ಚಟುವಟಿಕೆಗಳು ಅನುಕರಣಾರ್ಹ ಮಾದರಿಯಾಗಿದೆ. ನ್ಯಾಯವಂತ ಆಡಳಿತಗಾರರು ಅದನ್ನು ಅಂಗೀಕರಿಸಿದ್ದಾರೆ. ಯಾಕೆಂದರೆ ಖುಲಫಾವುರ್ರಾಶಿದರು ಕೈಗೊಂಡ ಕ್ರಮಗಳು, ನಿರ್ಮಿಸಿದ ಕಾನೂನುಗಳು ಇಸ್ಲಾಮೀ ವ್ಯವಸ್ಥೆಯ ಭಾಗವೆಂದು ಪರಿಗಣಿಸಲ್ಪಡುತ್ತವೆ. ಪ್ರವಾದಿಚರ್ಯೆಯನ್ನು ಸಂರಕ್ಷಿಸಿ ಅನುಕರಿಸುವಂತೆಯೇ ಖುಲಫಾವುರ್ರಾಶಿದರ ಮಾದರಿಗಳನ್ನು ಸಂರಕ್ಷಿಸಿ ಅನುಕರಿಸಬೇಕಾದುದು ಮುಸ್ಲಿಮರ ಕರ್ತವ್ಯವಾಗಿದೆ. ಪ್ರವಾದಿಯವರು ಆ ಪ್ರಕಾರ ಉಪದೇಶಿಸಿದ್ದಾರೆ, "ನಿಮ್ಮಲ್ಲಿ ಇನ್ನೂ ಬದುಕುತ್ತಿರುವವರು ಅನೇಕ ಭಿನ್ನಾಭಿಪ್ರಾಯಗಳನ್ನು ಎದುರಿಸಲಿದ್ದೀರಿ. ಆಗ ನನ್ನ ಮತ್ತು ನನ್ನ ಬಳಿಕ ಬಂದ ಸನ್ಮಾರ್ಗಿಗಳಾದ ಖುಲಫಾವುರ್ರಾಶಿದರ ನಡವಳಿಕೆಗಳನ್ನು ಅನುಗಮಿಸಿ ಬಿಗಿ ಹಿಡಿಯಿರಿ."

ಬಸ್ರಾದ ರಾಜ್ಯಪಾಲರಾಗಿದ್ದ ಅದಿಯ್ಯ್ ಬಿನ್ ಅರ್ತಾತ್‌ರಿಗೆ, ಉಮರ್ ಬಿನ್ ಅಬ್ದುಲ್ ಅಝೀಝ್ ಸಂದೇಶ ರವಾನಿಸಿದ್ದರು. ತನ್ನ ಅಧಿಕಾರ ಸೀಮೆಯಲ್ಲಿರುವ ಪ್ರದೇಶಗಳಲ್ಲಿ ಜಾರಿಗೊಳಿಸಬೇಕಾದ ಪ್ರಮುಖ ಕಾರ್ಯಗಳನ್ನು ಅದರಲ್ಲಿ ಹೀಗೆ ವಿವರಿಸಲಾಗಿತ್ತು-

ದಿಮ್ಮಿ (ಮುಸ್ಲಿಮೇತರ ಪ್ರಜೆ)ಗಳಲ್ಲಿ ವೃದ್ಧರು ಮತ್ತು ದುಡಿಯಲಶಕ್ತರಾಗಿರುವವರಿಗೆ ಸಂರಕ್ಷಣೆ ನೀಡಬೇಕು. ಅವರ ಬೇಡಿಕೆಗಳನ್ನು ಮುಸ್ಲಿಮರ ಸಾರ್ವಜನಿಕ ಬೊಕ್ಕಸದಿಂದ ಪೂರೈಸಬೇಕು. ಖಲೀಫ ಉಮರ್‌ರ ಕಾಲದಲ್ಲಿ ನಡೆದ ಘಟನೆಯೊಂದನ್ನು ನಾನು ತಿಳಿದಿದ್ದೇನೆ. ಉಮರ್‌ರು ಒಮ್ಮೆ ಓರ್ವ ದಿಮ್ಮಿಯಾಗಿದ್ದ ವೃದ್ಧನನ್ನು ಕಂಡರು. ಅವರು ಆತನೊಡನೆ ಹೀಗೆ ಹೇಳಿದರು: "ನಿನ್ನೊಡನೆ ನಾವು ನ್ಯಾಯ ಪಾಲಿಸಲಿಲ್ಲ. ನಿನ್ನ ಯೌವನ ಕಾಲದಲ್ಲಿ ನಿನ್ನಿಂದ ನಾವು ಜಿಝಿಯಾ ಪಡೆದೆವು. ವಾರ್ಧಕ್ಯದಲ್ಲಿ ನಿನ್ನನ್ನು ಸಂಕಷ್ಟಕ್ಕೆ ದೂಡಿದ್ದೇವೆ!" ತರುವಾಯ ದಿಮ್ಮಿಯಾಗಿದ್ದ ಆ ವೃದ್ಧನ ಸ್ಥಿತಿ ಸುಧಾರಣೆಗಾಗಿ ಅಗತ್ಯವಿರುವ ಹಣವನ್ನು ಮುಸ್ಲಿಮರ ಸಾರ್ವಜನಿಕ ಬೊಕ್ಕಸದಿಂದ ಮಂಜೂರು ಮಾಡಿದರು.

(ಅಲ್ ಉಬೈದ- ಅಲ್ ಅಮ್ವಾಲ್, ಪುಟ :46)

ಸಾರ್ವಜನಿಕ ಬೊಕ್ಕಸದ ಶಾಶ್ವತ ಆದಾಯವಾಗಿರುವ ಝಕಾತ್, ಬಡವರ ಅವಶ್ಯಕತೆಗಳಿಗೆ ಸಾಕಾಗದೆ, ಮುಸ್ಲಿಮರು ಸ್ವತಃ ಪ್ರೀತಿ ಮತ್ತು ಸಹಾನುಭೂತಿಯಿಂದ ಅದಕ್ಕೆ ಇತರ ಏರ್ಪಾಡುಗಳನ್ನು ಮಾಡದಿದ್ದರೆ ಆ ಬಗ್ಗೆ ಶ್ರೀಮಂತರ ಮೇಲೆ ವಿಶೇಷ ಜವಾಬ್ದಾರಿಕೆಗಳನ್ನು ಹೊರಿಸುವುದು ಸರಕಾರದ ಕರ್ತವ್ಯವಾಗಿದೆ. ಈ ವಿಷಯವನ್ನು ಇನ್ನೊಂದೆಡೆಯಲ್ಲಿ ವಿವರವಾಗಿ ಪ್ರತಿಪಾದಿಸಲಾಗಿದೆ.

ಈ ವಿವರಣೆಗಳಿಂದ ಇಸ್ಲಾಮೀ ರಾಷ್ಟ್ರದ ಹೊಣೆಯು ಬಹಳ ಘನ, ಶ್ರೇಷ್ಠ ಮತ್ತು ರಚನಾತ್ಮಕವೆಂದು ವ್ಯಕ್ತವಾಗುತ್ತದೆ. ಅದು ಪೌರರ ಸಂಪತ್ತು ಮತ್ತು ಸ್ವಾತಂತ್ರ್ಯ ರಕ್ಷಣೆಗೆ ಸೀಮಿತವಾಗಿಲ್ಲ. ಏಡಮ್ ಸ್ಮಿತ್‌ರಂತಹ ವೈಯಕ್ತಿಕ ಸ್ವಾತಂತ್ರ್ಯ ಮತ್ತು ಅರ್ಥ ವ್ಯವಸ್ಥೆಯ ವಕ್ತಾರರ ಅಭಿಪ್ರಾಯದಲ್ಲಿ, ರಾಷ್ಟ್ರದಲ್ಲಿ ಶಾಂತಿ ಸ್ಥಾಪನೆ, ಅಕ್ರಮ; ಅರಾಜಕತೆಗಳ ನಿವಾರಣೆ-ಮಾತ್ರ ಸರಕಾರದ ಹೊಣೆಯಾಗಿದೆ. ತರುವಾಯ ಕೆಲವು ಕಾನೂನುಗಳಿಗೆ ಬದ್ಧವಾಗಿ ಜನರನ್ನು ಸ್ವತಂತ್ರವಾಗಿ ಬಿಟ್ಟು ಬಿಡಬೇಕು. ಅವರು ಅದನ್ನು ನೈಸರ್ಗಿಕ ಕಾನೂನುಗಳೆಂದು ಕರೆಯುತ್ತಾರೆ. ಸ್ವಯಂ ಅಳಿಯುವ ಅಥವಾ ಅಪ್ರತ್ಯಕ್ಷರಾಗುವ ತನಕ ಬಡ ದುರ್ಬಲ ವರ್ಗಗಳನ್ನು ಈ ಕಾನೂನುಗಳ ಸ್ವೇಚ್ಛೆಗೆ ಬಿಟ್ಟು ಬಿಡಬೇಕು. ಅವರ ಅಭಿಪ್ರಾಯದಂತೆ, ಇಲ್ಲದವನಿಂದ ಇರುವವನನ್ನು ರಕ್ಷಿಸುವುದೇ ರಾಷ್ಟ್ರದ ಪ್ರಥಮ ಕರ್ತವ್ಯವಾಗಿದೆ!

ವೈಯಕ್ತಿಕ ಸ್ವಾತಂತ್ರ್ಯ ವಾದಿಗಳು ಹೇಳುವಂತೆ ವ್ಯಕ್ತಿಗಳು ಅರ್ಥವ್ಯವಸ್ಥೆಯ ಕೇವಲ ಒಂದು ಘಟಕವಾಗಿಲ್ಲ. ಆರ್ಥಿಕ ಪ್ರಯೋಜನ ಅಥವಾ ಉತ್ಪಾದನಾ ಸಂಬಂಧಗಳು ಅವರನ್ನು ಪರಸ್ಪರ ಜೋಡಿಸುವ ಉಪಾಧಿಗಳಲ್ಲ. ಇಸ್ಲಾಮಿನ ದೃಷ್ಟಿಯಲ್ಲಿ ಸಮಾಜವು ಗಾಢ ಸಂಬಂಧವಿರುವ ಒಂದು ಕುಟುಂಬವಾಗಿದೆ. ಅದರಲ್ಲಿ ವ್ಯಕ್ತಿಗಳ ಮತ್ತು ವಿಭಾಗಗಳ ಪರಸ್ಪರ ಸಂಬಂಧವು ಗಾಢ ಮತ್ತು ಸುಶಕ್ತವಾಗಿದೆ. ಅದಕ್ಕೆ ಇಸ್ಲಾಮ್ ಮತ್ತು ವಿಶ್ವಾಸಗಳೇ

ಆಧಾರವಾಗಿದೆ. ಒಂದೇ ಧ್ಯೇಯ ಮತ್ತು ಒಂದೇ ಮಾರ್ಗವು ಅವರನ್ನು ಒಂದುಗೂಡಿಸುತ್ತದೆ. ಒಂದೇ ವಿಚಾರ, ಒಂದೇ ಭಾವನೆ, ಒಂದೇ ವಿಶ್ವಾಸ, ಒಂದೇ ವ್ಯವಸ್ಥೆ, ಒಂದೇ ಕಾನೂನು, ಒಂದೇ ಆದಿ, ಒಂದೇ ಅಂತ್ಯ- ಇದು ಇಸ್ಲಾಮೀ ಸಂಬಂಧದ ಸ್ವಭಾವವಾಗಿದೆ. ಆದ್ದರಿಂದಲೇ ಇಸ್ಲಾಮ್ ಈ ಸಮಾಜವನ್ನು ಒಂದು ದೇಹಕ್ಕೆ ಹೋಲಿಸಿದೆ. ಸಹಾಯ ಸಹಕಾರ ನೀಡುವ ಮತ್ತು ಸ್ವೀಕರಿಸುವ ರೀತಿಯಲ್ಲಿ ಈ ದೇಹದ ಪ್ರತಿಯೊಂದು ಅಂಗವೂ ಇತರ ಅಂಶ ಮತ್ತು ಅಂಗಗಳ ಜತೆ ಸಂಬಂಧ ಹೊಂದಿವೆ. ತಲೆಯ ಸ್ಥಾನದಲ್ಲಿ ರಾಷ್ಟ್ರ ನಾಯಕ, ತಲೆಯು ಸಮಾಜದ ಸಮಗ್ರ ಶ್ರೇಯೋಭಿವೃದ್ಧಿಗೆ ಪೂರಕವಾಗಿ ವ್ಯಕ್ತಿಗಳ ಪರಸ್ಪರ ಸಂಬಂಧ ಮತ್ತು ಹೊಣೆಯನ್ನು ನಿಯಂತ್ರಿಸುತ್ತದೆ. ಅದರ ಕರ್ತವ್ಯವು ಆಂತರಿಕ ಮತ್ತು ವಿದೇಶಿ ಆಕ್ರಮಣಗಳಿಂದ ರಾಷ್ಟ್ರ ಮತ್ತು ಪೌರ ಸ್ವಾತಂತ್ರ್ಯದ ರಕ್ಷಣೆಗೆ ಸೀಮಿತವಲ್ಲ. ಅದಕ್ಕಿಂತ ವಿಪುಲ ಮತ್ತು ವ್ಯಾಪಕವಾಗಿದೆ. ರಾಷ್ಟ್ರದಲ್ಲಿ ಆಡಳಿತಗಾರನು ಕುಟುಂಬದ ತಂದೆಯಂತೆ. "ನೀವು ಪ್ರತಿಯೊಬ್ಬರೂ ಆಡಳಿತಗಾರರು. ತನ್ನ ಪ್ರಜೆಗಳ ಬಗ್ಗೆ ಪ್ರತಿಯೊಬ್ಬನನ್ನು ಪ್ರಶ್ನಿಸಲಾಗುವುದು. ನಾಯಕನು ಆಡಳಿತಗಾರನಾಗಿದ್ದಾನೆ. ತನ್ನ ಪ್ರಜೆಗಳ ಬಗ್ಗೆ ಆತನನ್ನೂ ಪ್ರಶ್ನಿಸಲಾಗುವುದು. ಪುರುಷನು ಕುಟುಂಬದ ಆಡಳಿತಗಾರನಾಗಿದ್ದಾನೆ. ತನ್ನ ಆಶ್ರಿತರ ಬಗ್ಗೆ ಆತನನ್ನು ಪ್ರಶ್ನಿಸಲಾಗುವುದು" ಎಂಬ ಪ್ರವಾದಿ ವಚನದಲ್ಲಿ ಕುಟುಂಬದ ನಾಯಕರನ್ನೂ ಸಮಾಜದ ನೇತಾರರನ್ನೂ ಒಟ್ಟಿಗೆ ಪ್ರಸ್ತಾವಿಸಲಾಗಿದೆ.

ತಂದೆಯ ಹೊಣೆಯು ಸ್ವ ಕುಟುಂಬಗಳ ಸಂರಕ್ಷಣೆ ಮಾತ್ರವಲ್ಲ ಅವರಿಗೆ ಜೀವನಾನು-ಕೂಲತೆಗಳನ್ನು ಒದಗಿಸಿ, ಶಿಕ್ಷಣ ಕೊಡಿಸಿ, ಅವರ ಮಧ್ಯೆ ನ್ಯಾಯ ಪಾಲಿಸುವುದೂ ತಂದೆಯ ಕರ್ತವ್ಯವಾಗಿದೆ. ಆಡಳಿತಗಾರನೂ ಅಷ್ಟೇ. ತಂದೆಯು ಸ್ವಸಂತಾನಗಳ ವಿಷಯದಲ್ಲಿ ಹೊಣೆಗಾರನಾಗಿರುವಂತೆಯೇ ಪ್ರತಿಯೊಬ್ಬ ಆಡಳಿತಗಾರನೂ ತನ್ನ ಪ್ರಜೆಗಳ ವಿಷಯದಲ್ಲಿ ಹೊಣೆಗಾರನಾಗಿದ್ದಾನೆ. ಈ ಪ್ರಜ್ಞೆಯೇ ಉಮರುಲ್ ಫಾರೂಕ್‌ರ ಈ ಕೆಳಗಿನ ಮಾತುಗಳಿಗೆ ಪ್ರೇರಕವಾಗಿತ್ತು- "ಟೈಗ್ರಿಸ್‌ನ ತೀರದಲ್ಲಿ ವಾರೀಸುದಾರರಿಲ್ಲದ ಒಂಟೆಯು ಸತ್ತು ಬಿದ್ದರೆ ಅಲ್ಲಾಹನು ಆ ಕುರಿತು ನನ್ನನ್ನು ಪ್ರಶ್ನಿಸುವನೆಂದು ನಾನು ಭಯಪಡುತ್ತೇನೆ." ಓರ್ವ ಆಡಳಿತಗಾರನಿಗೆ ಒಂದು ಪ್ರಾಣಿಯ ಬಗ್ಗೆ ಇಷ್ಟೊಂದು ಹೊಣೆಯಿದ್ದರೆ, ಮಾನವನ ವಿಷಯದಲ್ಲಿ ಅದು ಎಷ್ಟೊಂದು ಉನ್ನತವಾಗಿರಬಹುದು?

ಉಮರ್ ಬಿನ್ ಅಬ್ದುಲ್ ಅಝೀಝ್‌ರ ಜೀವನದ ಘಟನೆಯೊಂದನ್ನು ಅವರ ಪತ್ನಿ ಫಾತಿಮಾ ವಿವರಿಸಿದ್ದಾರೆ: ಅದೊಂದು ದಿನ ಅವರು ನಮಾಝಿನ ಹಾಸಿನಲ್ಲಿ ಮುಖ ತಗ್ಗಿಸಿ ಕುಳಿತಿರುವುದನ್ನು ನಾನು ನೋಡಿದೆ. ಕಪೋಲಗಳಲ್ಲಿ ಕಣ್ಣೀರು ಹರಿಯುತ್ತಿತ್ತು. "ಏನಾಯಿತು?" ನಾನು ಪ್ರಶ್ನಿಸಿದೆ. ಅವರು ಹೇಳಿದರು: "ಫಾತಿಮಾ! ನಾನು ಈ ಜನತೆಯ ಹೊಣೆಗಾರನಾಗಿದ್ದೇನೆ. ಆದ್ದರಿಂದ ದೇಶದ ನಾನಾ ಕಡೆಗಳಲ್ಲಿರುವ ಜನರ ಬಗ್ಗೆ ಆಲೋಚಿಸುತ್ತಿದ್ದೆ. ಅವರಲ್ಲಿ ಹಸಿವೆಗೀಡಾದ ಬಡವರು, ಸಂಕಷ್ಟದಲ್ಲಿರುವ ರೋಗಿಗಳು, ಬಟ್ಟೆ ಬರೆಗಳಿಲ್ಲದ ದರಿದ್ರರು, ಸಂಗಾತಿಯಿಲ್ಲದ ವಿಧವೆಯರು, ನಿರ್ಗತಿಕ ಅನಾಥರು, ಮರ್ದಿತ ದುರ್ಬಲರು, ಬಂಧಿತರಾಗಿರುವ ವಿದೇಶಿಯರೂ, ಕಡುವೃದ್ಧರು, ಹಲವು ಕುಟುಂಬ ಸಂತಾನಗಳಿರುವ ನಿರ್ಗತಿಕರು ಇತ್ಯಾದಿ

ನಾ ವರ್ಗದವರಿದ್ದಾರೆ. ಅಲ್ಲಾಹನು ಅಂತ್ಯ ದಿನದಲ್ಲಿ ಅವರೆಲ್ಲರ ಬಗ್ಗೆ ನನ್ನನ್ನು ಶ್ನಿಸುತ್ತಾನೆ ಮತ್ತು ಪ್ರವಾದಿಯವರು ಅವರ ಪರವಾಗಿ ವಾದಿಸುವರೆಂದು ನಾನು ೦ದಿದ್ದೇನೆ. ಆ ಸಂದರ್ಭದಲ್ಲಿ ಅವರ ಮುಂದೆ ಸಮರ್ಪಿಸಲು ನನ್ನ ಬಳಿ ಯಾವುದೇ ಕ್ಷ್ಯಾಧಾರವಿಲ್ಲದಂತಾಗುವುದೇ ಎಂದು ಭಯವಾಯಿತು. ಆಗ ನನ್ನಲ್ಲಿ ಮೂಡಿದ ುಕಂಪದಿಂದಲೇ ಕಣ್ಣುಗಳಲ್ಲಿ ನೀರು ಹರಿಯಿತು.

(ಇಬ್ನು ಕಸೀರ್- ಅಲ್ ಬಿದಾಯತು ವನ್ನಿಹಾಯಃ, ಭಾಗ - 9, ಪುಟ: 201)

ಖಲೀಫರಾಗಿ ಚುನಾಯಿತರಾದ ಬಳಿಕ ಮನೆಗೆ ಮರಳಿದ ಉಮರ್ ಬಿನ್ ಅಬ್ದುಲ್ ಝೀಝ್‌ರು ಶೋಕ ಮೂಖರಾಗಿದ್ದರು. ಅದನ್ನು ನೋಡಿದ ಸೇವಕನು ವಿಚಾರಿಸಿದ, ಮಗೆ ಏನಾಗಿದೆ? ನೀವು ಯಾಕೆ ದುಃಖಿಸುತ್ತೀರಿ? ಇದು ಅಂತಹ ಸಮಯವಲ್ಲವಷ್ಟೆ?" ಲೀಫ ಹೀಗೆಂದರು: "ಹೇಗೆ ದುಃಖಿಸದಿರಲಿ. ನಾನು ದೇಶದ ಪೂರ್ವ ಪಶ್ಚಿಮಗಳಲ್ಲಿರುವ ತಿಯೊಬ್ಬ ಪ್ರಜೆಯ ಬೇಡಿಕೆಗಳನ್ನು ಅವರು ಅಪೇಕ್ಷಿಸಿದರೂ ಇಲ್ಲದಿದ್ದರೂ ಪೂರೈಸುವ ಣೆಯನ್ನು ಹೊಂದಿದ್ದೇನೆ." (ಅದೇ ಗ್ರಂಥ: ಪುಟ 198)

ರಾಷ್ಟ್ರದ ಪೂರ್ವ ಪಶ್ಚಿಮಗಳಲ್ಲಿರುವ ಪ್ರತಿಯೊಬ್ಬ ಪ್ರಜೆಯ ಹೊಣೆಯನ್ನು ತನಗೆ ಂಸಬಹುದಾಗಿದೆಯೆಂದು ಈ ಆಡಳಿತಗಾರ ಭಾವಿಸುತ್ತಾರೆ. ಪತ್ರ ಮೂಲಕ ಅಥವಾ ರವಾಗಿ ಅಪೇಕ್ಷಿಸಿದರೂ ಇಲ್ಲದಿದ್ದರೂ ಅವರ ಹಕ್ಕುಗಳನ್ನು ವಿಶೇಷತಃ ಬಡವರು, ೇಗಿಗಳು, ವೃದ್ಧರು, ವಿಧವೆಯರು, ಅನಾಥರು ಮುಂತಾದ ಸಮಾಜದ ದುರ್ಬಲ ವರ್ಗಗಳ ಕ್ಕುಗಳನ್ನು ನೀಡಬೇಕಾದುದು ತನ್ನ ಕರ್ತವ್ಯವೆಂದು ಅವರು ತಿಳಿಯುತ್ತಾರೆ. ನ್ಯಾಯ ಪಾಲನೆ, ಒಳಿತಿನೆಡೆಗೆ ಆಹ್ವಾನ, ಒಳಿತಿನ ಆಜ್ಞೆ, ಕೆಡುಕಿನ ವಿರೋಧ ಇತ್ಯಾದಿಗಳು ್ಲಾಮಿ ರಾಷ್ಟ್ರದ ಪ್ರಥಮ ಕರ್ತವ್ಯವಾಗಿದೆ. ರಾಷ್ಟ್ರದ ಒಂದೆಡೆಯಲ್ಲಿ ಹೆಚ್ಚಿನ ಹಣವನ್ನು ಖರಿಸಿರುವ ಶ್ರೀಮಂತರಿರುವಾಗ, ಇನ್ನೊಂದೆಡೆಯಲ್ಲಿ ಬಡ ದುರ್ಬಲ ವರ್ಗಗಳು ವನಾವಶ್ಯಕತೆಗಳನ್ನು ಪೂರೈಸಲಾಗದೆ ಹಸಿವೆಯಿಂದ ಬಳಲುವ ಸ್ಥಿತಿಯು ನ್ಯಾಯೋಚಿತ ಥವಾ ಹಿತಕರವಲ್ಲ. ಅಂತಹ ಪರಿಸ್ಥಿತಿಯಲ್ಲಿ ಬಡತನ ನಿವಾರಣೆಗೆ ಪೂರಕವಾದ ಮಗಳನ್ನು ಕೈಗೊಂಡು ಬಡವರಿಗೆ ಉತ್ತಮ ಜೀವನ ಮಟ್ಟ ಒದಗಿಸುವುದು ರಾಷ್ಟ್ರದ ಥಮ ಕರ್ತವ್ಯವಾಗಿದೆ.

ಕಾಲ ಮತ್ತು ಪರಿಸರಗಳಿಗೆ ತಕ್ಕಂತೆ ಬಡತನ ನಿರ್ಮೂಲನಕ್ಕಾಗಿ ಅಂಗೀಕರಿಸಬೇಕಾದ ಮಗಳು ವಿಭಿನ್ನವಾಗಿರಬಹುದು. ಬದಲಾಗುತ್ತಿರುವ ಪರಿಸ್ಥಿತಿಗಳಲ್ಲಿ ಕೈಗೊಳ್ಳಬೇಕಾದ ಧ ಕ್ರಮಗಳ ಬಗ್ಗೆ ಇಸ್ಲಾಮಿ ವಿದ್ವಾಂಸರು ಮತ್ತು ಆಡಳಿತಗಾರರು ಸಮಗ್ರ ಪರಿಶೀಲನೆ ಸಬೇಕು. ಈ ವಿಶಾಲ ವಿಷಯದ ಬಗ್ಗೆ ಉಮರ್‌ರ ಒಂದು ಕ್ರಮವು ಗಮನಾರ್ಹವಾಗಿದೆ. ರು ಮದೀನಾದ ಸಮೀಪದ ರಬ್ದ ಎಂಬ ಸ್ಥಳವನ್ನು ಮೇವಿಗೆ ಬಳಸಲಿಕ್ಕಾಗಿ ಸಂರಕ್ಷಿತ ದೇಶವೆಂದು ಸಾರಿದರು. ಸಂರಕ್ಷಿತ ಪ್ರದೇಶವೆಂದರೆ, ಸಾರ್ವಜನಿಕ ಬಳಕೆಗೆ ಮುಕ್ತಗೊಳಿಸಿರುವ ದೇಶವೆಂದರ್ಥ. ಆದರೆ, ಅವರು ಹಾಗೆ ಮಾಡಲಿಲ್ಲ. ಅವರು ಅದನ್ನು ಕೇವಲ ಬಡವರ

ಅಭಿವೃದ್ಧಿಗಾಗಿ ಮೀಸಲಿಟ್ಟರು. ಆರ್ಥಿಕ ಕೊರತೆಯಿಂದ ಸಂಕಷ್ಟಕ್ಕೀಡಾದ ಜನರು ಈ ಪ್ರದೇಶವನ್ನು ಬಳಸಿ, ಸಹಾಯಕ್ಕಾಗಿ ರಾಷ್ಟ್ರದ ಮುಂದೆ ಕೈ ಚಾಚದ ಸ್ವಾವಲಂಬಿಗಳಾಗಬೇಕೆಂಬುದೇ ಅವರ ಉದ್ದೇಶವಾಗಿತ್ತು. ಈ ಪ್ರದೇಶದ ಮೇಲ್ವಿಚಾರಣೆಗಾ ನೇಮಿಸಿದ ಹನಿಯ್ಯ್ರಿಗೆ ಉಮರ್(ರ) ನೀಡಿದ ಆದೇಶವು ಬಹಳ ಸುಸ್ಪಷ್ಟವಾಗಿದೆ. ಅವರು ಹೇಳಿದರು: ಎಲೈ ಹನಿಯ್ಯ್! ನೀವು ಜನರಿಗೆ ಸಂರಕ್ಷಣೆ ಒದಗಿಸಿರಿ. ಮರ್ದಿತರ ಪ್ರಾರ್ಥನೆಯ ಬಗ್ಗೆ ಎಚ್ಚರ ವಹಿಸಿರಿ; ಅದು ಕ್ಷಿಪ್ರವಾಗಿ ಸ್ವೀಕೃತವಾಗುತ್ತದೆ. ಹಣವಿಲ್ಲದವರಿ ಮಾತ್ರ ಪ್ರವೇಶಾನುಮತಿ ನೀಡಿರಿ. ಶ್ರೀಮಂತರನ್ನು ಉಪೇಕ್ಷಿಸಿರಿ. ಯಾಕೆಂದರೆ, ಒಂದು ವೇಳೆ ಜಾನುವಾರುಗಳು ನಾಶವಾದರೂ ಅವರಿಗೆ ಖರ್ಜೂರದ ತೋಟ ಮತ್ತು ಹೊಲಗದ್ದೆಗಳಿವೆ ಆದರೆ, ಈ ಬಡವರ ಜಾನುವಾರುಗಳು ಅಳಿದು ಹೋದರೆ ಅವರು ಮಕ್ಕಳನ್ನು ಕರೆದ ಕೊಂಡು ನನ್ನ ಬಳಿ ಬಂದು, "ಅಮೀರುಲ್ ಮೂಮಿನೀನ್! ಅಯ್ಯೋ ನೀವು ಇವ ಕೈಬಿಡುತ್ತೀರಾ" ಎಂದು ಮೊರೆಯಿಡಬಹುದು- ನನ್ನ ಮಟ್ಟಿಗೆ ಚಿನ್ನ ಬೆಳ್ಳಿಗಿಂತ ಹುಲ್ಲು ಅಮೂಲ್ಯವಾಗಿದೆ! (ಅಬೂ ಉಬೈದ್, ಅಲ್ ಅಮ್ವಾಲ್- ಪುಟ: 299

ಉಮರ್‌ರ ಈ ಕ್ರಮದಲ್ಲಿ ಕೆಲವು ಪ್ರಮುಖ ವಾಸ್ತವಿಕಾಂಶಗಳಿವೆ-

1. ಆರ್ಥಿಕವಾಗಿ ಹಿಂದುಳಿದ ವರ್ಗಗಳ ಸಂರಕ್ಷಣೆ ಮತ್ತು ಸ್ವಾವಲಂಬನೆಯ ಸೌಲಭ್ಯಗಳನ್ನು ಒದಗಿಸಬೇಕಾದುದು ಸರಕಾರದ ಕರ್ತವ್ಯವಾಗಿದೆ. ಇದಕ್ಕಾಗಿ ಶ್ರೀಮಂತ ಅನುಕೂಲತೆಗಳನ್ನು ಮೊಟಕು ಗೊಳಿಸಿ, ಬಡವರಿಗೆ ನೀಡುವ ಅನುಕೂಲತೆಗಳನ್ನು ಶ್ರೀಮಂತರಿ ನಿರಾಕರಿಸಬಹುದು. ಉಮರ್‌ರ ಹಣದ ಕೊರತೆಯಿರುವವರಿಗೆ ಮಾತ್ರ ಪ್ರವೇಶಾನುಮ ನೀಡಿರಿ, ಶ್ರೀಮಂತರನ್ನು ಕೈಬಿಡಿರಿ ಎಂಬ ಆದೇಶವು ಅದನ್ನು ಸ್ಪಷ್ಟಪಡಿಸುತ್ತದೆ.

2. ಇಸ್ಲಾಮೀ ರಾಷ್ಟ್ರದ ಸಂರಕ್ಷಣೆಯಲ್ಲಿರುವ ಎಲ್ಲ ಜನರಿಗೂ ಜೀವನ ದುಸ್ತರವಾದರೆ ಅದನ್ನು ಆಡಳಿತಗಾರನಿಗೆ ತಿಳಿಸಿ, ಸಾರ್ವಜನಿಕ ಬೊಕ್ಕಸದಿಂದ ಸಹಾಯ ಅಪೇಕ್ಷಿಸುವ ಹಕ್ಕಿದೆ. ಅದನ್ನು ನೀಡಬೇಕಾದುದು ಸರಕಾರದ ಕರ್ತವ್ಯವಾಗಿದೆ. ಈ ಬಡವ ಜಾನುವಾರುಗಳು ಅಳಿದು ಹೋದರೆ ಅವರು ಮಕ್ಕಳ ಜತೆ ನನ್ನ ಬಳಿ ಬಂದು, "ಅಮೀರುಲ ಮೂಮಿನೀನ್ ಅಯ್ಯೋ! ನೀವು ಈ ಬಡಪಾಯಿಗಳ ಕೈಬಿಡುತ್ತೀರಾ?" ಎಂದ ಮೊರೆಯಿಡಬಹುದೆಂದು ಉಮರ್‌ರು ಹೇಳಿರುವ ಮಾತುಗಳು ಆ ವಾಸ್ತವಿಕತೆಯತ್ತ ಬೆಟ ಮಾಡುತ್ತದೆ.

3. ದುಡಿಯಬಲ್ಲ ಬಡವರಿಗೆ ಉದ್ಯೋಗಾವಕಾಶಗಳನ್ನು ಒದಗಿಸಿ, ಉದ್ಯೋಗವನ ಹೆಚ್ಚು ಅನುಕೂಲಗೊಳಿಸಿ, ಕಡಿಮೆ ಆದಾಯವಿರುವವನಿಗೆ ಅದನ್ನು ಹೆಚ್ಚಿಸು ಮಾರ್ಗೋಪಾಯಗಳನ್ನು ತೋರಿಸ ಬೇಕಾದುದು ಸರಕಾರದ ಕರ್ತವ್ಯವಾಗಿದೆ. ತನ್ಮೂಲ ಸಾರ್ವಜನಿಕ ಬೊಕ್ಕಸವನ್ನು ಅವಲಂಬಿಸದೆ ಅವರು ಸ್ವಾವಲಂಬಿಗಳಾಗುವ ಸ್ಥಿ ಉಂಟಾಗಬಹುದು. 'ನನ್ನ ಮಟ್ಟಿಗೆ ಚಿನ್ನ-ಬೆಳ್ಳಿಗಿಂತ ಈ ಹುಲ್ಲು ಅಮೂಲ್ಯ'ವೆಂ ಹೇಳಿಕೆಯು ಅದನ್ನು ಸೂಚಿಸುತ್ತದೆ.

10

# ಝಕಾತ್‌ನ ಹೊರತಾದ ಕರ್ತವ್ಯಗಳು

ಓರ್ವ ಮುಸ್ಲಿಮನು ವಿವಿಧ ಸಂದರ್ಭಗಳಲ್ಲಿ ವಿವಿಧ ಕಾರಣಗಳಿಂದಾಗಿ ನಿರ್ವಹಿಸಬೇಕಾದ ಝಕಾತ್‌ನ ಹೊರತಾದ ಕೆಲವು ಕರ್ತವ್ಯಗಳಿವೆ. ಅವು ಬಡವರಿಗೆ ನೆರವಾಗಿ ಬಡತನವನ್ನು ನಿರ್ಮೂಲನ ಗೊಳಿಸುವ ಉದ್ದೇಶವನ್ನು ಹೊಂದಿದೆ. ಆ ಪೈಕಿ ಕೆಲವು ಪ್ರಮುಖ ಕರ್ತವ್ಯಗಳನ್ನು ಇಲ್ಲಿ ವಿವರಿಸುತ್ತೇನೆ-

## 1. ನೆರೆಕರೆಯವರು

ನೆರೆಕರೆಯವರ ಸಂರಕ್ಷಣೆಯು ಸತ್ಯವಿಶ್ವಾಸಿಯ ಕರ್ತವ್ಯವೆಂದು ಅಲ್ಲಾಹನು ನಿಶ್ಚಯಿಸಿದ್ದಾನೆ. ಪ್ರವಾದಿಯವರು(ಸ) ಈ ಬಗ್ಗೆ ಬಹಳಷ್ಟು ಪ್ರೇರಣೆ ನೀಡಿದ್ದಾರೆ. ನೆರೆಯವರನ್ನು ಗೌರವಿಸುವುದು ವಿಶ್ವಾಸದ ಭಾಗವಾಗಿದೆ ಮತ್ತು ಅವರನ್ನು ಪೀಡಿಸಿ ನಿರ್ಲಕ್ಷಿಸುವುದು ಧರ್ಮ ಭ್ರಷ್ಟತೆಯೆಂದು ಇಸ್ಲಾಮ್ ಭಾವಿಸುತ್ತದೆ. ಅಲ್ಲಾಹ್ ಹೇಳಿರುವನು:

"ನೀವೆಲ್ಲರೂ ಅಲ್ಲಾಹನ ದಾಸ್ಯ- ಆರಾಧನೆ ಮಾಡಿರಿ. ಅವನೊಂದಿಗೆ ಯಾರನ್ನೂ ಸಹಭಾಗಿಯನ್ನಾಗಿ ಮಾಡಬೇಡಿರಿ. ಮಾತಾಪಿತರೊಂದಿಗೆ ಸೌಜನ್ಯದಿಂದ ವರ್ತಿಸಿರಿ. ಸಂಬಂಧಿಕರೊಂದಿಗೂ ಅನಾಥರೊಂದಿಗೂ ನಿರ್ಗತಿಕರೊಂದಿಗೂ ಆಪ್ತರಾದ ನೆರೆ ಹೊರೆಯವರೊಂದಿಗೂ ಅಪರಿಚಿತ ನೆರೆಹೊರೆಯವರೊಂದಿಗೂ ಅನುಚರರೊಂದಿಗೂ... ಉತ್ತಮ ರೀತಿಯಿಂದ ವರ್ತಿಸಿರಿ." (ಅನ್ನಿಸಾ:36)

ಪ್ರವಾದಿ(ಸ) ಹೇಳಿದ್ದಾರೆ:

'ಅಲ್ಲಾಹನಲ್ಲಿಯೂ ಅಂತ್ಯ ದಿನದಲ್ಲಿಯೂ ವಿಶ್ವಾಸವಿರಿಸುವಾತನು ತನ್ನ ನೆರೆಯಾತನನ್ನು ಗೌರವಿಸಲಿ.' (ಬುಖಾರಿ, ಮುಸ್ಲಿಮ್)

'ನೆರೆಕರೆಯವರೊಡನೆ ಉತ್ತಮ ರೀತಿಯಲ್ಲಿ ವರ್ತಿಸಿರಿ. ನೀವು ಮುಸ್ಲಿಮರಾಗುವಿರಿ.' (ಇಬ್ನು ಮಾಜಃ)

"ನೆರೆಕರೆಯವರ ಕರ್ತವ್ಯಗಳ ಬಗ್ಗೆ ಜಿಬ್ರೀಲ್ ನನಗೆ ಸದಾ ಉಪದೇಶ ನೀಡುತ್ತಿತ್ತು. ನೆರೆಕರೆಯವರಿಗೆ ವಾರೀಸು ಹಕ್ಕು ಕೂಡಾ ನೀಡಬೇಕಾದೀತೇ ಎಂದು ಆಗ ನನಗೆ ತೋಚಿತು." (ಬುಖಾರಿ, ಮುಸ್ಲಿಮ್)

"ನೆರೆಯಾತನು ಹಸಿದಿರುವನೆಂದು ತಿಳಿದಿರುತ್ತಾ ಹೊಟ್ಟೆ ತುಂಬಾ ಉಣ್ಣುವವನು ಸತ್ಯ ವಿಶ್ವಾಸಿಯಲ್ಲ" (ತಬ್ರಾನಿ, ಬೈಹಕಿ)

ನೆರೆಯವರ ಕರ್ತವ್ಯಗಳ ಬಗ್ಗೆ ಉದ್ಧರಿಸಲಾಗಿರುವ ಒಂದು ಸುಂದರ ವರದಿ (ಅಸರ್)ಯನ್ನು ಇಲ್ಲಿ ಸೇರಿಸುತ್ತೇನೆ:

ನಿನ್ನ ಪಾತ್ರೆಯಲ್ಲಿ ಬೇಯುತ್ತಿರುವ ಪದಾರ್ಥದಿಂದ ಒಂದು ಪಾಲನ್ನು ನೆರೆಯಾತನಿಗೆ ನೀಡದೆ ಅದರ ಪರಿಮಳದಿಂದ ಅವರನ್ನು ಪೀಡಿಸಬೇಡಿರಿ. ಖರೀದಿಸಿದ ಹಣ್ಣು ಹಂಪಲುಗಳಿಂದ

ಒಂದು ಪಾಲನ್ನು ನೆರೆಯಾತನಿಗೆ ನೀಡಿರಿ. ಇಲ್ಲದಿದ್ದರೆ ಅದನ್ನು ಗುಪ್ತವಾಗಿ ಬಳಸಿ ಹಣ್ಣನ್ನು ಮಕ್ಕಳ ಕೈಯಲ್ಲಿ ಕೊಟ್ಟು ಅವರನ್ನು ಹೊರಗೆ ಬಿಡಬಾರದು. ಅದರಿಂ ನೆರೆಯಾತನ ಮಗುವಿನ ಮನ ನೋಯಬಹುದು.

(ಅಲ್ ಖಿರಾಯಿತಿ- ಮಕಾರಿಮುಲ್ ಅಖ್ಲಾಕ್, ಇಬ್ನು ಅದಿಯ್ಯ್- ಅಲ್ ಕಾಮಿಲ

ಅಬೂದರ್ರ್ ಹೇಳಿದ್ದಾರೆ: "ಆಹಾರ ಪಾಕ ಮಾಡುವಾಗ ಸಾರಿಗೆ ಹೆಚ್ಚು ನೀರು ಸೇರಿ ಅದರಿಂದ ಒಂದು ಪಾಲನ್ನು ನೆರೆಯಾತನಿಗೆ ನೀಡಬೇಕೆಂದು ಪ್ರವಾದಿಯವರು ನನ ಉಪದೇಶಿಸಿದ್ದರು."

ಕೆಲವರು ಭಾವಿಸಿರುವಂತೆ ಕೇವಲ ಸಮೀಪದಲ್ಲಿ ವಾಸವಾಗಿರುವವರು ಮಾ ನೆರೆಕರೆಯವರಲ್ಲ. ಮನೆಯ ಸಮೀಪದಲ್ಲಿರುವ 40 ಮನೆಗಳು ನೆರೆಕರೆಯೆಂದು ವಿವರಿಸಲಾಗಿ ಕೆಲವರು ಇದನ್ನು ಸುತ್ತಮುತ್ತಲಿನ 40 ಮನೆಗಳೆಂದು ವ್ಯಾಖ್ಯಾನಿಸಿದ್ದಾರೆ. ಆ ಪ್ರಕಾ ಪ್ರತಿಯೊಂದು ಗೋತ್ರವೂ ಪರಸ್ಪರ ನೆರೆಕರೆಯಾಗಿರುತ್ತದೆ. ಆಯಿಶಾ(ರ) ಹೇಳಿದ್ದಾರೆ, "ನಾ ಪ್ರವಾದಿಯವರೊಡನೆ ಕೇಳಿದೆ: ಪ್ರವಾದಿಯವರೇ! ನನಗೆ ಇಬ್ಬರು ನೆರೆಕರೆಯವರಿದ್ದಾ ಒಬ್ಬರು ಮನೆಯ ಎದುರುಗಡೆಯಲ್ಲಿದ್ದಾರೆ. ಇನ್ನೊಬ್ಬರು ಸ್ವಲ್ಪ ದೂರದಲ್ಲಿದ್ದಾ ಕೆಲವೊಮ್ಮೆ ನನ್ನ ಬಳಿಯಿರುವ ವಸ್ತುಗಳು ಇಬ್ಬರಿಗೂ ಹಂಚಲು ಸಾಕಾಗುವುದಿಲ್ಲ. ಆ ನಾನು ಯಾರಿಗೆ ಆದ್ಯತೆ ನೀಡಬೇಕು." "ನಿನ್ನ ಮನೆಯ ಎದುರುಗಡೆ ವಾಸವಾಗಿರುವವರಿ ಎಂದು ಪ್ರವಾದಿ(ಸ) ಹೇಳಿದರು. (ಬುಖಾ

ಸಮಾಜವನ್ನು, ಪರಸ್ಪರ ನೆರವಾಗಿ ಸಂರಕ್ಷಿಸುವ ವಿಭಾಗಗಳಾಗಿ ರೂಪಿಸುವು ಇಸ್ಲಾಮಿನ ಗುರಿಯಾಗಿದೆ. ಸಂಕಷ್ಟಗಳ ವೇಳೆ ಪರಸ್ಪರ ಸಹಕರಿಸಿ, ಹಸಿದವರಿಗೆ ಆಹಾ ನೀಡಿ, ನಗ್ನರಿಗೆ ಉಡುಪು ತೊಡಿಸುವ ಸ್ವಯಂ ಸಂರಕ್ಷಿತ ಸಮಾಜ! ಈ ಗುಣಗಳನ ಮೈಗೂಡಿಸದ ಸಮಾಜದ ಹೊಣೆಯನ್ನು ಅಲ್ಲಾಹನು ವಹಿಸುವುದಿಲ್ಲ. ಅವರನ್ನು ವಿಶ್ವಾಸಿಗಳೆಂ ಪರಿಗಣಿಸುವುದಿಲ್ಲ.

## ನೆರೆಕರೆಯ ಮುಸ್ಲಿಮೇತರರು

ನೆರೆಕರೆಯವರೊಂದಿಗಿನ ಕರ್ತವ್ಯ ನಿರ್ವಹಣೆಯಲ್ಲಿ ಇಸ್ಲಾಮ್, ಮುಸ್ಲಿಮ್- ಮುಸ್ಲಿಮೇತ ಬೇಧಭಾವವನ್ನು ಅನುಮತಿಸುವುದಿಲ್ಲವೆಂಬುದು ಗಮನಾರ್ಹ. ಮುಜಾಹಿದ್ ಹೇಳಿದ್ದಾರೆ

ನಾನು ಒಮ್ಮೆ ಅಬ್ದುಲ್ಲಾ ಬಿನ್ ಉಮರ್‌ರ ಜತೆಯಲ್ಲಿದ್ದಾಗ ಅವರ ಸೇವಕ ಆಡಿನ ಚರ್ಮ ಸುಲಿಯುತ್ತಿರುವುದನ್ನು ನೋಡಿದೆ. ಆಗ ಅಬ್ದುಲ್ಲಾರು ಸೇವಕನೊಡನೆ ಹೀ ಹೇಳುತ್ತಿದ್ದರು: ಚರ್ಮ ಸುಲಿದ ಬಳಿಕ ನೆರೆಮನೆಯ ಆ ಯಹೂದಿಗೆ ಮೊದಲು ನೀಡಬೇಕ ಅವರು ಅದೇ ಮಾತನ್ನು ಹಲವು ಬಾರಿ ಪುನರುಚ್ಚರಿಸಿದಾಗ ಸೇವಕ ಕೇಳಿದ, "ನೀವು ಅದನ ಪದೇ ಪದೇ ಯಾಕೆ ಹೇಳುತ್ತಿರುವಿರಿ?" ಅಬ್ದುಲ್ಲಾ ಹೇಳಿದರು: "ಪ್ರವಾದಿಯವ ನೆರೆಕರೆಯವರೊಂದಿಗಿನ ಕರ್ತವ್ಯಗಳ ಬಗ್ಗೆ ಉಪದೇಶಿಸುವಾಗ ಅವರಿಗೆ ವಾರೀಸು ಸೊತ್ತಿನ ಪಾಲು ನೀಡಬೇಕಾದೀತೋ ಎಂದು ಭಾಸವಾಗುತ್ತಿತ್ತು." (ಅಬೂ ದಾವೂದ್, ತಿರ್ಮಿ

## 2. ಬಲಿ ಮಾಂಸ

ಬಕ್ರೀದ್ ದಿನದಲ್ಲಿ, ಸ್ಥಿತಿವಂತರು ಜಾನುವಾರುಗಳನ್ನು ಬಲಿ ನೀಡಿ ಮಾಂಸವನ್ನು ದಾನ ಮಾಡುವುದು ಮಹಾ ಪುಣ್ಯಕಾರ್ಯವಾಗಿದೆ. ಆರ್ಥಿಕ ಸಾಮರ್ಥ್ಯವಿರುತ್ತಾ ಬಲಿ ನೀಡದವರು ನಮ್ಮ ನಮಾಝಿನ ಸ್ಥಳಕ್ಕೆ ಬರಬಾರದೆಂಬ ಪ್ರವಾದಿ ವಚನದ ಆಧಾರದಲ್ಲಿ ಆ ಕರ್ಮವು ಕಡ್ಡಾಯವೆಂದು ಅಬೂ ಹನೀಫಾ ಅಭಿಪ್ರಾಯ ಪಟ್ಟಿದ್ದಾರೆ.

## 3. ಪ್ರಾಯಶ್ಚಿತ್ತ

ವಾಗ್ದಾನ ಉಲ್ಲಂಘನೆಯ ಪ್ರಾಯಶ್ಚಿತ್ತವಾಗಿ ಬಡವರಿಗೆ ಆಹಾರ ನೀಡಬೇಕೆಂದು ಇಸ್ಲಾಮ್ ಆದೇಶಿಸಿದೆ. "ಅದರ (ಶಪಥ ಉಲ್ಲಂಘನೆಯ) ಪ್ರಾಯಶ್ಚಿತ್ತವಾಗಿ ನೀವು ಸ್ವಕುಟುಂಬಕ್ಕೆ ನೀಡುವ ಮಧ್ಯಮ ತರದ ಆಹಾರವನ್ನು ಹತ್ತು ದರಿದ್ರರಿಗೆ ಉಣಬಡಿಸಬೇಕು. ಅಥವಾ ಓರ್ವ ಗುಲಾಮನನ್ನು ವಿಮೋಚನೆಗೊಳಿಸಬೇಕು." (ಅಲ್ ಮಾಇದಃ:89)

ಓರ್ವರು ಪತ್ನಿಯೊಡನೆ, "ನೀನು ನನ್ನ ತಾಯಿಯಂತೆ, ನನ್ನ ಸಹೋದರಿಯಂತೆ ಅಥವಾ ತತ್ಸಮಾನವಾದ ಬೇರೇನಾದರೂ ಹೇಳಿದರೆ, ಅನಂತರ ಅದಕ್ಕಾಗಿ ಪ್ರಾಯಶ್ಚಿತ್ತ ನೀಡದೆ ಆಕೆಯೊಂದಿಗೆ ಲೈಂಗಿಕ ಸಂಪರ್ಕ ನಿಷಿದ್ಧವಾಗಿದೆ. ಪ್ರಾಯಶ್ಚಿತ್ತವಾಗಿ ಗುಲಾಮನನ್ನು ವಿಮೋಚನೆಗೊಳಿಸಬೇಕು. ಅದು ಸಾಧ್ಯವಿಲ್ಲದಿದ್ದರೆ ಎರಡು ತಿಂಗಳು ನಿರಂತರ ಉಪವಾಸ ಆಚರಿಸಬೇಕು. ಅದಕ್ಕೂ ಸಾಧ್ಯವಿಲ್ಲದಿದ್ದರೆ 60 ಮಂದಿ ನಿರ್ಗತಿಕರಿಗೆ ಉಣ ಬಡಿಸಬೇಕೆಂದು ಇಸ್ಲಾಮ್ ಆದೇಶಿಸಿದೆ. ರಮಝಾನ್‌ನ ಹಗಲಿನಲ್ಲಿ ಪತ್ನಿಯೊಂದಿಗೆ ಲೈಂಗಿಕ ಸಂಪರ್ಕ ನಡೆಸಿದರೂ ಇದೇ ಪ್ರಾಯಶ್ಚಿತ್ತ ನೀಡಬೇಕು."

## 4. ವ್ರತ ಆಚರಿಸದವರು

ಕಡು ವೃದ್ಧರು, ವೃದ್ಧೆಯರು, ನಿತ್ಯ ರೋಗಿಗಳು ಮುಂತಾದ ವ್ರತ ಆಚರಿಸಲು ಅಶಕ್ತರಾಗಿರುವವರು ಒಂದು ಉಪವಾಸಕ್ಕೆ ಪ್ರತಿಯಾಗಿ ತಲಾ ಒಬ್ಬರಿಗೆ ಪ್ರಾಯಶ್ಚಿತ್ತವಾಗಿ ಆಹಾರ ನೀಡಬೇಕೆಂದು ಇಸ್ಲಾಮ್ ನಿರ್ಣಯಿಸಿದೆ. ಕುರ್‌ಆನ್ ಹೀಗೆ ಹೇಳಿದೆ:

"ತೀವ್ರ ತೊಂದರೆಗಳಿಂದಾಗಿ ಉಪವಾಸ ಆಚರಿಸಲು ಅಶಕ್ತರಾಗಿರುವವರು ಪ್ರತಿಯೊಂದು ಉಪವಾಸದ ಬದಲಿಗೆ ಓರ್ವ ಬಡವನಿಗೆ ಆಹಾರ ನೀಡಬೇಕು." (ಅಲ್ ಬಕರಃ : 184) 'ಯುತೀಕೂನ' ಎಂಬ ಪದಕ್ಕೆ ತೀವ್ರ ತೊಂದರೆಗಳಿರುವಾಗ ಎಂದು ಅರ್ಥೈಸಿರುವುದೇಇದಕ್ಕೆ ಆಧಾರವಾಗಿದೆ.

## 5. ಹದಿಯ್ಯ್

ಹಜ್ಜ್ ಅಥವಾ ಉಮ್ರಾ ಮಾಡುವವರಿಂದ ಇಹ್ರಾಮ್‌ನಲ್ಲಿ ಏನಾದರೂ ತಪ್ಪು ಸಂಭವಿಸಿದರೆ ಪ್ರಾಯಶ್ಚಿತ್ತವಾಗಿಯೂ, ಉಮ್ರಾವನ್ನು ಮೊದಲು ಮಾಡಿ ಹಜ್ಜ್‌ನ ತನಕ ಸೌಲಭ್ಯ ಬಳಸುವುದಕ್ಕೆ ಪ್ರತಿಯಾಗಿಯೂ ಹಜ್ಜ್ ಮತ್ತು ಉಮ್ರಾ ಒಟ್ಟಿಗೆ ಮಾಡುವವರು ಅದರ ಪರಿಸಮಾಪ್ತಿಯಾಗಿಯೂ ಬಲಿ ನೀಡಲು ಕಅಬಾಕ್ಕೆ ತರುವ ಮೃಗವನ್ನು ಹದಿಯ್ಯ್ ಎನ್ನಲಾಗುತ್ತದೆ. ಕುರ್‌ಆನ್ ಹೇಳುತ್ತದೆ:

"ಸತ್ಯವಿಶ್ವಾಸಿಗಳೇ ಇಹ್ರಾಮಿನಲ್ಲಿರುವಾಗ ಬೇಟೆ ಪ್ರಾಣಿಗಳನ್ನು ಕೊಲ್ಲಬೇಡಿರಿ. ನಿಮ್ಮಲ್ಲಿ ಯಾರಾದರೂ ಮನಃಪೂರ್ವಕ ಹೀಗೆ ಮಾಡಿದರೆ ನಿಮ್ಮಲ್ಲಿರುವ ಇಬ್ಬರು ನ್ಯಾಯವಂತರು ತೀರ್ಮಾನಿಸಿದ ಪ್ರಕಾರ ಅವನು ಕೊಂದ ಪ್ರಾಣಿಗೆ ಸಮಾನವಾಗಿ ಯಾವುದಾದರೊಂದು ಜಾನುವಾರನ್ನು ಬಲಿ ನೀಡಿ ಕಅಬಾಕ್ಕೆ ತಲಪಿಸಬೇಕು ಅಥವಾ ಪ್ರಾಯಶ್ಚಿತ್ತವಾಗಿ ದರಿದ್ರರಿಗೆ ಉಣ ಬಡಿಸಬೇಕು." (ಅಲ್ ಮಾಇದ:95)

"ಯಾರಾದರೂ ಮುಂಚಿತವಾಗಿ ಉಮ್ರಾ ಮಾಡಿ ಹಜ್ಜ್ ತನಕ ಸೌಲಭ್ಯ ಬಳಸುವುದಿದ್ದರೆ ಅನುಕೂಲಕರ ಪ್ರಾಣಿಯನ್ನು ಆತನು ಬಲಿ ನೀಡಬೇಕು." (ಅಲ್ ಬಕರಃ:196)

ಈ ಬಲಿಯ ಮಾಂಸವನ್ನು ದರಿದ್ರರಿಗೆ ನೀಡಬೇಕೆಂಬ ದೇವಾಜ್ಞೆಯಿದೆ. ಪ್ರಾಣಿ ಬಲಿಗೆ ಬದಲಾಗಿ ಅದರ ಬೆಲೆ ಅಥವಾ ಬೆಲೆಯ ಇಮ್ಮಡಿ ನಿಗದಿಯಾಗಿ ನೀಡಿದರೂ ಸ್ವೀಕೃತವಾಗುವುದಿಲ್ಲ. ಅಲ್ಲಾಹ್ ಹೇಳಿರುವನು:

"ಅದರಿಂದ ಒಂದು ಪಾಲನ್ನು ನೀವು ತಿಂದು, ಬಡವರಿಗೂ ನಿರ್ಗತಿಕರಿಗೂ ತಿನ್ನಿಸಿರಿ.' (ಅಲ್ ಹಜ್ಜ್: 28)

"ಅದರಿಂದ ನೀವು ತಿನ್ನಿರಿ. ಬಡವರಿಗೂ ಸಂಕಷ್ಟದಲ್ಲಿರುವವರಿಗೂ ತಿನ್ನಿಸಿರಿ. ನೀವು ಕೃತಜ್ಞರಾಗಿರಲಿಕ್ಕಾಗಿ ಅವುಗಳನ್ನು ನಿಮ್ಮ ಅಧೀನ ಪಡಿಸಲಾಗಿದೆ. " (ಅಲ್ ಹಜ್ಜ್:36)

## 6. ಬೆಳೆಯ ಪಾಲು

ಅಲ್ಲಾಹನು ಹೇಳಿರುವನು:

ತರತರದ ಉದ್ಯಾನಗಳನ್ನೂ ದ್ರಾಕ್ಷಾ ತೋಟಗಳನ್ನೂ ಖರ್ಜೂರ ತೋಟಗಳನ್ನೂ ಇತರ ಬೆಳೆಗಳನ್ನೂ ಪರಸ್ಪರ ಸಾಮ್ಯತೆಯಿರುವ, ಆದರೆ ವಿವಿಧ ರುಚಿಗಳಿರುವ ಓಲಿವ್ ಮತ್ತು ದಾಳಿಂಬೆ (ರುಮ್ಮಾನ್) ಫಲಗಳನ್ನೂ ಅಲ್ಲಾಹನೇ ಉತ್ಪಾದಿಸಿರುತ್ತಾನೆ. ಅವು ಫಲ ಬಿಟ್ಟಾಗ ಅವುಗಳ ಫಲಗಳನ್ನು ನೀವು ತಿನ್ನಿರಿ. ಕೊಯ್ಲಿನ ವೇಳೆ ಅವುಗಳ ಹಕ್ಕುಗಳನ್ನು ಸಂದಾಯ ಮಾಡಿರಿ." (ಅಲ್ ಅನ್‌ಆಮ್:141)

ಇದೊಂದು ಝಕಾತೇತರ ಕರ್ತವ್ಯವೆಂದು ಕೆಲವು ತಾಬಿಈಗಳು ಮತ್ತು ಸಹಾಬಿಗಳು ಅಭಿಪ್ರಾಯ ಪಟ್ಟಿದ್ದಾರೆ. ಅದು ಮಾಲಿಕನ ಆತ್ಮ ಸಾಕ್ಷಿಗೆ ಬಿಟ್ಟು ಕೊಟ್ಟ ಕರ್ತವ್ಯವಾಗಿದ್ದು, ಆತನ ಪರಿಸರದಲ್ಲಿರುವ ನಿರ್ಗತಿಕರ ಬೇಡಿಕೆಗಳನ್ನು ಪೂರೈಸುವುದೇ ಅದರ ಉದ್ದೇಶವೆಂದು ಅವರು ಹೇಳುತ್ತಾರೆ. ವಾಕ್ಯದಲ್ಲಿರುವ 'ಹಕ್ಕಹು' ಎಂಬ ಪದವನ್ನು ವಿವರಿಸುತ್ತಾ ಇಬ್ನು ಉಮರ್‌ರು, "ಝಕಾತಿನ ಹೊರತು ಬೇರೇನಾದರೂ ನೀಡುವುದು" ಎಂದು ಹೇಳಿರುವುದಾಗಿ ಉದ್ಧರಿಸಲ್ಪಟ್ಟಿದೆ. ಅತ್ತಾಅ್ ಹೇಳಿದ್ದಾರೆ: "ಆ ದಿನ ಅಲ್ಲಿ ಸೇರಿದವರಿಗೆ ಸಾಮರ್ಥ್ಯಾನುಸಾರ ನೀಡಬೇಕು." ಇಬ್ನು ಕಸೀರ್ ಹೇಳಿದ್ದಾರೆ: "ಅಲ್ ಕಲಮ್ ಎಂಬ ಸೂರಃದಲ್ಲಿ ವರ್ಣಿಸಲಾಗಿರುವ ತೋಟದ ಮಾಲಿಕರಂತೆ ಕೊಯ್ಲಿನ ವೇಳೆ ಬರುವ ಬಡವರಿಗೆ ದಾನ ನೀಡದಿರುವುದನ್ನು ಅಲ್ಲಾಹನು ಆಕ್ಷೇಪಿಸಿದ್ದಾನೆ."

(ಉದ್ಧರಣೆಗಳು: ತಫ್ಸೀರುಬಿನ್ ಕಸೀರ್- ಭಾಗ:2, ಪುಟ: 181-182)

## 7. ಬಡವರೊಂದಿಗಿನ ಕರ್ತವ್ಯಗಳು

ಮುಸ್ಲಿಮ್ ಸಮಾಜದ ಬಡವರು ಮತ್ತು ಅವರ ಕುಟುಂಬಗಳ ಜೀವನಾವಶ್ಯಕತೆಗಳನ್ನು ಪೂರೈಸುವ ಹೊಣೆ ಮುಸ್ಲಿಮರ ಮೇಲಿದೆ. ಝಕಾತ್‌ನಿಂದಲೇ ಅದು ಪೂರೈಕೆಯಾದರೆ ಉತ್ತಮ. ಆಗ ವಿಶ್ವಾಸಿಗಳಿಗೆ ಝಕಾತ್‌ನಿಂದ ಹೊರತಾದ ಹೊಣೆಗಾರಿಕೆಯಿರುವುದಿಲ್ಲ. ಆದರೆ ಒಂದು ಪ್ರದೇಶದ ಝಕಾತ್ ಮತ್ತಿತರ ಆದಾಯಗಳು ಅಲ್ಲಿನ ಬಡವರ ಬೇಡಿಕೆಗಳ ಈಡೇರಿಕೆಗೆ ಸಾಲದಿದ್ದರೆ, ಶ್ರೀಮಂತರ ಸಂಪತ್ತಿನಲ್ಲಿ ಝಕಾತೇತರ ಕರ್ತವ್ಯಗಳು ಉಳಿಯುತ್ತವೆ. ಫಾತಿಮಾ ಬಿಂತು ಖೈಸ್ ಹೇಳಿದ್ದಾರೆ: "ನಾನು ಪ್ರವಾದಿಯವರೊಡನೆ ಝಕಾತ್‌ನ ಕುರಿತು ವಿಚಾರಿಸಿದೆ. ಪ್ರವಾದಿ ಹೇಳಿದರು: ಸಂಪತ್ತಿನಲ್ಲಿ ಕೆಲವು ಝಕಾತೇತರ ಕರ್ತವ್ಯಗಳಿವೆ. ತರುವಾಯ ಅವರು ಪೂರ್ವ ಅಥವಾ ಪಶ್ಚಿಮಕ್ಕೆ ಮುಖ ತಿರುಗಿಸುವುದರಲ್ಲಿ ಪುಣ್ಯವಿರುವುದಿಲ್ಲ ಎಂಬ ವಾಕ್ಯವನ್ನು ಪಠಿಸಿದರು. "

"ನೀವು ನಿಮ್ಮ ಮುಖಗಳನ್ನು ಪೂರ್ವ ದಿಕ್ಕಿಗೆ ಅಥವಾ ಪಶ್ಚಿಮ ದಿಕ್ಕಿಗೆ ಮಾಡಿಕೊಳ್ಳುವುದು. ಧರ್ಮ ಶೀಲತೆಯಲ್ಲ. ನಿಜವಾಗಿ ಒಬ್ಬನು ಅಲ್ಲಾಹನನ್ನೂ ನಿರ್ಣಾಯಕ ದಿನವನ್ನೂ ದೇವ ಚರರನ್ನೂ ಅಲ್ಲಾಹನು ಅವತೀರ್ಣಗೊಳಿಸಿದ ಗ್ರಂಥವನ್ನೂ ಅವನ ಸಂದೇಶ ವಾಹಕರನ್ನೂ ಹೃತ್ಪೂರ್ವಕವಾಗಿ ಒಪ್ಪಿಕೊಳ್ಳುವುದೂ ಅಲ್ಲಾಹನ ಸಂಪ್ರೀತಿಗಾಗಿ ತನ್ನ ಮನಮೆಚ್ಚುಗೆಯ ಸಂಪತ್ತನ್ನು ಬಂಧುಗಳಿಗೂ ಅನಾಥರಿಗೂ ನಿರ್ಗತಿಕರಿಗೂ ಪ್ರಯಾಣಿಕರಿಗೂ ಸಹಾಯಾರ್ಥಿಗಳಿಗೂ ದಾಸ್ಯ ವಿಮೋಚನೆಗಾಗಿಯೂ ವ್ಯಯಿಸುವುದು ಮತ್ತು ನಮಾಝನ್ನು ಸಂಸ್ಥಾಪಿಸುವುದೂ ಝಕಾತನ್ನು ನೀಡುವುದೂ ವಾಗ್ದಾನ ಮಾಡಿದರೆ ಪೂರೈಸುವುದೂ ಕಷ್ಟ ಕಾರ್ಪಣ್ಯಗಳಲ್ಲಿಯೂ ಸತ್ಯಾಸತ್ಯಗಳ ಸಮರವಾಗುತ್ತಿರುವಾಗಲೂ ಸಹನೆಯಿಂದಿರುವುದೂ ಧರ್ಮಶೀಲತೆಯಾಗಿರುತ್ತದೆ. ಇವರೇ ಸತ್ಯಸಂಧರು ಮತ್ತು ಧರ್ಮನಿಷ್ಠರು."(ಅಲ್‌ಬಕರಃ177)

ಈ ವಾಕ್ಯದಲ್ಲಿ ಸಂಬಂಧಿಕರಿಗೂ ಅನಾಥರಿಗೂ ನಿರ್ಗತಿಕರಿಗೂ ಹಣ ನೀಡುವುದನ್ನು ಒಳಿತಿನ ಸ್ಥಂಭವೆಂದು ಪರಿಗಣಿಸಲಾಗಿದೆ. ನಮಾಝ್ ಮತ್ತು ಝಕಾತನ್ನೂ ಅದರೊಂದಿಗೆ ಸೇರಿಸಿ ಹೇಳಲಾಗಿದೆ. ಮೇಲೆ ಸೂಚಿಸಿದ 'ವ್ಯಯಿಸುವುದು' ಎಂಬುದರ ಅರ್ಥವು ಝಕಾತ್‌ನಿಂದ ಹೊರತಾಗಿದೆಯಷ್ಟೆ. ಅದನ್ನು ಒಳಿತಿನ ಸ್ಥಂಭ ಮತ್ತು ವಿಶ್ವಾಸದ ಬೇಡಿಕೆಯೆಂದು ಹೇಳಿರುವುದರಿಂದ ಅದು ಕಡ್ಡಾಯವೆಂದೂ ವ್ಯಕ್ತವಾಗುತ್ತದೆ.

ಸಂಪತ್ತಿನಲ್ಲಿ ಝಕಾತೇತರ ಕಡ್ಡಾಯ ಕರ್ತವ್ಯಗಳಿವೆಯೆಂಬುದು ಕುರ್‌ಆನ್ ಮತ್ತು ಹದೀಸ್‌ಗಳಿಂದ ಸಮರ್ಥಿಸುವ ಅಗತ್ಯವಿಲ್ಲದ ರೀತಿಯಲ್ಲಿ ಸುಸ್ಪಷ್ಟವಾಗಿದೆ. ಯಾಕೆಂದರೆ ಕುರ್‌ಆನ್ ಮತ್ತು ಪ್ರವಾದಿಚರ್ಯೆ ಸಮರ್ಪಿಸಿರುವ ಇಸ್ಲಾಮೀ ವ್ಯವಸ್ಥೆಯಲ್ಲಿ ಪರಸ್ಪರ ಸಹಕಾರ ಮತ್ತು ಸಹಾನುಭೂತಿಯು ಪ್ರತಿಯೊಬ್ಬ ಮುಸ್ಲಿಮನ ಕಡ್ಡಾಯ ಕರ್ತವ್ಯವಾಗಿದೆ. ಪ್ರವಾದಿಯವರು(ಸ) ಮುಸ್ಲಿಮ್ ಸಮುದಾಯವನ್ನು ಪರಸ್ಪರ ಬೆಸೆದುಕೊಂಡ ಭಾಗಗಳಿರುವ ಕಟ್ಟಡಕ್ಕೆ ಹೋಲಿಸಿದ್ದಾರೆ.

"ಸತ್ಯವಿಶ್ವಾಸಿಗಳ ಪರಸ್ಪರ ಸಂಬಂಧವು ಒಂದು ಕಟ್ಟಡಕ್ಕೆ ಸಮಾನವಾಗಿದೆ. ಅದರ

ಪ್ರತಿಯೊಂದು ಭಾಗವೂ ಪರಸ್ಪರ ಬೆಸೆದುಕೊಂಡಿದೆ." (ಬುಖಾರಿ, ಮುಸ್ಲಿಮ್)

"ಪರಸ್ಪರ ಪ್ರೀತಿ, ಮಮತೆ ಮತ್ತು ಕರುಣೆಯಲ್ಲಿ ಸತ್ಯವಿಶ್ವಾಸಿಗಳನ್ನು ಒಂದು ದೇಹಕ್ಕೆ ಹೋಲಿಸಬಹುದು. ಒಂದು ಅಂಗಕ್ಕೆ ನೋವಾದರೆ ದೇಹದ ಉಳಿದ ಅಂಗಗಳು ಜ್ವರ ಪೀಡಿತವಾಗಿ ನಿದ್ದೆಗೆಟ್ಟು ಅದರೊಂದಿಗೆ ಸಹಾನುಭೂತಿ ವ್ಯಕ್ತ ಪಡಿಸುತ್ತದೆ."

(ಬುಖಾರಿ, ಮುಸ್ಲಿಮ್)

"ಮುಸ್ಲಿಮರು ಪರಸ್ಪರ ಸಹೋದರರು . ಒಬ್ಬನು ಇನ್ನೊಬ್ಬನನ್ನು ಆಕ್ರಮಿಸುವುದಿಲ್ಲ ಅಥವಾ ಅಕ್ರಮಿಗೆ ಒಪ್ಪಿಸಿ ಬಿಡುವುದಿಲ್ಲ." (ಹಾಕಿಮ್)

'ಲಾ ಯುಸ್ಲಿಮುಹು'- ಆತನನ್ನು ಒಪ್ಪಿಸಿ ಬಿಡುವುದಿಲ್ಲ, ಅರ್ಥಾತ್ ಸಂಕಷ್ಟ ಮತ್ತು ವಿಪತ್ತುಗಳಿಂದ ಸಹೋದರನನ್ನು ರಕ್ಷಿಸಲು ಪ್ರಯತ್ನಿಸದೆ ಆತನನ್ನು ದುರಂತಕ್ಕೆ ದೂಡುವುದಿಲ್ಲ.

ಬಡವರು ಮತ್ತು ನಿರ್ಗತಿಕರನ್ನು ನಿರ್ಲಕ್ಷಿಸಿ, ಅವರೊಂದಿಗೆ ಕ್ರೂರವಾಗಿ ವರ್ತಿಸುವವರಿಗೆ ಕಠೋರ ಶಿಕ್ಷೆಯಿದೆಯೆಂದು ಅನೇಕ ವಾಕ್ಯಗಳಲ್ಲಿ ಎಚ್ಚರಿಸಲಾಗಿದೆ. ಪರಲೋಕದಲ್ಲಿ ಸಂಭವಿಸಲಿರುವ ಘಟನೆಯೊಂದನ್ನು ಹೀಗೆ ವರ್ಣಿಸಲಾಗಿದೆ: ನರಕವಾಸಿಗಳಿಗೆ ಶಿಕ್ಷೆ ದೊರೆ ಕಾರಣಗಳನ್ನು ಸ್ವರ್ಗ ವಾಸಿಗಳು ವಿಚಾರಿಸುತ್ತಾರೆ. "ನಾವು ನಿರ್ಗತಿಕರ ಹಕ್ಕುಗಳನ್ನು ನೀಡದಿರುವುದೇ ಕಾರಣ"ವೆಂದು ಅವರು ಉತ್ತರಿಸುತ್ತಾರೆ.

"ಪ್ರತಿಯೊಂದು ಆತ್ಮವೂ ಅದರ ಕರ್ಮಗಳಿಗೆ ಅಡವಿಡಲ್ಪಟ್ಟಿದೆ. ಬಲಗಡೆಯವ ಹೊರತು, ಅವರು ಸ್ವರ್ಗದಲ್ಲಿರುವರು. ಅವರು ಅಪರಾಧಿಗಳೊಡನೆ ಕೇಳುವರು: "ನಿಮ್ಮನ್ನು ನರಕಕ್ಕೆ ಒಯ್ದದ್ದು ಯಾವುದು? ಅವರು ಹೇಳುವರು, ನಾವು ನಮಾಝ್ ಮಾಡುವವರಾಗಿರಲಿಲ್ಲ ಮತ್ತು ದರಿದ್ರರಿಗೆ ಉಣಿಸುತ್ತಿರಲಿಲ್ಲ." (ಅಲ್ ಮುದ್ದಸ್ಸಿರ್: 38-44

'ಅಲ್‌ಕಲಮ್' ಎಂಬ ಅಧ್ಯಾಯದಲ್ಲಿ ಕೆಲವು ತೋಟಗಾರರಿಗೆ ಸಂಭವಿಸಿದ ದುರಂತ ಕಥೆಯನ್ನು ಹೇಳಲಾಗಿದೆ:

"ಇರುಳಲ್ಲಿ ಅವರು ನಿದ್ರಿಸುತ್ತಿದ್ದಾಗ ನಿಮ್ಮ ಪ್ರಭುವಿನ ಕಡೆಯಿಂದ ಆ ತೋಟಕ ವಿಪತ್ತೊಂದು ಎರಗಿತು ಮತ್ತು ಅದರ ಅವಸ್ಥೆಯು ಕೊಯ್ದು ಬೆಳೆಯಂತಾಗಿ ಬಿಟ್ಟಿತು ಮುಂಜಾನೆ ಅವರು- ಪರಸ್ಪರರನ್ನು ಕೂಗಿದರು. "ಫಲಗಳನ್ನು ಕೊಯ್ಯಬೇಕಿದ್ದರೆ ನಸುಕಿನಲ್ಲೇ ನಿಮ್ಮ ಹೊಲಗಳ ಕಡೆಗೆ ಹೊರಡಿರಿ" ಎಂದರು. ಹೀಗೆ ಅವರು ಹೊರಟರು ಮತ್ತು ಅವರ ಪರಸ್ಪರರೊಡನೆ ಪಿಸುಗುಟ್ಟುತ್ತಲಿದ್ದರು: "ಇಂದು ಬಡವನಾರೂ ತೋಟದೊಳಗೆ ಬಾರದಂ ನೋಡಿಕೊಳ್ಳಬೇಕು." ಏನೂ ಕೊಡಬಾರದೆಂದು ನಿರ್ಧರಿಸಿಕೊಂಡು (ಫಲಕೊಯ್ಯಲು) ತಾವ ಶಕ್ತರೆಂಬಂತೆ ನಸುಕಿನಲ್ಲೇ ಲಗುಬಗೆಯಿಂದ ಅಲ್ಲಿಗೆ ಹೋದರು. ಆದರೆ ತೋಟವನು ಕಂಡಾಗ ಹೇಳತೊಡಗಿದರು, "ನಾವು ದಾರಿ ತಪ್ಪಿದ್ದೇವೆ" ಅಲ್ಲ ನಿಜವಾಗಿ ನಾವು ವಂಚಿತರಾ ಬಿಟ್ಟಿದ್ದೇವೆ. ಅವರ ಪೈಕಿ ಉತ್ತಮನಾಗಿದ್ದವನು: "ನೀವು ಅಲ್ಲಾಹನನ್ನು ಸ್ತುತಿಸುವುದಿಲ್ಲವೇಕೆ ಎಂದು ನಾನು ನಿಮ್ಮೊಡನೆ ಹೇಳಿರಲಿಲ್ಲವೇ?" ಎಂದನು. ಆಗ ಅವರು "ನಮ್ಮ ಪ್ರಭ ಪರಮ ಪಾವನನು, ನಿಜಕ್ಕೂ ನಾವು ಅಕ್ರಮಿಗಳಾಗಿದ್ದೆವು" ಎಂದರು. ತರುವಾಯ ಅವರಲ್ಲಿ

ಪ್ರತಿಯೊಬ್ಬನೂ ಇನ್ನೊಬ್ಬನನ್ನು ತೆಗಳತೊಡಗಿದನು. ಕೊನೆಗೆ ಅವರು "ಅಯ್ಯೋ ನಮ್ಮ ಪಾಡು! ನಿಜಕ್ಕೂ ನಾವು ವಿದ್ರೋಹಿಗಳಾಗಿ ಬಿಟ್ಟಿದ್ದೆವು. ನಮ್ಮ ಪ್ರಭು ಇದಕ್ಕೆ ಬದಲಾಗಿ ಇದಕ್ಕಿಂತಲೂ ಉತ್ತಮ ತೋಟ ದಯಪಾಲಿಸಲೂ ಬಹುದು. ನಾವು ನಮ್ಮ ಪ್ರಭುವಿನ ಕಡೆಗೆ ಮರಳುತ್ತೇವೆ" ಎಂದರು. ಯಾತನೆಯು ಹೀಗಿರುತ್ತದೆ ಮತ್ತು ಪರಲೋಕದ ಯಾತನೆಯಂತು ಇದಕ್ಕಿಂತಲೂ ಕಠೋರವಾಗಿದೆ. ಇದನ್ನು ಇವರು ತಿಳಿದಿರುತ್ತಿದ್ದರೆ!"

(ಅಲ್ ಕಲಮ್;19-33)

ಇಸ್ಲಾಮ್ ವಿಶ್ವಾಸಿಗಳೊಡನೆ, ನಿರ್ಗತಿಕರಿಗೆ ಆಹಾರ ನೀಡಿ ಅವರನ್ನು ಸಂರಕ್ಷಿಸುವಂತೆ ವಿನಂತಿಸಿರುವುದು ಮಾತ್ರವಲ್ಲ, ಅದಕ್ಕಾಗಿ ಇತರರನ್ನು ಪ್ರೇರೇಪಿಸುವುದನ್ನು ಅವರ ಕರ್ತವ್ಯವಾಗಿ ನಿರ್ಣಯಿಸಿದೆ. ಹಾಗೆ ಮಾಡದಿರುವುದನ್ನು ಅಲ್ಲಾಹನಿಗೆ ಕೃತಘ್ನತೆ ಮತ್ತು ದೇವ ಕೋಪ ಹಾಗೂ ನರಕ ಶಿಕ್ಷೆಗೆ ಅರ್ಹವಾಗುವ ಅಪರಾಧವೆಂದು ಪರಿಗಣಿಸಿತು. ಕುರ್‌ಆನ್, ಅಂಥವರನ್ನು ಹೀಗೆ ಚಿತ್ರಿಸಿದೆ:

"ಯಾರ ಕರ್ಮ ಪತ್ರವನ್ನು ಅವನ ಎಡಗೈಯಲ್ಲಿ ಕೊಡಲಾಗುವುದೋ ಅವನು ಹೇಳುವನು: 'ಅಯ್ಯೋ ನನ್ನ ಕರ್ಮ ಪತ್ರವನ್ನು ನನಗೆ ಕೊಡದೆ ಇರುತ್ತಿದ್ದರೆ! ಮತ್ತೆ ನನ್ನ ಕರ್ಮವೃತ್ತಾಂತವೇನೆಂದು ನನಗೆ ತಿಳಿಯದೆ ಇರುತ್ತಿದ್ದರೆ! ಅಯ್ಯೋ ನನ್ನ ಮರಣವೇ ಅಂತಿಮವಾಗಿರುತ್ತಿದ್ದರೆ, ನನ್ನ ಸಂಪತ್ತು ನನಗೆ ಕಿಂಚಿತ್ತೂ ಪ್ರಯೋಜನವಾಗಲಿಲ್ಲವಲ್ಲಾ, ನನ್ನ ಅಧಿಕಾರವೂ ನಾಶವಾಯಿತಲ್ಲಾ." (ಅಲ್‌ಹಾಕ್ಕಃ 25-29)

ತರುವಾಯ, ನ್ಯಾಯ ಪಾಲಕನಾದ ಅಲ್ಲಾಹನು ಅವರ ಬಗ್ಗೆ ನ್ಯಾಯೋಚಿತ ತೀರ್ಪು ನೀಡುವನು:

"ಆತನನ್ನು ಬಿಗಿದು ಕಟ್ಟಿ ನರಕಕ್ಕೆ ತಳ್ಳಿರಿ. ಎಪ್ಪತ್ತು ಮೊಳ ಉದ್ದದ ಸಂಕೋಲೆಗಳಿಂದ ಬಂಧಿಸಿ ಬೆಂಕಿಗೆಸೆಯಿರಿ." (ಅಲ್‌ಹಾಕ್ಕಃ: 30-32)

ಆ ಬಳಿಕ ಈ ಕಠೋರ ದಂಡನೆಯ ಕಾರಣವನ್ನು ವಿವರಿಸಲಾಗುತ್ತದೆ:

"ಇವನು ಮಹಿಮಾವಂತನಾದ ಅಲ್ಲಾಹನ ಮೇಲೆ ವಿಶ್ವಾಸವಿರಿಸುತ್ತಿರಲಿಲ್ಲ ಮತ್ತು ದರಿದ್ರರಿಗೆ ಊಟ ಕೊಡಲು ಪ್ರೇರೇಪಿಸುತ್ತಲೂ ಇರಲಿಲ್ಲ." (ಅಲ್‌ಹಾಕ್ಕಃ: 33-34)

ಹೃದಯಗಳನ್ನು ಭಯಭೀತಗೊಳಿಸುವ ಇಂತಹ ವರ್ಣನೆಗಳೇ ಅಬೂದರ್‌ರನ್ನು ಪತ್ನಿಯೊಡನೆ ಹೀಗೆ ಹೇಳಲು ಪ್ರೇರೇಪಿಸಿತ್ತು: "ಉಮ್ಮುದರ್ದಾಅ್! ಅಲ್ಲಾಹನ ಬಳಿ ಕೆಲವು ಸಂಕೋಲೆಗಳಿವೆ.ಅಪರಾಧಿಯ ಕೊರಳಿಗೆ ಹಾಕುವ ತನಕ ಅವು ನರಕಾಗ್ನಿಯಲ್ಲಿ ಬಿಸಿಯಾಗುತ್ತಿರುತ್ತವೆ. ಅಲ್ಲಾಹನಲ್ಲಿ ವಿಶ್ವಾಸವಿರಿಸಿರುವುದರಿಂದ ನಾವು ಅರ್ಧಾಂಶ ಅದರಿಂದ ಪಾರಾಗಿದ್ದೇವೆ. ಆದ್ದರಿಂದ ಉಮ್ಮು ದರ್ದಾಅ್, ನಿರ್ಗತಿಕರಿಗೆ ಆಹಾರ ನೀಡಲು ಪ್ರೇರೇಪಿಸಿರಿ!" (ಅಬೂ ಉಬೈದ, ಅಲ್ ಅಮ್ವಾಲ್, ಪುಟ: 322)

ದರಿದ್ರರಿಗೆ ಆಹಾರ ನೀಡಲು ಪ್ರೇರೇಪಿಸದಿದ್ದರೆ ಯಾತನಾಮಯ ನರಕ ಶಿಕ್ಷೆಗೆ

ಕಾರಣವಾಗುವುದೆಂದು ಸಾರಿರುವ ಗ್ರಂಥವು ಜಗತ್ತಿನಲ್ಲಿ ಕುರ್‌ಆನ್‌ನ ಹೊರತು ಬೇರೆಯಿಲ್ಲ

ಅನಾಥರನ್ನು ಹೊಡೆದೋಡಿಸುವುದು ಮತ್ತು ದರಿದ್ರರಿಗೆ ಆಹಾರ ನೀಡಲ ಪ್ರೇರೇಪಿಸದಿರುವುದನ್ನು ಕುರ್‌ಆನ್ ಧರ್ಮನಿಷೇಧವೆಂದು ಕಲಿಸಿದೆ.

"ಧರ್ಮವನ್ನು ನಿರಾಕರಿಸುವವನನ್ನು ನೀವು ಕಂಡಿರಾ? ಆತನು ಅನಾಥನನ ಹೊರದಬ್ಬುವವನು ಮತ್ತು ದರಿದ್ರರಿಗೆ ಊಟ ಕೊಡಲು ಪ್ರೇರೇಪಿಸದವನಾಗಿದ್ದಾನೆ."

(ಅಲ್ ಮಾವೂನ್: 1-

ಅಕ್ರಮಿಗಳಾದ ಜಾಹಿಲಿಯ್ಯಾ ಸಮಾಜವನ್ನು ಅಭಿಸಂಬೋಧಿಸಿ ಅಲ್ಲಾಹನು ಹೀ ಹೇಳಿರುವನು:

"ಖಂಡಿತ ಅಲ್ಲ, ಅವರು ಅನಾಥರನ್ನು ಗೌರವಿಸುವುದಿಲ್ಲ. ದರಿದ್ರರಿಗೆ ಆಹಾ ನೀಡಲು ಪ್ರೇರೇಪಿಸುವುದಿಲ್ಲ." (ಅಲ್ ಫಜ್ರ್ :17,1

ದುರ್ಬಲ ವರ್ಗಗಳ ಸಂರಕ್ಷಣೆಯು ಸಾಮೂಹಿಕ ಕರ್ತವ್ಯವಾಗಿದೆಯೆಂದು ಈ ವಾಕ್ಯಗಳಲ್ಲಿ ಸೂಚಿಸಲಾಗಿದೆ.

ಕುರ್‌ಆನ್ ಎತ್ತಿಹೇಳಿರುವ ಎಡಗಡೆಯವರೆಂದರೆ, ಜಾಹಿಲಿಯ್ಯಾ ಸಮಾಜ ಧರ್ಮನಿಷೇಧಿಗಳು, ಅನಾಥರನ್ನು ಹೊರದಬ್ಬುವವರು ಮತ್ತು ದರಿದ್ರರಿಗೆ ಆಹಾರ ನೀಡಲು ಪ್ರೇರೇಪಿಸದವರಾಗಿದ್ದಾರೆ. ಆದ್ದರಿಂದ ವಿಶ್ವಾಸಿಗಳೂ ಧರ್ಮಾವಲಂಬಿಗಳೂ ಹಾಗೆ ಮಾಡಲ ಬಾರದು. ಮಾತ್ರವಲ್ಲ, ದರಿದ್ರರನ್ನೂ ದುರ್ಬಲ ವರ್ಗಗಳನ್ನೂ ಪೋಷಿಸಿ ನೆರವಾಗಬೇಕಾದುದ ಅವರ ಕರ್ತವ್ಯವಾಗಿದೆ. ಸ್ವಯಂ ಸಾಧ್ಯವಿಲ್ಲದಿದ್ದರೆ ಇತರರ ಸಹಕಾರದಿಂದ ಅದನ ನಿರ್ವಹಿಸಬೇಕು. ಅನ್ಯಥಾ ಅಲ್ಲಾಹನ ಎಚ್ಚರಿಕೆಯು ಇತರರಂತೆಯೇ ವಿಶ್ವಾಸಿಗಳಿಗ ಅನ್ವಯವಾಗುತ್ತದೆ. ದರಿದ್ರರ ಸಂರಕ್ಷಣೆಗಾಗಿ ಸ್ಥಾಪಿಸಿದ ಸಂಘಟನೆಗಳಿಗೂ ಸಮಾಜ ಸೇವ ಸಂಸ್ಥೆಗಳಿಗೂ ಇದು ಮಾರ್ಗದರ್ಶಕವಾಗಿದೆ. ಮೇಲೆ ಹೇಳಿದ ಕುರ್‌ಆನ್ ವಾಕ್ಯಗಳಲ್ಲಿ ಅದ ಬುನಾದಿಯನ್ನು ಗುರುತಿಸಬಹುದು. 'ಅಲ್‌ಮಾವೂನ್' ಅಧ್ಯಾಯದ ವ್ಯಾಖ್ಯಾನದಲ್ಲಿ ಶೈ ಮುಹಮ್ಮದ್ ಅಬ್ದು ಈ ಅಭಿಪ್ರಾಯವನ್ನು ಸೂಚಿಸಿದ್ದಾರೆ.

## ಇಬ್ನು ಹಝ್ಮ್‌ರ ದೃಷ್ಟಿಕೋನ

ಇಬ್ನು ಹಝ್ಮ್‌ರು, ಝಕಾತೇತರ ಕರ್ತವ್ಯಗಳೆಂದು ಕುರ್‌ಆನ್, ಸುನ್ನತ್ ಸಹಾಬಿಗಳು ಮತ್ತು ತಾಬಿಈಗಳ ಅಭಿಪ್ರಾಯಗಳ ಆಧಾರದಲ್ಲಿ ಸಮರ್ಥಿಸಲು ಪ್ರಯತ್ನಿಸಿ ಪ್ರಮುಖ ವಿದ್ವಾಂಸರಾಗಿದ್ದಾರೆ. ಕರ್ಮಶಾಸ್ತ್ರಕ್ಕೆ ಸಂಬಂಧಿಸಿದ ಮೀಮಾಂಸೆಗಳಿಗೆ ಇತರ ಅಭಿಪ್ರಾಯ ಅಥವಾ ಕಿಯಾಸ್ (ಅಂದಾಜು)ಗಳನ್ನು ಅವಲಂಬಿಸುವ ಬದಲಾಗಿ ಕುರ್‌ಆನ್ ಪ್ರತ್ಯಕ್ಷ ಬೇಡಿಕೆಯನ್ನು ಪರಿಗಣಿಸುವುದೇ ಅವರ ವೈಶಿಷ್ಟ್ಯವಾಗಿದೆ. ಆರೋಗ್ಯ ಸಂರಕ್ಷಣೆ ಬೇಕಾದ ಆಹಾರ, ಮೈ ಮುಚ್ಚಲು ಮತ್ತು ಶೀತೋಷ್ಣ ತಡೆಗೆ ಬೇಕಾದ ಬಟ್ಟೆಬರೆ, ಗಾ ಮಳೆಯಿಂದ ಸುರಕ್ಷಿತವಾಗಿ, ದಾರಿ ಹೋಕರಿಗೆ ಕಾಣಸದೆ ವಾಸವಾಗಿರಬಹುದಾದ ಮ

ತ್ಯಾದಿ ಮೂಲ ಬೇಡಿಕೆಗಳ ಈಡೇರಿಕೆಗಳಿಗೆ ಅವಶ್ಯಕವಾದರೆ, ಶ್ರೀಮಂತರ ಸಂಪತ್ತಿನಲ್ಲಿ ಕಾತೀತರ ಕರ್ತವ್ಯಗಳನ್ನು ನಿಗದಿಪಡಿಸಬೇಕೆಂದು ಸುಸ್ಪಷ್ಟವಾಗಿ ಸಮರ್ಥಿಸಲು ಸೂಕ್ತ ಧಾರಗಳನ್ನು ಅವರು ಗುರುತಿಸಿದ್ದಾರೆ. ಮುಸ್ಲಿಮರ ಮೇಲೆ ಝಕಾತ್‌ನ ಹೊರತು ಬೇರೆ ಾವ ಕರ್ತವ್ಯವನ್ನೂ ಹೇರಬಾರದೆಂಬ ಕೆಲವು ವಿದ್ವಾಂಸರ ಅಭಿಪ್ರಾಯಗಳನ್ನು ಅವರು ುವಾಗಿ ಟೀಕಿಸಿದ್ದಾರೆ. ಅವರು ಹೀಗೆ ಹೇಳಿದ್ದಾರೆ:

ಮುಸ್ಲಿಮರಿಂದ ಪಡೆಯುವ ಝಕಾತ್ ಅಥವಾ ಇತರ ಆರ್ಥಿಕ ತೆರಿಗೆಗಳು ಬಡವರ ೇಡಿಕೆಗಳ ಈಡೇರಿಕೆಗೆ ಸಾಕಾಗದಿದ್ದರೆ ಅವರ ಬೇಡಿಕೆಗಳನ್ನು ಈಡೇರಿಸಬೇಕಾದುದು ್ರೀಮಂತರ ಕರ್ತವ್ಯವಾಗಿದೆ. ಆಡಳಿತಗಾರರು ಇದನ್ನು ಅವರಿಗೆ ಕಡ್ಡಾಯ ಗೊಳಿಸಬೇಕು. ತ್ಯಾವಶ್ಯಕ ಆಹಾರ, ಶೀತೋಷ್ಣಗಳಿಗೆ ಬೇಕಾದ ಉಡುಪು, ಮಳೆ, ಬಿಸಿಲು, ಸೆಕೆ, ಯಾತ್ರಿಕರ ಷ್ಟಿಯಿಂದ ರಕ್ಷಿಸುವ ಮನೆಯೇ ಮೊದಲಾದ ಬೇಡಿಕೆಗಳನ್ನು ಪೂರೈಸಬೇಕು.

(ಅಲ್ ಮುಹಲ್ಲಾ, ಭಾಗ- 6, ಪುಟ: 452)

## ಧಾರಗಳು

**ಕುರ್‌ಆನ್‌ನಿಂದ:** ಸಂಬಂಧಿಕರು, ದರಿದ್ರರು ಮತ್ತು ಯಾತ್ರಿಕರಿಗೆ ಅವರ ಹಕ್ಕುಗಳನ್ನು ಡಿರಿ, ತಂದೆ ತಾಯಿಯರೊಡನೆ ಉತ್ತಮ ರೀತಿಯಲ್ಲಿ ವರ್ತಿಸಿರಿ. ಅನಾಥರು, ನಿರ್ಗತಿಕರು, ಂಬಂಧಿಕ ನೆರೆಹೊರೆಯವರು, ಇತರ ನೆರೆಕರೆಯವರು, ಸಹಚರರು ಮತ್ತು ಯುದ್ಧ ಕೈದಿಗಳ ಕೆ ಉತ್ತಮವಾಗಿ ವರ್ತಿಸಿರಿ ಎಂಬಿತ್ಯಾದಿ ವಾಕ್ಯಗಳ ಪೈಕಿ ಮೊದಲ ವಾಕ್ಯದಲ್ಲಿ, ಅಲ್ಲಾಹನು ರಿದ್ರರು ಮತ್ತು ಯಾತ್ರಿಕರೊಂದಿಗಿನ ಕರ್ತವ್ಯವನ್ನು ಸಂಬಂಧಿಕರ ಕರ್ತವ್ಯದೊಂದಿಗೆ ೋಡಿಸಿ ಅದನ್ನು ಕಡ್ಡಾಯಗೊಳಿಸಿರುತ್ತಾನೆ. ಹಾಗೆಯೇ ಎರಡನೇಯ ವಾಕ್ಯದಲ್ಲಿ ತಂದೆ ಯಿಯರಂತೆಯೇ ದರಿದ್ರರು, ನೆರೆಕರೆಯವರು ಮತ್ತು ಕೈದಿಗಳೊಡನೆ ಉತ್ತಮವಾಗಿ ರ್ತಿಸುವುದನ್ನೂ ಕಡ್ಡಾಯಗೊಳಿಸಲಾಗಿದೆ. "ನಿಮ್ಮನ್ನು ನರಕಕ್ಕೆ ಅರ್ಹಗೊಳಿಸಿದ್ದೇನು?" ವರು ಹೇಳುವರು: "ನಾವು ನಮಾಝ್ ಮಾಡುತ್ತಿರಲಿಲ್ಲ. ದರಿದ್ರರಿಗೆ ಆಹಾರ ನೀಡುತ್ತಿರಲಿಲ್ಲ" ಂಬ ವಾಕ್ಯದಲ್ಲಿ ದರಿದ್ರರಿಗೆ ಆಹಾರ ನೀಡುವ ಕರ್ಮವನ್ನು ಕಡ್ಡಾಯ ನಮಾಝಿನೊಂದಿಗೆ ರಿಸಿ ಹೇಳಲಾಗಿದೆ.

**ಹದೀಸ್‌ನಿಂದ:** ಹಲವು ಶ್ರೇಣಿಗಳಿಂದ ಉದ್ಧೃತವಾದ ಮತ್ತು ಅಂಗೀಕಾರಾರ್ಹವೆಂದು ಂದೇಹಾತೀತವಾಗಿ ಮನ್ನಣೆ ಪಡೆದಿರುವ ಹದೀಸೊಂದರಲ್ಲಿ ಹೀಗೆ ಹೇಳಲಾಗಿದೆ:

"ಜನರೊಂದಿಗೆ ಕರುಣೆ ತೋರಿಸದಾತನಿಗೆ ಅಲ್ಲಾಹನೂ ಕರುಣೆ ತೋರುವುದಿಲ್ಲ."

(ಬುಖಾರಿ, ಮುಸ್ಲಿಮ್)

ಓರ್ವನು ಹೊಟ್ಟೆಗೆ ಆಹಾರವಿಲ್ಲದೆ, ಮೈ ಮುಚ್ಚಲು ಬಟ್ಟೆಯಿಲ್ಲದೆ ಒಳಲಾಡುತ್ತಿರುವುದನ್ನು ನೋಡಿಯೂ ಆತನಿಗೆ ನೆರವು ನೀಡದ ಶ್ರೀಮಂತನ ಮೇಲೆ ಲ್ಲಾಹನು ಖಂಡಿತವಾಗಿಯೂ ಕರುಣೆ ತೋರಿಸಲಾರನು.

ಮುಹಮ್ಮದ್ ಬಿನ್ ಅಬೂಬಕರ್ ವರದಿ ಮಾಡಿದ್ದಾರೆ:

"ಪ್ರವಾದಿಯವರು ಹೇಳಿದರು: ಇಬ್ಬರ ಆಹಾರ ಕೈವಶವಿರುವಾತ ಮೂರನೇಯವನೊಬ್ಬನನ್ನು ಕರೆದು ಕೊಂಡು ಹೋಗಲಿ. ನಾಲ್ಕು ಮಂದಿಯ ಆಹಾರವಿ ಐದನೇಯ ಅಥವಾ ಆರನೇಯವನೊಬ್ಬನನ್ನು ಸೇರಿಸಿಕೊಳ್ಳಲಿ." (ಬುಖ

ಅಬ್ದುಲ್ಲಾ ಬಿನ್ ಉಮರ್ ವರದಿ ಮಾಡಿದ್ದಾರೆ:

ಪ್ರವಾದಿಯವರು ಹೇಳಿದರು: ಮುಸ್ಲಿಮರು ಪರಸ್ಪರ ಸಹೋದರರು. ಒಬ್ಬ ಇನ್ನೊಬ್ಬನಿಗೆ ಅಕ್ರಮವೆಸಗುವುದಿಲ್ಲ ಅಥವಾ ಅಕ್ರಮಿಯ ಕೈಗಳಿಗೆ ಒಪ್ಪಿಸುವುದಿಲ್ಲ. (ಬುಖ

ಅಬೂ ಮುಹಮ್ಮದ್‌ರು ಈ ವಚನವನ್ನು ವ್ಯಾಖ್ಯಾನಿಸುತ್ತಾ, ಆರ್ಥಿಕ ಬಲವಿರ ಮುಸ್ಲಿಮರು ತನ್ನ ಮುಸ್ಲಿಮ್ ಸಹೋದರನನ್ನು ಹಸಿವು ಅಥವಾ ನಗ್ನತೆಯ ವ ಒಪ್ಪಿಸಿದರೆ, ಆತನನ್ನು ಓರ್ವ ಅಕ್ರಮಿಗೆ ಒಪ್ಪಿಸುವುದಕ್ಕೆ ಸಮಾನವಾಗುವುದು.

ಅಬೂ ಸಈದ್ ಖುದ್ರಿಯವರ ಇನ್ನೊಂದು ವರದಿಯಲ್ಲಿ ಹೀಗಿದೆ: ಪ್ರವಾದಿವರ್ಯರು ಹೇಳಿದರು: "ಅಗತ್ಯಕ್ಕಿಂತ ಹೆಚ್ಚು ವಾಹನವಿರುವವರು ಇಲ್ಲದವರಿಗೆ ನೀಡಲಿ. ಅಧಿಕ ಪ ಸಾಮಾಗ್ರಿಗಳಿರುವವರು ಇಲ್ಲದವರಿಗೆ ನೀಡಲಿ." ಅಬೂ ಸಈದ್ ಹೇಳುತ್ತಾರೆ: ತರುವಾ ಪ್ರವಾದಿಯವರು ಬಹಳಷ್ಟು ವಸ್ತುಗಳ ಹೆಸರು ಹೇಳಿದಾಗ, ಮಿಗತೆಯಿರುವ ಯಾವುದರಲ್ಲಿ ನಮಗೆ ಹಕ್ಕಿಲ್ಲವೆಂದು ಭಾಸವಾಯಿತು. (ಮುಸ್ಲಿಮ

ಅಬೂ ಮುಹಮ್ಮದ್ ಹೇಳಿದ್ದಾರೆ: ಈ ವಿಷಯದಲ್ಲಿ ಸಹಾಬಿಗಳ ಅಭಿಪ್ರಾಯ ಒಂದೇ ಆಗಿದೆ. ಅಬೂ ಸಈದ್‌ರೂ ಹಾಗೆಯೇ ಹೇಳಿದ್ದಾರೆ. ನನ್ನ ಅಭಿಪ್ರಾಯವೂ ಅ ಆಗಿದೆ.

ಅಬೂ ಮೂಸಾ ಉದ್ಧರಿಸಿದ್ದಾರೆ:

ಪ್ರವಾದಿಯವರು ಹೇಳಿದರು: "ಹಸಿದವನಿಗೆ ಆಹಾರ ನೀಡಿರಿ. ಹಸಿದವನ ಸಮಸ್ಯೆಗಳ ಬಗೆಹರಿಸಿರಿ." (ಬುಖ

ಈ ಕುರಿತು ಕುರ್‌ಆನ್ ಮತ್ತು ಹದೀಸ್‌ಗಳಿಂದ ಇಂತಹ ಧಾರಾಳ ಅಧಾರಗಳ ಉದ್ಧರಿಸಬಹುದಾಗಿದೆ.

**ಸಹಾಬಿಗಳ ಹೇಳಿಕೆ**

ಅಬೂ ವಾಇಲ್ ಬಿನ್ ಸಲಮ ವರದಿ ಮಾಡಿದ್ದಾರೆ:

ಉಮರ್(ರ) ಒಮ್ಮೆ ಹೇಳಿದರು: ನಾನು ಈಗ ಗ್ರಹಿಸಿರುವ ವಿಷಯಗಳನ್ನು ಮೊದ ತಿಳಿದಿರುತ್ತಿದ್ದರೆ ಶ್ರೀಮಂತರಲ್ಲಿ ಜೀವನಾವಶ್ಯಕತೆಗಳಿಗಿಂತ ಅಧಿಕವಿರುವ ಹಣವನ್ನು ವಸೂ ಮಾಡಿ ಬಡ ಮುಹಾಜಿರರಿಗೆ ವಿತರಣೆ ಮಾಡುತ್ತಿದ್ದೆ.

ಅಲೀ ಬಿನ್ ಅಬೀತಾಲಿಬ್ ಹೀಗೆ ಹೇಳಿದ್ದರು:

ಅಲ್ಲಾಹನು ಬಡವರಿಗೆ ಬೇಕಾಗುವ ಪಾಲನ್ನು ಶ್ರೀಮಂತರ ಹಣದಲ್ಲಿ ನಿರ್ಣಯಿಸಿದ್ದಾ ಅದನ್ನು ತಡೆಹಿಡಿಯುವುದರಿಂದಾಗಿ ಹೊಟ್ಟೆಗೆ ಆಹಾರ ಮತ್ತು ಮೈಗೆ ಬಟ್ಟೆಯೀ

ಂಕಷ್ಟಕ್ಕೀಡಾದರೆ ಅದಕ್ಕಾಗಿ ಶ್ರೀಮಂತರ ವಿಚಾರಣೆ ನಡೆಸಿ ದಂಡಿಸುವುದು ಅಲ್ಲಾಹನಿಗೆ ಸ್ಸಾಯವಾಗುತ್ತದೆ.

"ನಿನ್ನ ಸಂಪತ್ತಿನಲ್ಲಿ ಝಕಾತೇತರ ಕರ್ತವ್ಯಗಳಿವೆ" ಎಂದು ಅಲೀ(ರ) ಹೇಳಿರುವುದಾಗಿ ಬ್ನು ಉಮರ್ ವರದಿ ಮಾಡಿದ್ದಾರೆ.

ಈ ಕುರಿತು ಪ್ರಶ್ನಿಸಿದವರೊಡನೆ ಉಮ್ಮುಲ್ ಮೂಮಿನೀನ್ ಆಯಿಶಾ, ಹಸನ್ ಬಿನ್ ಲೀ ಮತ್ತು ಇಬ್ನು ಉಮರ್‌ರು ಹೀಗೆ ಉತ್ತರಿಸಿದ್ದರು:

ನಿಮ್ಮ ಪ್ರಶ್ನೆಯು, ಕೊಲೆ ಅಪರಾಧಕ್ಕೆ ಪ್ರಾಯಶ್ಚಿತ್ತ ನೀಡಬೇಕಾದವರು, ಸಾಲದಿಂದ ಂಕಷ್ಟಕ್ಕೀಡಾದವರು ಮತ್ತು ಬಡವರು ಮುಂತಾದ ಯಾರಿಗಾದರೂ ಸಂಬಂಧಿಸಿದ್ದರೆ, ವರಿಗೆ ನೆರವಾಗಬೇಕಾದುದು ನಿಮ್ಮ ಕಡ್ಡಾಯ ಕರ್ತವ್ಯವಾಗಿದೆ.

ಅಬೂ ಉಬೈದತುಲ್ ಜರ್ರಾಹ್ ಹಾಗೂ ಇತರ 300 ಸಹಾಬಿಗಳಿಗೆ ಸಂಬಂಧಪಟ್ಟ ಂದು ಘಟನೆ ಉಲ್ಲೇಖಿಸಲ್ಪಟ್ಟಿದೆ: ಒಮ್ಮೆ ಅವರಿಗೆ ಆಹಾರದ ಕೊರತೆಯುಂಟಾಯಿತು. ಗ ಎಲ್ಲರ ಬಳಿಯಿರುವ ಆಹಾರ ವಸ್ತುಗಳನ್ನು ಒಂದೆಡೆ ಶೇಖರಿಸುವಂತೆ ಅಬೂ ಉಬೈದ ಜ್ಞಾಪಿಸಿದರು. ತರುವಾಯ ಸಂಗ್ರಹವಾದ ಆಹಾರ ವಸ್ತುಗಳನ್ನು ಎಲ್ಲರಿಗೂ ಸಮವಾಗಿ ಂಚಿದರು. ಈ ಕ್ರಮವನ್ನು ಯಾವೊಬ್ಬ ಸಹಾಬಿಯೂ ವಿರೋಧಿಸಲಿಲ್ಲ.

ಶಅ್‌ಬಿ, ಮುಜಾಹಿದ್, ತ್ವಾವೂಸ್ ಮುಂತಾದವರೆಲ್ಲರೂ ಸಂಪತ್ತಿನಲ್ಲಿ ಝಕಾತೇತರ ರ್ತವ್ಯಗಳಿವೆಯೆಂದು ಹೇಳಿದ್ದಾರೆ. ಳಹ್ಹಾಕ್‌ರ ಹೊರತು ಬೇರೆ ಯಾರಿಂದಲೂ ಇದಕ್ಕೆ ರುದ್ಧವಾದ ಅಭಿಪ್ರಾಯವನ್ನು ನಾವು ತಿಳಿದಿಲ್ಲವೆಂದು ಅಬೂ ಮುಹಮ್ಮದ್ ಹೇಳಿದ್ದಾರೆ. ಝಕಾತ್, ಸಂಪತ್ತಿನ ಇತರೆಲ್ಲ ಕರ್ತವ್ಯಗಳನ್ನು ಅನೂರ್ಜಿತಗೊಳಿಸಿದೆಯೆಂದು ಳಹ್ಹಾಕ್‌ರ ಾದವಾಗಿದೆ. ಆದರೆ ಅವರ ವರದಿಗಳೇ ಆಧಾರಕ್ಕೆ ಅರ್ಹವಾಗಿಲ್ಲ. ಹೀಗಿರುತ್ತಾ ಅವರ ಭಿಪ್ರಾಯಗಳ ಮಾತೇಕೆ?' ಎಂದು ಆ ಬಗ್ಗೆ ಅಬೂ ಮುಹಮ್ಮದ್ ವಿಮರ್ಶಿಸಿದ್ದಾರೆ. ವರು ಮುಂದುವರಿಸುತ್ತಾ ಳಹ್ಹಾಕ್‌ರೇ ಸ್ವತಃ ತಮ್ಮ ಅಭಿಪ್ರಾಯಗಳನ್ನು ಖಂಡಿಸಿರುವರೆಂಬುದು ಲು ವಿಚಿತ್ರವಾಗಿದೆ. ಝಕಾತ್‌ನಲ್ಲಿ ಝಕಾತೇತರ ಕರ್ತವ್ಯಗಳಿವೆಯೆಂದು ಅವರು ಅಭಿಪ್ರಾಯ ಟ್ಟಿದ್ದಾರೆ. ಬಡವರಾದ ತಂದೆ ತಾಯಂದಿರು, ಪತ್ನಿ, ಗುಲಾಮ ಮುಂತಾದವರ ಖರ್ಚು, ್ರಾಣಿಗಳಿಗೆ ಆಹಾರ, ಸಾಲಗ್ರಸ್ತ ಮತ್ತು ಪ್ರಾಯಶ್ಚಿತ್ತ ನೀಡಬೇಕಾದವನಿಗೆ ನೆರವು ತ್ಯಾದಿಗಳೂ ಅದರಲ್ಲಿ ಸೇರಿದೆ. ಇದರಿಂದ ಅವರ ಅಭಿಪ್ರಾಯದಲ್ಲಿರುವ ವೈರುಧ್ಯ ್ಯಕ್ತವಾಗುತ್ತದೆ.

11

# ದಾನ ಧರ್ಮಗಳು

ಬಡತನ ನಿರ್ಮೂಲನದ ಉದ್ದೇಶದಿಂದ ಇಸ್ಲಾಮ್ ಕಡ್ಡಾಯಗೊಳಿಸಿರುವ ಕರ್ತ
ಮತ್ತು ಹೊಣೆಗಾರಿಕೆಗಳನ್ನು ಹಿಂದಿನ ಅಧ್ಯಾಯಗಳಲ್ಲಿ ವಿವರಿಸಲಾಗಿದೆ. ಅದರ ಹೊರ
ಇಸ್ಲಾಮ್ ಇನ್ನೊಂದು ಸಾಧನೆಯನ್ನೂ ಮಾಡಿದೆ. ಉದಾರವಾದ ಹೃದಯದ ಸೃಷ್
ಅಗತ್ಯವಿರುವುದಕ್ಕಿಂತ ಅಧಿಕವಾಗಿ ನೀಡುವ, ಕಡ್ಡಾಯ ಪಾಲಿಗಿಂತ ಹೆಚ್ಚು ನೀಡ
ಸಿದ್ಧವಿರುವಂತಹ ಮನಸ್ಸನ್ನು ಅದು ರೂಪಿಸುತ್ತದೆ. ದುಸ್ಥಿತಿ ಮತ್ತು ಸುಸ್ಥಿತಿಯಲ್ಲಿಯ
ರಾತ್ರಿಯಲ್ಲಿಯೂ ಹಗಲಿನಲ್ಲಿಯೂ ಗುಪ್ತವಾಗಿಯೂ ಬಹಿರಂಗವಾಗಿಯೂ ಅನ್
ಪ್ರೇರಣೆಯಿಲ್ಲದೆ ದಾನ ನೀಡಲು ಹಾತೊರೆಯುವ ಹೃದಯ! ತನಗೆ ಪ್ರಿಯವಾಗಿರುವವುಗ
ಇತರರಿಗೂ ಲಭ್ಯವಾಗಬೇಕೆಂದು ಹಂಬಲಿಸುವ, ತನ್ನ ಅಗತ್ಯಗಳಿಗಿಂತ ಇತರರ ಅಗತ್ಯಗಳ
ಆದ್ಯತೆ ನೀಡುವ ಮನಸ್ಸು. ಹಣ ಸಂಪಾದನೆಯು ಸ್ವತಃ ಉದ್ದೇಶವಲ್ಲ; ಬದಲಾಗಿ ಅ
ಕೇವಲ ಮಾರ್ಗವೆಂದು ಪರಿಗಣಿಸುವ ಪರೋಪಕಾರ ಪ್ರಜ್ಞೆಯಿಂದ ತುಂಬಿ ತುಳುಕು
ಮನಸ್ಸು. ಹೆಸರು ಮತ್ತು ಪ್ರಸಿದ್ಧಿಯನ್ನು ಬಯಸದೆ, ಒಣ ಪ್ರತಿಷ್ಠೆ ಮತ್ತು ಆಡಂಬರ
ಮೋಹವಿಲ್ಲದೆ ಸರ್ವ ಶಕ್ತನಾದ ದೇವನ ಪ್ರೀತಿ ಮತ್ತು ಪ್ರತಿಫಲವನ್ನು ಮಾತ್ರ ನಿರೀಕ್ಷಿ
ದುರ್ಬಲರಿಗೆ ನೆರವಾಗಲು ತವಕಿಸುವ ಆತ್ಮಸಾಕ್ಷಿ. ಇಂತಹ ಮನಸ್ಸನ್ನು ರೂಪಿಸು
ವ್ಯವಸ್ಥೆಗಳನ್ನೂ ಇಸ್ಲಾಮ್ ಮಾಡಿದೆ.

ಮಾನವನ ಮೂಲ ವೈಶಿಷ್ಟ್ಯಗಳನ್ನು ಗ್ರಹಿಸದೆ ಕೇವಲ ಬಾಹ್ಯವಾಗಿ ಆಲೋಚಿಸುವವರ
ಸಾಮಾಜಿಕ ಜೀವನವನ್ನು ಕೇವಲ ನಿಯಮ ನಿಬಂಧನೆಗಳಿಂದ ಸುಧಾರಿಸಬಹುದೆಂ
ಭಾವಿಸುತ್ತಾರೆ. ಮಾನವನೆಂದರೆ ತಿರುಗಿಸುವಾಗ ತಿರುಗುವ, ಚಲಾಯಿಸುವಾಗ ಚಲಿಸು
ಅಥವಾ ನಿಲ್ಲಿಸುವಾಗ ನಿಲ್ಲುವ ಯಂತ್ರವಲ್ಲ. ಆತನು ದೇಹ, ಆತ್ಮ, ಚಿತ್ತ, ಸ್ಫೂರ್ತಿ
ವಿವೇಕ, ವಿಕಾರ, ಅನುಭವ, ಸಹಾನುಭೂತಿಯಿರುವ ಸೃಷ್ಟಿಯಾಗಿದ್ದಾನೆ. ಆದ್ದರಿಂದ ಮಾನ
ವ್ಯವಹಾರಗಳಲ್ಲಿ ಈ ಎಲ್ಲ ವೈಶಿಷ್ಟ್ಯಗಳನ್ನು ಗಮನಿಸಬೇಕು. ಹಾಗಾದರೆ ಮಾ
ಮಾನವನಿಗಾಗಿ ನಿರ್ಮಿಸುವ ಕಾನೂನುಗಳು ಮತ್ತು ವ್ಯವಸ್ಥೆಗಳಲ್ಲಿ ತಲೆದೋರುವ ಕುಂ
ಕೊರತೆಗಳನ್ನು ನಿವಾರಿಸಬಲ್ಲ ರೀತಿಯಲ್ಲಿ ಮಾನವ ಹೃದಯವನ್ನು ಪಕ್ವಗೊಳಿಸ
ಸಾಧ್ಯವಾದೀತು.

ದೈವಿಕ ಪದ್ಧತಿಯಾಗಿರುವ ಇಸ್ಲಾಮ್, ಮಾನವನ ಈ ಸಹಜ ವೈಶಿಷ್ಟ್ಯಗಳನ
ಪರಿಗಣಿಸುತ್ತದೆ. ಆದ್ದರಿಂದ ಅದು ಕಾನೂನು ಮತ್ತು ಸರಕಾರಗಳು ಕಡ್ಡಾಯಗೊಳಿಸಿರು
ಕರ್ತವ್ಯಗಳಿಂದ ಮಾತ್ರ ತೃಪ್ತವಾಗುವುದಿಲ್ಲ. ಮಾನವರನ್ನು ಮಾನಸಿಕವಾಗಿ ಸಂಸ್ಕರಿ
ಬೆಳೆಸುವುದು ಕೂಡಾ ಅದರ ಧ್ಯೇಯವಾಗಿದೆ. ಸುವಾರ್ತೆ ಮತ್ತು ಎಚ್ಚರಿಕೆಗಳಿಂದ ಪ್ರೇರ
ನೀಡುವ ಅನೇಕ ಕುರ್‌ಆನ್ ವಾಕ್ಯ ಮತ್ತು ಪ್ರವಾದಿ ವಚನಗಳು ಈ ಕಾರ್ಯವನ

ರ್ವಹಿಸುತ್ತಿವೆ. ಅವು ಹಣ ವ್ಯಯವನ್ನು ಪ್ರೋತ್ಸಾಹಿಸಿ, ಜಿಪುಣತನವನ್ನು ಆಕ್ಷೇಪಿಸುತ್ತವೆ. ಅವು ಕಠಿಣ ಶಿಲೆಗಳನ್ನೂ ಕರಗಿಸಿ ಮಡಚಿದ ಕೈಗಳನ್ನು ಬಿಡಿಸಿ ಅವುಗಳಿಂದ ಔದಾರ್ಯ ಮತ್ತು ದಾನಧರ್ಮಗಳ ಚಿಲುಮೆ ಹರಿಸಲು ಶಕ್ತವಾಗಿವೆ. ಕುರ್‌ಆನ್‌ನ ಅಂತಹ ಕೆಲವು ಹೃದಯಂಗಮ ಚಿತ್ರಣವನ್ನು ನೋಡೋಣ-

"ಅಲ್ಲಾಹನಿಗೆ ಉತ್ತಮ ಸಾಲವನ್ನು ನೀಡುವವರು ನಿಮ್ಮಲ್ಲಿ ಯಾರಿದ್ದಾರೆ? ಹಾಗಾದರೆ ಅವನು ಅದನ್ನು ಅನೇಕಾನೇಕ ಪಟ್ಟು ವರ್ಧಿಸಿ ನಿಮಗೆ ಮರಳಿಸುವನು. ಕ್ಷಯಗೊಳಿಸುವುದೂ ವೃದ್ಧಿಸುವುದೂ ಅಲ್ಲಾಹನ ಅಧಿಕಾರದಲ್ಲಿದೆ. ನಿಮಗೆಲ್ಲ ಆತನೆಡೆಗೇ ಮರಳಲಿಕ್ಕಿದೆ."

(ಅಲ್ ಬಕರಃ : 245)

ಅಲ್ಲಾಹನ ಮಾರ್ಗದಲ್ಲಿ ತಮ್ಮ ಸಂಪತ್ತನ್ನು ಖರ್ಚು ಮಾಡುವವರ ಖರ್ಚಿನ ಉಪಮೆ ಒಂದು ಕಾಳನ್ನು ಬಿತ್ತಿ ಅದರಿಂದ ಏಳು ತೆನೆಗಳು ಹೊರಟು ಪ್ರತಿಯೊಂದು ತೆನೆಯಲ್ಲಿ ನೂರು ಕಾಳುಗಳಿರುವಂತಿದೆ. ಇದೇ ರೀತಿಯಲ್ಲಿ ಅಲ್ಲಾಹ್ ತಾನುದ್ದೇಶಿಸಿದವನ ಧರ್ಮಗಳಿಗೆ ವೃದ್ಧಿಯನ್ನು ದಯಪಾಲಿಸುತ್ತಾನೆ. ಅವನು ಅತ್ಯಂತ ಉದಾರಿಯೂ ಸರ್ವಜ್ಞನೂ ಆಗಿರುತ್ತಾನೆ.

"ಅಲ್ಲಾಹನ ಮಾರ್ಗದಲ್ಲಿ ತಮ್ಮ ಸಂಪತ್ತನ್ನು ಖರ್ಚು ಮಾಡುವವರ, ಖರ್ಚು ಮಾಡಿದುದನ್ನು ಆಡಿಕೊಳ್ಳದವರ ಮತ್ತು ಪರ ಪೀಡನ ಗೈಯ್ಯದವರ ಪ್ರತಿಫಲವು ಅವರ ಪ್ರಭುವಿನ ಬಳಿ ಇದೆ. ಅವರಿಗೆ ಯಾವತ್ತು ಭಯ ಮತ್ತು ವ್ಯಥೆಯ ಸಂಭವವಿಲ್ಲ."

(ಅಲ್ ಬಕರಃ :261-62)

ತಮ್ಮ ಸಂಪತ್ತನ್ನು ಆಹೋರಾತ್ರಿ ರಹಸ್ಯವಾಗಿಯೂ ಬಹಿರಂಗವಾಗಿಯೂ ಖರ್ಚು ಮಾಡುವವರ ಪ್ರತಿಫಲ ಅವರ ಪ್ರಭುವಿನ ಬಳಿ ಇದೆ. ಇವರಿಗೆ ಯಾವ ಭಯವೂ ವ್ಯಥೆಯೂ ಇರುವುದಿಲ್ಲ. (ಅಲ್ ಬಕರಃ :274)

"ನಿಮ್ಮ ಪ್ರಭುವಿನ ಕ್ಷಮೆಯ ಕಡೆಗೆ ಮತ್ತು ಭೂಮಿ-ಆಕಾಶಗಳಷ್ಟು ವಿಶಾಲವಾಗಿರುವ ಸ್ವರ್ಗದ ಕಡೆಗೆ ಧಾವಿಸಿರಿ. ಅದು ದೇವ ಭಯವುಳ್ಳವರಿಗಾಗಿ ಸಿದ್ಧಗೊಳಿಸಲ್ಪಟ್ಟಿದೆ. ಅವರು ಸ್ಥಿತಿವಂತರಾಗಿರುವಾಗಲೂ ದುಸ್ಥಿತಿಯಲ್ಲಿರುವಾಗಲೂ ತಮ್ಮ ಸಂಪತ್ತನ್ನು ಖರ್ಚು ಮಾಡುತ್ತಾರೆ. ಕೋಪವನ್ನು ನುಂಗಿಕೊಳ್ಳುತ್ತಾರೆ ಮತ್ತು ಇತರರ ಅಪರಾಧಗಳನ್ನು ಕ್ಷಮಿಸುತ್ತಾರೆ. ಇಂತಹ ಸಜ್ಜನರು ಅಲ್ಲಾಹನಿಗೆ ಅತ್ಯಂತ ಮೆಚ್ಚುಗೆಯವರು." (ಆಲಿ ಇಮ್ರಾನ್: 133-134)

"ಪೈಗಂಬರರೇ ಇವರೊಡನೆ ಹೇಳಿರಿ. ನನ್ನ ಪ್ರಭು ತನ್ನ ದಾಸರಲ್ಲಿ ತಾನಿಚ್ಛಿಸುವವರಿಗೆ ವಿಸ್ತೃತ ಜೀವನಾಧಾರವನ್ನೀಯುತ್ತಾನೆ ಮತ್ತು ತಾನಿಚ್ಛಿಸಿದವರಿಗೆ ಪರಿಮಿತಗೊಳಿಸಿ ಕೊಡುತ್ತಾನೆ. ನೀವು ಖರ್ಚು ಮಾಡುವವರ ಸ್ಥಾನದಲ್ಲಿ ಅವನೇ ನಿಮಗೆ ಇನ್ನಷ್ಟು ಕೊಡುತ್ತಾನೆ. ಅವನು ಜೀವನಾಧಾರ ನೀಡುವವರಲ್ಲಿ ಅತ್ಯುತ್ತಮನಾಗಿರುತ್ತಾನೆ." (ಅಸ್ಸಬಾ: 39)

"ಅಲ್ಲಾಹ್ ಮತ್ತು ಅವನ ಸಂದೇಶ ವಾಹಕನ ಮೇಲೆ ವಿಶ್ವಾಸವಿರಿಸಿರಿ. ಅವನು

ಯಾವ ವಸ್ತುಗಳ ಮೇಲೆ ನಿಮ್ಮನ್ನು ಪ್ರತಿನಿಧಿಯಾಗಿ ಮಾಡಿರುವನೋ ಅವುಗಳಿಂದ ಖರ್ಚು ಮಾಡಿರಿ. ನಿಮ್ಮ ಪೈಕಿ ಸತ್ಯವಿಶ್ವಾಸ ಸ್ವೀಕರಿಸುವವರಿಗೆ ಮತ್ತು ಸಂಪತ್ತನ್ನು ಖರ್ಚು ಮಾಡುವವರಿಗೆ ಮಹಾ ಪ್ರತಿಫಲವಿದೆ." (ಅಲ್ ಹದೀದ್ :

"ಸ್ವತಃ ತಮಗೆ ಅಗತ್ಯವಿದ್ದರೂ ಇತರರಿಗೆ ತಮ್ಮ ಮೇಲೆ ಪ್ರಾಶಸ್ತ್ಯ ನೀಡುತ್ತಾ ವಾಸ್ತವದಲ್ಲಿ ಯಾರು ತಮ್ಮ ಮನಸ್ಸಿನ ಸಂಕುಚಿತತೆಯಿಂದ ರಕ್ಷಿಸಲ್ಪಟ್ಟರೋ ಅವ ವಿಜಯಿಗಳು." (ಅಲ್ ಹಶ್ರ್:

"ನಿಮ್ಮ ಪೈಕಿ ಯಾರಾದರೂ ಮರಣದ ಸಮಯ ಬಂದಿದ್ದು ಆಗ ಅವನು- ನ ಪ್ರಭೂ ನೀನು ನನಗೆ ಇನ್ನೂ ಸ್ವಲ್ಪ ಹೆಚ್ಚು ಕಾಲಾವಧಿ ನೀಡುವುದಿಲ್ಲವೇಕೆ? ಹಾಗೆ ನೀಡಿದ ನಾನು ದಾನಧರ್ಮ ಮಾಡುತ್ತಿದ್ದೆ ಮತ್ತು ಸಜ್ಜನರ ಸಾಲಿಗೆ ಸೇರುತ್ತಿದ್ದೆ. ಎಂದು ಹೇಳುವುದ ಮುಂಚೆ ನಾವು ನಿಮಗೆ ದಯಪಾಲಿಸಿರುವ ಸಂಪತ್ತಿನಿಂದ ಖರ್ಚು ಮಾಡಿರಿ."

(ಅಲ್ ಮುನಾಫಿಕೂನ್:1

ಅಲ್ಲಾಹನಿಗೆ ಉತ್ತಮ ಸಾಲವನ್ನು ಕೊಡುತ್ತಲಿರಿ. ನೀವು ನಿಮಗಾಗಿ ಮುಂ ಕಳುಹಿಸುವ ಪ್ರತಿಯೊಂದು ಸತ್ಕಾರ್ಯವನ್ನು ನೀವು ಅಲ್ಲಾಹನ ಬಳಿ ಕಾಣುವಿರಿ. ಅದು ಅತ್ಯುತ್ತಮ ಮತ್ತು ಮಹಾ ಸತ್ಫಲವಿರುವುದಾಗಿದೆ.' (ಅಲ್ ಮುಝ್ಝಮ್ಮಿಲ್: 20)

"ಅಲ್ಲಾಹನ ಮೇಲಿನ ಪ್ರೇಮದಿಂದ ದರಿದ್ರರಿಗೂ ಅನಾಥರಿಗೂ ಸೆರೆಯಾಳುಗಳಿಗ ಊಟ ಕೊಡುತ್ತಾರೆ. ಅವರು ಹೇಳುತ್ತಾರೆ, ನಾವು ನಿಮಗೆ ಕೇವಲ ಅಲ್ಲಾಹನಿಗಾ ಉಣಿಸುತ್ತಿದ್ದೇವೆ. ನಾವು ನಿಮ್ಮಿಂದ ಯಾವುದೇ ಪ್ರತಿಫಲವನ್ನಾಗಲಿ, ಕೃತಜ್ಞತೆಯನ್ನಾಗ ಬಯಸುವುದಿಲ್ಲ. ನಮಗಂತು, ನಮ್ಮ ಪ್ರಭುವಿನಿಂದ ಆ ತೀವ್ರ ಕಾಠಿಣ್ಯದಿಂದ ಅತ್ಯಂ ಸುದೀರ್ಘ ದಿನದ ಭಯವಿದೆ." (ಅದ್ದಹ್ರ್ : 8-1

"ಅವನು ದುರ್ಗಮ ಏರನ್ನು ಏರುವ ಸಾಹಸವನ್ನೇ ಮಾಡಲಿಲ್ಲ. ಆ ದುರ್ಗಮ ಏ ಏನೆಂದು ನಿಮಗೇನು ಗೊತ್ತು? ಯಾವುದಾದರೂ ಕೊರಳನ್ನು ದಾಸ್ಯಬಂಧನದಿಂ ವಿಮೋಚಿಸುವುದು ಅಥವಾ ಹಸಿವಿನ ದಿನ ಹಸಿದ ಆಪ್ತ ಅನಾಥನಿಗೆ ಅಥವಾ ದಿಕ್ಕೇ ದರಿದ್ರನಿಗೆ ಉಣಬಡಿಸುವುದು- ತರುವಾಯ, ಸತ್ಯವಿಶ್ವಾಸ ವಿಧಿಸಿದ ಹಾಗೂ ಪರಸ್ಪರರಿ ಸಹನೆ ಮತ್ತು (ಸೃಷ್ಟಿಗಳ ಮೇಲೆ) ಕರುಣೆಯನ್ನು ಬೋಧಿಸಿದ ಜನರ ಸಾಲಿಗೆ ಸೇರುವುದ ಇವರೇ ಬಲಗಡೆಯವರು." (ಅಲ್ ಬಲದ್: 11-1

ಕೆಲವು ಪ್ರವಾದಿವಚನಗಳನ್ನು ನೋಡಿರಿ:

"ಓರ್ವ ದಾಸನು, 'ನನ್ನ ಹಣ' ಎಂದು ಹೇಳುತ್ತಲಿರುತ್ತಾನೆ. ಆದರೆ ಆತನ ಹಣದ ಮೂರು ಅಂಶಗಳು ಮಾತ್ರ ಆತನಿಗೆ ಉಪಕಾರಿಯಾಗುತ್ತವೆ. ಅತನು ತಿಂದು ಮುಗಿಸಿದ್ದು ಉಟ್ಟು ಹರಿದದ್ದು, ಕೊಟ್ಟು ತೃಪ್ತನಾದುದು. ಇತರ ಎಲ್ಲವೂ ಆತನಿಗೆ ನಷ್ಟಕರ ಮತ ಜನರಿಗೆ ಬಿಟ್ಟು ಹೋಗುವವುಗಳಾಗಿವೆ." (ಮುಸ್ಲಿಮ್

ಪ್ರವಾದಿ(ಸ) ಒಮ್ಮೆ ಕೇಳಿದರು: "ಯಾರಾದರೂ ಸ್ವಂತ ಸಂಪತ್ತಿಗಿಂತ ವಾರೀಸುದಾರರ ಸೊತ್ತನ್ನು ಇಷ್ಟಪಡುವವರಿದ್ದಾರೆಯೇ? ಅವರು ಹೇಳಿದರು, ಸ್ವಂತ ಸಂಪತ್ತನ್ನು ಇಷ್ಟಪಡದವರು ಯಾರೂ ಇರಲಾರರು. ಆಗ ಪ್ರವಾದಿಯವರು ಹೇಳಿದರು: ನೀವು ಈ ಹಿಂದೆ ವ್ಯಯಿಸಿದ್ದೇ ನಿಮ್ಮ ಸಂಪತ್ತು, ನಾಳೆಗಾಗಿ ಉಳಿಸಿದ್ದು ವಾರೀಸು ಸೊತ್ತು." (ಬುಖಾರಿ, ನಸಾಈ)

"ಓರ್ವ ಮಧ್ಯಸ್ಥಗಾರನಿಲ್ಲದೆ ಅಲ್ಲಾಹನು ನಿಮ್ಮಲ್ಲಿ ಪ್ರತಿಯೋರ್ವರೊಡನೆ ಮಾತನಾಡುವನು. ಆಗ ಆತ ಬಲಭಾಗಕ್ಕೆ ನೋಡುವನು. ಅಲ್ಲಿ ಆತನ ಕರ್ಮಗಳೇ ಕಾಣಿಸುತ್ತವೆ. ಎಡ ಭಾಗಕ್ಕೆ ನೋಡುವನು. ಅಲ್ಲಿಯೂ ಅದೇ ಕಾಣಿಸುವುದು. ಅನಂತರ ಆತನು ಮುಂಭಾಗಕ್ಕೆ ನೋಡುವನು. ಅಲ್ಲಿ ನರಕದ ವಿನಾ ಬೇರೇನೂ ಕಾಣಿಸುವುದಿಲ್ಲ. ಆದ್ದರಿಂದ ಒಂದು ಖರ್ಜೂರದ ಚೂರಿನಿಂದಲಾದರೂ ನರಕವನ್ನು ಪ್ರತಿರೋಧಿಸಿರಿ." (ಬುಖಾರಿ, ಮುಸ್ಲಿಮ್)

"ಶುದ್ಧ ರೀತಿಯಿಂದ ಸಂಪಾದಿಸಿದ್ದರಿಂದ ಒಂದು ಖರ್ಜೂರವನ್ನು ದಾನ ನೀಡಿದರೂ- (ಅಶುದ್ಧ ಸಂಪಾದನೆಯನ್ನು ಅಲ್ಲಾಹನು ಸ್ವೀಕರಿಸುವುದಿಲ್ಲ-) ಅಲ್ಲಾಹನು ಅದನ್ನು ಬಲಗೈಯಿಂದ ಸ್ವೀಕರಿಸುತ್ತಾನೆ. ತರುವಾಯ ಎಳೆ ಹಸುಳೆಯನ್ನು ಬೆಳೆಸಿದಂತೆ ಆ ದಾನವನ್ನು ಪರ್ವತದಷ್ಟಾಗುವ ತನಕ ಬೆಳೆಸುವನು." (ಬುಖಾರಿ, ಮುಸ್ಲಿಮ್)

"ದಾನ ಧರ್ಮಗಳು ಪಾಪ ಕರ್ಮಗಳನ್ನು ಅಳಿಸಿ ಬಿಡುತ್ತವೆ. ನೀರು ಬೆಂಕಿಯನ್ನು ಅಳಿಸಿ ಬಿಡುವಂತೆ." (ಅಬೂ ಯಅ್‌ಲಾ)

"ಜನರ ನ್ಯಾಯ ತೀರ್ಮಾನವಾಗುವ ತನಕ, ಅವರು ತಮ್ಮ ದಾನ ಧರ್ಮಗಳ ನೆರಳಿನಲ್ಲಿರುತ್ತಾರೆ." (ಅಹ್ಮದ್, ಇಬ್ನು ಖುಝೈಮ, ಇಬ್ನು ಹಯ್ಯಾನ್, ಹಾಕಿಮ್)

ಪ್ರವಾದಿಯವರು ಒಮ್ಮೆ ಹೇಳಿದರು: "ಒಂದು ದಿರ್ಹಮ್, ಒಂದು ಲಕ್ಷ ದಿರ್ಹಮ್‌ಗಳಿಗಿಂತ ಅಧಿಕ ಬೆಲೆಯುಳ್ಳದ್ದಾಗಿರುವುದು."ಒಬ್ಬರು ಪ್ರಶ್ನಿಸಿದರು: "ಪ್ರವಾದಿಯವರೇ ಅದು ಹೇಗೆ?" ಪ್ರವಾದಿಯವರು ಹೇಳಿದರು: "ಓರ್ವ ಧನಿಕನು ತನ್ನ ಖಜಾನೆಯಿಂದ ಒಂದು ಲಕ್ಷ ದಿರ್ಹಮ್ ದಾನ ಮಾಡಿದ." ಕೇವಲ 2 ದಿರ್ಹಮ್ ಇರುವ ಇನ್ನೊಬ್ಬಾತನು ಒಂದು ದಿರ್ಹಮ್ ದಾನ ನೀಡಿದ." (ನಸಾಈ, ಇಬ್ನು ಖುಝೈಮ, ಇಬ್ನು ಹಯ್ಯಾನ್, ಹಾಕಿಮ್)

ಮುಸ್ಲಿಮ್ ಸಮಾಜದ ಕರ್ಮಜೀವನದ ರಚನೆಯಲ್ಲಿ, ಈ ಕುರ್‌ಆನ್ ವಾಕ್ಯಗಳು ಮತ್ತು ಪ್ರವಾದಿ ವಚನಗಳು ವಿಶೇಷ ಪ್ರಭಾವ ಬೀರಿವೆ. ಅವು ಉತ್ತಮ ನಡತೆ ಮತ್ತು ಸತ್ಕರ್ಮಗಳಿಂದ ಸುಸಂಸ್ಕೃತವಾದ ಮನಸ್ಸು ಹಾಗೂ ಉನ್ನತ ಮತ್ತು ಉದಾತ್ತ ಭಾವನೆಗಳನ್ನು ಮೂಡಿಸುವ ನಿಟ್ಟಿನಲ್ಲಿ ಪ್ರಮುಖ ಪಾತ್ರ ವಹಿಸಿದುವು. ಅವು ಮಾನವ ಮನದಲ್ಲಿ ಬೀರಿದ ಗಾಢ ಪ್ರಭಾವವನ್ನು ಸೂಚಿಸುವ ಐತಿಹಾಸಿಕ ದಾಖಲೆಗಳನ್ನು ನಾವು ಪರಿಶೀಲಿಸೋಣ.

"ಅಲ್ಲಾಹನಿಗೆ ಉತ್ತಮ ಸಾಲ ನೀಡುವವರು ಯಾರಿದ್ದಾರೆ?" ಎಂಬ ವಾಕ್ಯವು

ಅವತೀರ್ಣಗೊಂಡಾಗ ಅಬೂ ದಹ್‌ದಾಹ್ ಎಂಬ ಅನ್ಸಾರಿಯು ಪ್ರವಾದಿಯವರೊಡನೆ ಕೇಳಿದರು: "ನಾವು ಅಲ್ಲಾಹನಿಗೆ ಸಾಲ ನೀಡಬೇಕೆಂದು ನೀವು ಇಚ್ಛಿಸುತ್ತೀರಾ?" "ಹೌದು, ಅಬೂ ದಹ್‌ದಾಹ್!" ಎಂದು ಪ್ರವಾದಿ(ಸ) ಹೇಳಿದರು. "ಹಾಗಿದ್ದರೆ, ನಿಮ್ಮ ಕೈ ಚಾಚಿರಿ!" ಅಬೂ ದಹ್‌ದಾಹ್ ವಿನಂತಿಸಿದರು. ಪ್ರವಾದಿಯವರ ಕೈ ಹಿಡಿದು ಅಬೂ ದಹ್‌ದಾಹ್ ಮುಂದುವರಿಸಿದರು, "ನಾನಿದೋ ನನ್ನ ತೋಟವನ್ನು ಸರ್ವ ಶಕ್ತನಾದ ಅಲ್ಲಾಹನಿಗೆ ಸಾಲ ನೀಡುತ್ತೇನೆ." ಅಬೂ ದಹ್‌ದಾಹ್‌ರ ಕುಟುಂಬವು ವಾಸವಾಗಿದ್ದ ಆ ತೋಟದಲ್ಲಿ 600 ಖರ್ಜೂರದ ಮರಗಳಿದ್ದುವು. ಅಬೂ ದಹ್‌ದಾಹ್ ಆ ಕೂಡಲೇ ತೋಟಕ್ಕೆ ಹೋಗಿ ಪತ್ನಿಯೊಡನೆ ಹೀಗೆಂದರು: "ಉಮ್ಮುದಹ್‌ದಾಹ್ ಹೊರಗೆ ಬನ್ನಿರಿ! ಸರ್ವ ಶಕ್ತನಾದ ನನ್ನ ಪ್ರಭುವಿಗೆ ನಾನು ಈ ತೋಟವನ್ನು ಸಾಲ ಕೊಟ್ಟಿರುತ್ತೇನೆ."

(ತಫ್ಸೀರ್ ಇಬ್ನು ಕಸೀರ್: ಭಾಗ-1, ಪುಟ : 299)

ಅಬೂತಲ್ಹಾ ಓರ್ವ ಶ್ರೀಮಂತ ಅನ್ಸಾರಿಯಾಗಿದ್ದರು. 'ಬೈರುಹಾ' ಎಂಬ ತನ್ನ ತೋಟವನ್ನು ಅವರು ಅತಿಯಾಗಿ ಪ್ರೀತಿಸುತ್ತಿದ್ದರು. ಅದು ಮಸೀದಿಯ ಎದುರುಗಡೆಯಲ್ಲಿತ್ತು. ಪ್ರವಾದಿಯವರು ಅದರಲ್ಲಿದ್ದ ಶುದ್ಧ ನೀರನ್ನು ಆಗಾಗ್ಗೆ ಕುಡಿಯುತ್ತಿದ್ದರು. "ನಿಮಗೆ ಅತ್ಯಂತ ಪ್ರಿಯವಾದ ವಸ್ತುಗಳನ್ನು ದಾನ ನೀಡದೆ ನಿಮಗೆ ಪುಣ್ಯ ದೊರೆಯಲಾರದು" ಎಂಬ ವಾಕ್ಯವು ಅವತೀರ್ಣಗೊಂಡಾಗ ಅಬೂತಲ್ಹಾ ಹೇಳಿದರು: "ಪ್ರವಾದಿಯವರೇ, ನಿಮಗೆ ಪ್ರಿಯವಾದುದರಿಂದ ವ್ಯಯಿಸದೆ ನಿಮಗೆ ಪುಣ್ಯ ದೊರೆಯಲಾರದೆಂದು ಅಲ್ಲಾಹನು ಹೇಳಿರುವನಷ್ಟೆ. ನನ್ನ ಸೊತ್ತಿನಲ್ಲಿ 'ಬೈರುಹಾ' ತೋಟವು ನನಗೆ ಅತ್ಯಂತ ಪ್ರಿಯವಾಗಿದೆ. ಅಲ್ಲಾಹನ ಪ್ರತಿಫಲದ ಆಕಾಂಕ್ಷೆಯಿಂದ ಅದನ್ನು ನಾನು ಅಲ್ಲಾಹನಿಗೆ ದಾನ ನೀಡ ಬಯಸಿದ್ದೇನೆ. ಅಲ್ಲಾಹನ ಆದೇಶದನ್ವಯ ನೀವು ಅದನ್ನು ಉಪಯೋಗಿಸಿರಿ."

ಪ್ರವಾದಿಯವರು ಹೇಳಿದರು: "ಬೇಡ, ಅದರಿಂದ ಭಾರೀ ಆದಾಯ ದೊರೆಯುತ್ತಿದೆಯೆಂದು ನಾನು ತಿಳಿದಿದ್ದೇನೆ. ನೀವು ಅದನ್ನು ನಿಮ್ಮ ಕುಟುಂಬದವರಿಗೆ ನೀಡಬೇಕೆಂದು ನನ್ನ ಅಭಿಪ್ರಾಯ." "ಪ್ರವಾದಿಯವರೇ, ಹಾಗಾದರೆ ಅಂತೆಯೇ ಮಾಡಿರಿ" ಅಬೂತಲ್ಹಾ ಹೇಳಿದರು. ತರುವಾಯ ಅಬೂತಲ್ಹಾರು ಆ ತೋಟವನ್ನು ತನ್ನ ಬಂಧುಗಳಿಗೂ ಪಿತೃ ಸಹೋದರಿಯರಿಗೂ ಹಂಚಿದರು.

(ತಫ್ಸೀರ್ ಇಬ್ನು ಕಸೀರ್: ಭಾ-1, ಪುಟ: 381)

ಔದಾರ್ಯ ಮತ್ತು ವಿಶಾಲ ಮನೋಭಾವದ ಇಂತಹ ಉದಾಹರಣೆಗಳು ಇಸ್ಲಾಮೀ ಇತಿಹಾಸದಾದ್ಯಂತ ಕಂಡು ಬರುತ್ತದೆ. ಸತ್ಯವಿಶ್ವಾಸಿಗಳಿಗೆ ಬೆಳ್ಳಿ ಮತ್ತು ಬಂಗಾರದ ರಾಶಿಗಳಿಗಿಂತ ಅಲ್ಲಾಹ್ ಮತ್ತು ಪ್ರವಾದಿಯವರೇ ಅತ್ಯಂತ ಪ್ರಿಯರಾಗಿದ್ದಾರೆ. ಇಮಾಮ್ ಲೈಸ್ ಬಿನ್ ಅಸದ್‌ರಿಗೆ ವಾರ್ಷಿಕ ಒಂದು ಸಾವಿರ ದೀನಾರ್ ಆದಾಯವಿತ್ತು. ಈ ಸಂಪತ್ತಿನಿಂದ ಅವರು ಝಕಾತ್ ನೀಡಬೇಕಾಗುತ್ತಿರಲಿಲ್ಲ. ಯಾಕೆಂದರೆ ಕೈವಶವಿರುವ ಆದಾಯದಿಂದ ಅವರು ವರ್ಷ ಭರ್ತಿಯಾಗುವುದಕ್ಕಿಂತ ಮುಂಚೆಯೇ ದಾನ ನೀಡುತ್ತಿದ್ದರು.

ದಿನನಿತ್ಯ 360 ಬಡವರಿಗಾದರೂ ದಾನ ನೀಡದೆ ಅವರು ಯಾರೊಂದಿಗೂ ಮಾತನಾಡುತ್ತಿರಲಿಲ್ಲವೆಂದು ಇತಿಹಾಸ ಹೇಳುತ್ತದೆ. ಒಮ್ಮೆ ಓರ್ವ ಮಹಿಳೆಯು ಅವರೊಡನೆ ಸ್ವಲ್ಪ ಜೇನು ಕೇಳಿದಳು. ಅವರು ಒಂದು ಪಾತ್ರೆ ತುಂಬಾ ಜೇನು ನೀಡಿದರು. ಆಗ ಯಾರೋ ಕೇಳಿದರು: "ಆ ಮಹಿಳೆಗೆ ಅಷ್ಟೊಂದು ಜೇನಿನ ಅಗತ್ಯವಿಲ್ಲವಲ್ಲಾ." "ಅವರಿಗೆ ಅಗತ್ಯವಿರುವುದನ್ನು ಅವರು ಕೇಳಿದರು. ಅಲ್ಲಾಹನು ನನಗೆ ನೀಡಿದ ಅನುಗ್ರಹದ ಪ್ರಮಾಣದಲ್ಲಿ ನಾನು ನೀಡಿದೆ" ಇಮಾಮ್ ಹೇಳಿದರು. ಅಬ್ದುಲ್ಲಾ ಬಿನ್ ಜಅ್‌ಫರ್‌ರು ಅಪೇಕ್ಷಿತರಿಗೆ ಏನಾದರೂ ನೀಡದೆ ಮರಳಿ ಕಳುಹಿಸುತ್ತಿರಲಿಲ್ಲ. ಕೆಲವು ಮಿತ್ರರು ಈ ಗುಣವನ್ನು ಟೀಕಿಸಿದಾಗ ಅವರು ಹೀಗೆಂದರು: "ಅಲ್ಲಾಹನು ನನಗಾಗಿ ಒಂದು ಕಾರ್ಯವನ್ನು ನಿತ್ಯ ಮಾಡುತ್ತಿದ್ದಾನೆ. ನಾನು ಆತನ ದಾಸರಿಗಾಗಿ ನಿತ್ಯ ಒಂದು ಕಾರ್ಯವನ್ನು ಮಾಡುತ್ತಿದ್ದೇನೆ. ನನಗೆ ಸಂಪತ್ತನ್ನು ನೀಡುತ್ತಲಿರುವುದು ಅಲ್ಲಾಹನ ವಾಡಿಕೆಯಾಗಿದೆ. ಅದನ್ನು ಆತನ ದಾಸರಿಗೆ ದಾನ ಮಾಡುವುದು ನನ್ನ ವಾಡಿಕೆಯಾಗಿದೆ. ನಾನು ನನ್ನ ವಾಡಿಕೆಯನ್ನು ನಿಲ್ಲಿಸಿ ಬಿಟ್ಟರೆ, ಅಲ್ಲಾಹನು ಆತನ ವಾಡಿಕೆಯನ್ನೂ ನಿಲ್ಲಿಸಬಹುದೆಂದು ನಾನು ಹೆದರುತ್ತೇನೆ."

## ವಕ್ಫ್‌ಗಳು

ದಾನ ಧರ್ಮಗಳ ಪೈಕಿ ಇಸ್ಲಾಮ್ 'ಸದಕತುನ್ ಜಾರಿಯ' ಅಥವಾ ಶಾಶ್ವತ ದಾನಕ್ಕೆ ಹೆಚ್ಚಿನ ಪ್ರಾಮುಖ್ಯ ನೀಡಿದೆ. ಅಂತಹ ದಾನಗಳಿಂದ ದೊರೆಯುವ ಚಿರಂತನ ಆದಾಯದಿಂದಾಗಿ ಅದು ಇತರ ದಾನಗಳಿಗಿಂತ ಹೆಚ್ಚು ಮಹತ್ವ ಪಡೆದಿದೆ. ಅವುಗಳಿಂದ ಪ್ರಯೋಜನ ದೊರೆಯುತ್ತಿರುವ ತನಕ ಅದನ್ನು ದಾನ ನೀಡಿದವರಿಗೆ ಪರಲೋಕದಲ್ಲಿ ಪ್ರತಿಫಲ ಲಭಿಸುತ್ತಲಿರುವುದು. ಪ್ರವಾದಿ(ಸ) ಹೇಳಿದರು:

"ಓರ್ವನು ಮರಣ ಹೊಂದಿದಾಗ ಕೇವಲ ಮೂರು ಕಾರ್ಯಗಳು ಮಾತ್ರ ಆತನಿಗೆ ಉಪಯುಕ್ತವಾಗುತ್ತವೆ- ಶಾಶ್ವತ ದಾನ, ಪ್ರಯೋಜನಕಾರಿ ಜ್ಞಾನ ಮತ್ತು ತನಗಾಗಿ ಪ್ರಾರ್ಥಿಸುವ ಉತ್ತಮ ಸಂತಾನಗಳು." (ಮುಸ್ಲಿಮ್, ಅಬೂ ದಾವೂದ್, ತಿರ್ಮಿದಿ, ನಸಾಈ)

ಇಬ್ನು ಉಮರ್ ಉಲ್ಲೇಖಿಸಿದ್ದಾರೆ:

ಉಮರ್‌ರಿಗೆ ಖೈಬರ್‌ನಲ್ಲಿ ಸ್ವಲ್ಪ ಜಮೀನು ದೊರೆಯಿತು. ಅದನ್ನು ಏನು ಮಾಡಬೇಕೆಂದು ಅವರು ಪ್ರವಾದಿಯವರೊಡನೆ ವಿಚಾರಿಸಿದರು. "ಸ್ವಂತಕ್ಕೆ ಇರಿಸಿಕೊಳ್ಳಬಹುದು ಅಥವಾ ದಾನ ನೀಡಬಹುದು" ಎಂದು ಪ್ರವಾದಿಯವರು ತಿಳಿಸಿದರು. ಮಾರಾಟ ಮಾಡಬಾರದು, ಉಚಿತವಾಗಿ ನೀಡಬಾರದು ಮತ್ತು ವಾರೀಸು ಪಡೆಯಬಾರದೆಂಬ ನಿಬಂಧನೆಗಳನ್ವಯ ಉಮರ್‌ರು ಅದನ್ನು ಬಡವರು, ಸಂಬಂಧಿಕರು, ಗುಲಾಮರು, ದುರ್ಬಲರು ಮತ್ತು ಯಾತ್ರಿಕರಿಗಾಗಿ ದಾನ ಮಾಡಿದರು. ಅದರ ಅನುಭೋಗಿಗಳು ಅದರಿಂದ ಅವರ ಆಹಾರಕ್ಕೆ ಸಾಕಷ್ಟು ಬಳಸಬಹುದು. ಶ್ರೀಮಂತರಲ್ಲದವರು ಮಾತ್ರ ಹಾಗೆ ಮಾಡಬಹುದೆಂದೂ ನಿರ್ಣಯಿಸಿದರು. (ಏಳು ಮಂದಿ ಹದೀಸ್ ಸಂಗ್ರಾಹಕರೂ ಇದನ್ನು ಉದ್ಧರಿಸಿದ್ದಾರೆ.)

ಈ ಘಟನೆಯು ವಕ್ಫ್‌ಗಳ ಧಾರ್ಮಿಕ ಬುನಾದಿಯಾಯಿತು. ಎಲ್ಲ ಕಾಲದಲ್ಲಿಯೂ ಅದು ಮುಸ್ಲಿಮ್ ಸಮಾಜದಲ್ಲಿ ಶ್ಲಾಘನೀಯ ಪರಿಣಾಮ ಬೀರಿತು. ಆ ಪರಿಣಾಮಗಳು, ಮುಸ್ಲಿಮರ ಮನಸ್ಸಿನಲ್ಲಿ ದಾನ ಧರ್ಮಗಳ ನೈಜ ಉದ್ದೇಶ ಮತ್ತು ಸದ್ಭಾವನೆಗಳ ಪ್ರಭಾವವುಂಟಾಯಿತೆಂಬುದರ ಸುಸ್ಪಷ್ಟ ನಿದರ್ಶನವಾಗಿದೆ. ಮುಸ್ಲಿಮ್ ಸಮಾಜದ ಎಲ್ಲ ಬೇಡಿಕೆಗಳಿಗೂ ಉದಾರಮತಿಗಳು ತಮ್ಮ ಸಂಪತ್ತಿನಿಂದ ಒಂದು ಪಾಲನ್ನು ಮೀಸಲಿಟ್ಟರು. ಬಡವರು ಮತ್ತು ನಿರ್ಗತಿಕರಿಗೆ ಆಹಾರ, ಬಟ್ಟೆಬರೆ, ಔಷಧ ಮತ್ತು ಪಯಣ ಸೌಲಭ್ಯಗಳಿಗಾಗಿ ನೀಡಿದ ವಿಪುಲ ಮತ್ತು ವೈವಿಧ್ಯಮಯ ವಕ್ಫ್‌ಗಳು ಮುಸ್ಲಿಮರಿಗೆ ಸದಾ ಹೆಮ್ಮೆಯ ವಿಷಯವಾಗಿತ್ತು. ಮುಸ್ಲಿಮರು ಮಾನವರಿಗಾಗಿ ಮಾತ್ರವಲ್ಲದೆ ಪಶು ಪಕ್ಷಿಗಳ ಆಹಾರ ಮತ್ತು ಶುಶ್ರೂಷೆಗಾಗಿಯೂ ವಕ್ಫ್ ಒದಗಿಸಿದ್ದರು. ಪಶು ಪಕ್ಷಿಗಳೊಂದಿಗೆ ಇಂತಹ ಮನೋಭಾವ ವಿರಿಸಿದ್ದವರಿಗೆ ಮಾನವರೊಂದಿಗೆ ಅದೆಷ್ಟು ಸಹಾನುಭೂತಿಯಿದ್ದಿರಬಹುದೆಂದು ಊಹಿಸಬಹುದಲ್ಲವೇ.

ಈಜಿಪ್ಟ್‌ನಲ್ಲಿ, ಗುಲಾಮ ರಾಜ ವಂಶದ ಕಾಲದಲ್ಲಿ ಒಬ್ಬರು ಒಂದು ಆಸ್ಪತ್ರೆಯನ್ನು ವಕ್ಫ್ ಮಾಡಿದರು. ಅದರ ಕೆಲವು ನಿಬಂಧನೆಗಳಿಂದ ವಕ್ಫ್‌ನ ಸ್ವರೂಪ ಮತ್ತು ಆ ಬಗ್ಗೆ ಪೂರ್ವಕಾಲದ ಮುಸ್ಲಿಮರ ಕಾರ್ಯದಕ್ಷತೆ ವ್ಯಕ್ತವಾಗುತ್ತದೆ. ಈಜಿಪ್ಟ್‌ನ ಗುಲಾಮ ವಂಶದ ಆಳ್ವಿಕೆಯು ತುಲನಾತ್ಮಕವಾಗಿ ಇಸ್ಲಾಮಿನ ಸ್ವರ್ಣ ಯುಗಕ್ಕಿಂತ ಶಿಥಿಲವಾಗಿತ್ತೆಂಬ ವಾಸ್ತವಿಕತೆಯನ್ನು ಪರಿಗಣಿಸಿದಾಗ, ಈ ವಿಷಯದಲ್ಲಿ ಮುಸ್ಲಿಮರು ತೋರಿದ ಕಾಳಜಿಯು ಶ್ಲಾಘನೀಯವೆಂದು ವ್ಯಕ್ತವಾಗುತ್ತದೆ. ವಕ್ಫ್‌ನ ಕೆಲವು ನಿಬಂಧನೆಗಳು ಹೀಗಿದ್ದುವು:

"ಕೈರೋ ಮತ್ತು ಪರಿಸರ ಪ್ರದೇಶಗಳ ಬಡವರು ಮತ್ತು ಶ್ರೀಮಂತ ಸ್ತ್ರೀ-ಪುರುಷರ ಶುಶ್ರೂಷೆಗಾಗಿ ಈ ಆಸ್ಪತ್ರೆಯನ್ನು ಸ್ಥಾಪಿಸಲಾಗಿದೆ. ಇಲ್ಲಿನ ಶುಶ್ರೂಷೆಗಾಗಿ ರೋಗಿಯ ದೇಶ, ಗೋತ್ರ ಅಥವಾ ರೋಗದ ಸ್ವರೂಪವನ್ನು ಪರಿಗಣಿಸಬಾರದು. ರೋಗಿಗಳು ಒಂಟಿಯಾಗಿ ಅಥವಾ ಸಾಮೂಹಿಕವಾಗಿ ಬಂದರೂ ಅವರು ಯುವಕರು ಅಥವಾ ವೃದ್ಧರಾಗಿದ್ದರೂ ಎಲ್ಲರಿಗೂ ಶುಶ್ರೂಷೆ ನೀಡಬೇಕು. ಬಡರೋಗಿಗಳು ಸಂಪೂರ್ಣ ಗುಣಮುಖರಾಗುವ ತನಕ ಇಲ್ಲಿ ಉಳಿದುಕೊಂಡು ಉಚಿತ ಚಿಕಿತ್ಸೆ ಮತ್ತು ಔಷಧ ಪಡೆಯಬಹುದು. ಇದರಲ್ಲಿ ಸ್ತ್ರೀ-ಪುರುಷ, ದೇಶ ಭೇದವಿಲ್ಲ."

ರೋಗಿಗಳಿಗೆ ಅಗತ್ಯವಿರುವ ಮಂಚ ಮತ್ತಿತರ ಶಯ್ಯೋಪಕರಣಗಳನ್ನು ರೋಗಿ ಮತ್ತು ರೋಗದ ಸ್ವರೂಪದನ್ವಯ ಸಂಚಾಲಕನು, ಆಸ್ಪತ್ರೆಗಾಗಿ ವಕ್ಫ್ ಮಾಡಿರುವ ಸೊತ್ತಿನಿಂದ ಒದಗಿಸಬೇಕು. ರೋಗಿಗಳ ಹಕ್ಕುಗಳನ್ನು ನೀಡುವ ಸಂಚಾಲಕನು ಅಲ್ಲಾಹನ ಭಯದಿಂದ ವ್ಯವಹರಿಸಬೇಕು. ರೋಗಿಗಳ ಸೌಲಭ್ಯಗಳಿಗಾಗಿ ತನ್ನ ಸಾಮರ್ಥ್ಯವನ್ನು ಗರಿಷ್ಠ ವಿನಿಯೋಗಿಸಬೇಕು. ಯಾಕೆಂದರೆ ಅವರು ಮೇಲ್ವಿಚಾರಕರಾಗಿದ್ದಾರೆ. ಪ್ರತಿಯೊಬ್ಬ ಮೇಲ್ವಿಚಾರಕನೊಡನೆಯೂ ಅವರ ಆಶ್ರಿತರ ಬಗ್ಗೆ ಪ್ರಶ್ನಿಸಲಾಗುವುದು.

ಆಸ್ಪತ್ರೆಗೆ ಸಂಬಂಧಿಸಿ ಒಂದು ಪಾಕ ಶಾಲೆಯಿರುತ್ತದೆ. ಪ್ರತಿಯೊಬ್ಬ ರೋಗಿಗೂ ೇಕಾದ ಆಹಾರವನ್ನು ಇಲ್ಲಿ ತಯಾರಿಸಿ ವಿಶೇಷ ಪಾತ್ರೆಗಳಲ್ಲಿ ಬಡಿಸಲಾಗುವುದು. ಓರ್ವ ೋಗಿಯು ಬಳಸಿದ ಪಾತ್ರೆಯನ್ನು ಇನ್ನೊಬ್ಬ ರೋಗಿಗೆ ನೀಡುವುದು ತರವಲ್ಲ. ಪ್ರತಿಯೊಬ್ಬ ೋಗಿಗೆ ಸೂಚಿಸಿರುವ ಆಹಾರವನ್ನು ಬೆಳಿಗ್ಗೆ ಮತ್ತು ಸಂಜೆ ಅವರ ಪಾತ್ರೆಗಳಲ್ಲಿ ತುಂಬಿಸಿ ುಚ್ಚಿ ಕ್ಲಪ್ತವಾಗಿ ರೋಗಿಗಳಿಗೆ ತಲುಪಿಸಲಾಗುವುದು.

ಒಟ್ಟಿಗೆ ಅಥವಾ ಸರದಿ ಪ್ರಕಾರ ಆಸ್ಪತ್ರೆಗೆ ಬಂದು, ರೋಗಿಗಳನ್ನು ಪರೀಕ್ಷಿಸಿ ೋಗಿಗಳ ಸ್ಥಿತಿಯನ್ನು ದಾಖಲಿಸಿ ಸೂಕ್ತ ಆಹಾರ ಮತ್ತು ಔಷಧಗಳನ್ನು ಸೂಚಿಸುವ ವೈದ್ಯರ ೦ರ್ಚು ವೆಚ್ಚಗಳನ್ನು ವಕ್ಫ್ ಸೊತ್ತಿನ ಸಂಚಾಲಕನು ಪೂರೈಸಬೇಕು.

"ಓರ್ವ ಬಡವನು ರೋಗಪೀಡಿತನಾಗಿ ಮನೆಯಲ್ಲಿ ಮಲಗಿದ್ದರೆ ಆತನಿಗೆ ಅಗತ್ಯವಿರುವ ಹಾರ ಔಷಧಿ ಇತ್ಯಾದಿಗಳನ್ನು ಮೇಲ್ವಿಚಾರಕನು ರೋಗಿಯ ಮನೆಗೆ ತಲಪಿಸಬೇಕು." ಇಮಾಮ್ ಗಝ್ಝಾಲಿ 'ಲೈಸ ಮಿನಲ್ ಇಸ್ಲಾಮ್' ಎಂಬ ಕೃತಿಯಲ್ಲಿ ಉದ್ಧರಿಸಿದ್ದು; ಪುಟ: 24,25)

## ಂಕ್ಷೇಪ

ಬಡತನ ನಿರ್ಮೂಲನಕ್ಕಾಗಿ ಇಸ್ಲಾಮ್ ಸೂಚಿಸಿದ ಮಾರ್ಗಗಳನ್ನು ಈ ತನಕ ವರಿಸಲಾಗಿದೆ. ಅವುಗಳನ್ನು ಮೂರು ವಿಧಗಳಾಗಿ ವಿಂಗಡಿಸಬಹುದು-

1. **ಕೇವಲ ಬಡವರಿಗೆ ಸಂಬಂಧಿಸಿದ್ದು:** ಸಾಮರ್ಥ್ಯ ಮತ್ತು ಸೌಲಭ್ಯವಿರುವಾತನು ುದ್ಯೋಗ ಮಾಡಬೇಕು. ಆತನಿಗೆ ಯೋಗ್ಯ ಉದ್ಯೋಗ ದೊರಕಿಸಲಿಕ್ಕಾಗಿ ಸಮಾಜ ಮತ್ತು ಾಷ್ಟ್ರವು ಹಣ ಮತ್ತು ತರಬೇತಿ ನೀಡಿ ಸಹಾಯ ಮಾಡಬೇಕು.

2. **ಮುಸ್ಲಿಮ್ ಸಮಾಜಕ್ಕೆ ಸಂಬಂಧಿಸಿದ್ದು:** ಅವರು ಬಡವರನ್ನು ಸ್ವಾವಲಂಬಿಗಳಾಗಿ ಮಾಡಬೇಕು. ಕೆಲವೊಮ್ಮೆ ಅದು ಕಡ್ಡಾಯ ಕರ್ತವ್ಯವಾಗಿರುತ್ತದೆ. ಕೆಲವೊಮ್ಮೆ ಅಲ್ಲಾಹನ ಂಪ್ರೀತಿಯ ಬಯಕೆಯಿಂದ ನಿರ್ವಹಿಸಬೇಕಾಗುತ್ತದೆ. ಅದನ್ನು ವಿವಿಧ ರೀತಿಯಿಂದ ರ್ವಹಿಸಬಹುದು-

) ಸಂಬಂಧಿಕರ ಸಂರಕ್ಷಣೆಯ ಹೊಣೆಯನ್ನು ವಹಿಸಿಕೊಳ್ಳುವುದು.

) ನೆರೆಕರೆಯವರೊಂದಿಗಿನ ಕರ್ತವ್ಯಗಳನ್ನು ಪೂರೈಸುವುದು.

i) ಕಡ್ಡಾಯ ಝಕಾತ್- (ಝಕಾತ್ ಸಂಗ್ರಹಿಸಿ ವಿತರಣೆ ಮಾಡುವ ಸರಕಾರವಿಲ್ಲದೆಡೆಗಳಲ್ಲಿ.)

v) ಪ್ರಾಯಶ್ಚಿತ್ತ, ಹರಕೆ, ಮರ್ದಿತನಿಗೆ ನೆರವು, ಬಡವರ ಬೇಡಿಕೆಗಳ ಪೂರೈಕೆ ಇತ್ಯಾದಿ ಝಕಾತೇತರ ಕರ್ತವ್ಯಗಳು.

) ತಾತ್ಕಾಲಿಕ ಯಾ ಶಾಶ್ವತ ದಾನ ಧರ್ಮಗಳು-ವಕ್ಫ್‌ಗಳು ಈ ವರ್ಗಕ್ಕೆ ಸೇರಿವೆ.

3. ಸರಕಾರದ ಕರ್ತವ್ಯಕ್ಕೆ ಸೇರಿದ್ದು: ಮುಸ್ಲಿಮ್-ಮುಸ್ಲಿಮೇತರ ಭೇದವಿಲ್ಲದೆ ರಾಷ್ಟ್ರದ ಆಶ್ರಿತರು ಮತ್ತು ನಿರ್ಗತಿಕರಾದ ಬಡವರ ಸಂರಕ್ಷಣೆಯು ಇಸ್ಲಾಮೀ ರಾಷ್ಟ್ರ ಕಡ್ಡಾಯ ಕರ್ತವ್ಯವಾಗಿದೆ. ಅದರ ಆದಾಯ ಮೂಲಗಳು ಹೀಗಿವೆ:

i. ಝಕಾತ್- ಇದು ಸರಕಾರೀ ಖಜಾನೆಯ ಪ್ರಮುಖ ಮತ್ತು ಸ್ಥಿರ ಆದಾಯ ಮೂಲವಾಗಿ

ii ಇತರ ಆದಾಯಗಳು- ಸಮರಾರ್ಜಿತ ಸಂಪತ್ತು, ಖರಾಜ್, ಜಿಝಿಯ, ಹಕ್ಕು ದಾರರಿಲ್ಲ ವಾರೀಸು ಸೊತ್ತು, ಸಾರ್ವಜನಿಕ ಒಡೆತನ ವಿಲ್ಲದ ಭೂಮಿ, ಇತರ ಸೊತ್ತುಗಳಿಂದ ದೊರೆಯು ಆದಾಯ.

iii ಹೆಚ್ಚುವರಿ ಆದಾಯಗಳು- ಝಕಾತ್ ಮತ್ತಿತರ ಆದಾಯಗಳು ಬಡವರ ಬೇಡಿಕೆಗ ಪೂರೈಕೆಗೆ ಕಡಿಮೆಯಾದರೆ ಶ್ರೀಮಂತರಿಗೆ ರಾಷ್ಟ್ರವು ಹೊರಿಸುವ ಹೆಚ್ಚುವರಿ ಕರಗಳ

12

# ಅನಿವಾರ್ಯ ಉಪಾಧಿ

ಹಿಂದಿನ ಅಧ್ಯಾಯಗಳಲ್ಲಿ, ಬಡತನ ನಿರ್ಮೂಲನ ಮತ್ತು ಬಡ-ದುರ್ಬಲ ವರ್ಗಗಳ ಜೀವನಾವಶ್ಯಕತೆಗಳ ಪೂರೈಕೆಗಾಗಿ ಇಸ್ಲಾಮ್ ಸೂಚಿಸಿರುವ ವಿವಿಧ ಮಾರ್ಗಗಳನ್ನು ಪ್ರತಿಪಾದಿಸಲಾಗಿದೆ. ಆದರೆ, ನಿರ್ದಿಷ್ಟ ಫಲಪ್ರಾಪ್ತಿ ಮತ್ತು ಅವುಗಳ ತೃಪ್ತಿಕರ ಈಡೇರಿಕೆಗೆ ಇಸ್ಲಾಮೀ ಸಮಾಜದ ಅಸ್ತಿತ್ವ ಅನಿವಾರ್ಯವಾಗಿದೆ. ಆರ್ಥಿಕ, ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಇತ್ಯಾದಿ ರಂಗಗಳಲ್ಲಿ ಇಸ್ಲಾಮೀ ವ್ಯವಸ್ಥೆಯನ್ನು ಪಾಲಿಸುವಂತಹ ಸಮಾಜ. ಪಾಶ್ಚಾತ್ಯ ಅಥವಾ ಪೌರ್ವಾತ್ಯ ವಿಚಾರ ಧಾರೆಗಳ ಬುನಾದಿಯಲ್ಲಿರುವ ಇಸ್ಲಾಮೇತರ ವ್ಯವಸ್ಥೆಯೊಂದಿಗೆ ಇಸ್ಲಾಮಿನ ಪ್ರಸ್ತುತ ಆದೇಶಗಳನ್ನು ಜೋಡಿಸಿ ಸಮಸ್ಯೆಯ ಪರಿಹಾರಕ್ಕಾಗಿ ಪ್ರಯತ್ನಿಸುವುದು ನ್ಯಾಯೋಚಿತ ಅಥವಾ ತರ್ಕಬದ್ಧವಲ್ಲ. ಉದಾಹರಣೆಗೆ, ಬಡತನ ವಿರೋಧಿ ಹೋರಾಟದಲ್ಲಿ ಉದ್ಯೋಗವು ಪ್ರಥಮ ಆಯುಧವಾಗಿದೆಯಷ್ಟೆ. ಆರ್ಥಿಕ ಸ್ವಾವಲಂಬನೆಗೆ ದುಡಿಮೆ, ಪರಿಶ್ರಮ ಅಗತ್ಯವಾಗಿದೆ. ಆದರೆ ದೊರೆತ ಉದ್ಯೋಗವು ಒಬ್ಬರಿಗೆ ತಕ್ಕುದಲ್ಲದಿದ್ದರೆ ಅದರಿಂದ ನಿರ್ದಿಷ್ಟ ಫಲ ಸಿದ್ಧಿಸೀತೇ? ಒಂದು ವೇಳೆ ಉದ್ಯೋಗ ಯೋಗ್ಯವಾಗಿದ್ದರೂ ಅದರಿಂದ ಸೂಕ್ತ ಪ್ರತಿಫಲ ದೊರೆಯದಿದ್ದರೆ? ಯೋಗ್ಯ ಉದ್ಯೋಗ ಮತ್ತು ಸೂಕ್ತ ಪ್ರತಿಫಲವಿದ್ದರೂ ತನ್ನ ವಿಶೇಷ ಸಾಧನೆಗಳಿಂದ ಉದ್ಯೋಗದಲ್ಲಿ ಪ್ರಗತಿ ಹೊಂದುವ ಅವಕಾಶವನ್ನು ನಿಷೇಧಿಸಿದರೂ ನಿರ್ದಿಷ್ಟ ಫಲ ಖಂಡಿತ ದೊರೆಯಲಾರದು. ಅಥವಾ ಅಧಿಕಾರಿಗಳ ವಿದ್ವೇಷ, ಪ್ರತಿಕಾರ ಕ್ರಮಗಳಿಂದಾಗಿ ತಾನು ಮೆಚ್ಚಿದ ಉದ್ಯೋಗದಿಂದ ಅನ್ಯಾಯವಾಗಿ ಹಿಂಭಡ್ತಿಗೊಳಿಸಿದರೆ ಅಥವಾ ಸ್ಥಾಪಿತ ಹಿತಾಸಕ್ತಿ ಮತ್ತು ಸರಕಾರಿ ವರಿಷ್ಠರ ಸಂತೃಪ್ತಿಗಾಗಿ ಅಯೋಗ್ಯರಿಗೆ ಆದ್ಯತೆ ನೀಡಿದರೆ ಉದ್ಯೋಗ ಮತ್ತು ದುಡಿಮೆಯಿಂದ ನಿರ್ದಿಷ್ಟ ಫಲ ದೊರೆತೀತೇ?

ದುಡಿಮೆಗೆ ತಕ್ಕ ಪ್ರತಿಫಲವಿದ್ದರೂ ಅನಿವಾರ್ಯವಾಗಿ ಆದಾಯವನ್ನು ಮೀರಿ ಖರ್ಚು ಮಾಡಬೇಕಾಗುವಂತಹ ಸಮಾಜದಲ್ಲಿ ಅದರಿಂದ ಪ್ರಯೋಜನವಾಗಲಾರದು. ಸಮಾಜವು ಆತನ ಮುಂದೆ ತನಗೆ ಅಥವಾ ಸಮಾಜಕ್ಕೆ ಹಿತಕರವಾಗದಂತಹ ಯಾದಿಯನ್ನು ತೆರೆಯುತ್ತದೆ. ವಸ್ತ್ರ ಧಾರಣೆ, ನಿತ್ಯೋಪಯೋಗಿವಸ್ತು ಇತ್ಯಾದಿಗಳಲ್ಲಿ ಅನವಶ್ಯಕ ಆಡಂಬರ, ಕ್ಷಣಿಕ ಮನೋಲ್ಲಾಸಗಳಿಗಾಗಿ ಜೇಬುಗಳನ್ನು ಅಕ್ರಮವಾಗಿ ಸೂರೆಗೈಯುವ ವಿನೋದ ಇತ್ಯಾದಿ ಜೀವನದ ಮೂಲ ಬೇಡಿಕೆಗಳಲ್ಲಿ ಸೇರದ ವಿಷಯಗಳಿಗಾಗಿ ವ್ಯಯವಾಗುವ ಭಾರೀ ಮೊತ್ತವನ್ನು ಕಳೆದ ಬಳಿಕ ಒಬ್ಬರಲ್ಲಿ ಆದಾಯದ ಸ್ವಲ್ಪಂಶ ಮಾತ್ರ ಉಳಿಯಬಹುದು.

ಕಳ್ಳ ದಾಸ್ತಾನು, ಬಡ್ಡಿ ಮತ್ತು ಕಾಳಸಂತೆ ವ್ಯಾಪಕವಾಗಿರುವ ಸಮಾಜದಲ್ಲಿ ಬಾಳುವ

ಓರ್ವನನ್ನು ಜ್ಞಾಪಿಸಿರಿ. ಆತನಿಗೆ ನಿತ್ಯೋಪಯೋಗಿ ವಸ್ತುಗಳು ಕಾಳಸಂತೆಯಲ್ಲಿ ಮಾ
ಸಿಗುತ್ತದೆ. ಪ್ರತಿಯೊಂದಕ್ಕೂ ದುಪ್ಪಟ್ಟು ಬೆಲೆ ತೆರಬೇಕು. ಲಂಚ, ಭಕ್ಷೀಸು ನೀಡದೆ ಯಾ
ಉದ್ಯೋಗವನ್ನೂ ಪಡೆಯಲಾಗುವುದಿಲ್ಲ. ಇನ್ನೊಬ್ಬಾತನು ಅಪಘಾತದಿಂದ ಅಂಗವಿಕಲನಾ
ಕೆಲಸ ಮಾಡಲು ಅಶಕ್ತನಾಗಿದ್ದಾನೆ ಅಥವಾ ಆರ್ಥಿಕ ದುಃಸ್ಥಿತಿಯಿಂದ ವ್ಯಾಪಾರವನ
ಮುಂದುವರಿಸಲಾಗುವುದಿಲ್ಲ. ಆತ ಸಾಲಗಾರನಾಗುತ್ತಾನೆ. ಈ ಮಂದಿಯ ಅವ
ಏನಾಗಬಹುದು. ಅವರ ಬಗ್ಗೆ ಸಮಾಜದ ಧೋರಣೆ ಮತ್ತು ಮನೋಭಾವ ಹೇಗಿರಬಹುದು

ಈ ಉದಾಹರಣೆಗಳಿಂದ ಇಸ್ಲಾಮೇತರ ರಾಷ್ಟ್ರದಲ್ಲಿ ವ್ಯಕ್ತಿಯ ಆದಾಯದಿಂ
ಇಸ್ಲಾಮ್ ಬಯಸುವ ರೀತಿಯಲ್ಲಿರುವ ಶುದ್ಧ ಆಹಾರ ಸಂಪಾದನೆ ಅಸಾಧ್ಯವೆಂಬ ವಾಸ್ತವಿಕ
ವ್ಯಕ್ತವಾಗುತ್ತದೆ. ಇಸ್ಲಾಮಿ ವ್ಯವಸ್ಥೆಯಲ್ಲಿ ಉದ್ಯೋಗ ಮತ್ತು ಉದ್ಯೋಗಿಯನ್ನು ಹೇ
ಇರಿಸಲಾಗಿದೆಯೆಂಬುದನ್ನು ಪರಿಶೀಲಿಸೋಣ-

1. ಉದ್ಯೋಗಿಯ ದುಡಿಮೆಯ ಶಕ್ತಿಯನ್ನು ಗರಿಷ್ಠ ಬಳಸಲಿಕ್ಕಾಗಿ ಪ್ರತಿಯೊಬ್ಬ
ದುಡಿಮೆಯನ್ನು ಕ್ರಮಬದ್ಧಗೊಳಿಸಿ ಉದ್ಯೋಗಕ್ಕೆ ಅವಶ್ಯಕವಾದ ಸೌಲಭ್ಯಗಳನ್ನು ಇಸ್ಲಾಮಿ
ಸರಕಾರವು ಮುತುವರ್ಜಿಯಿಂದ ಒದಗಿಸುವುದು.

2. ಯಾವುದೇ ಉದ್ಯೋಗದಲ್ಲಿ ನೈಪುಣ್ಯ ಮತ್ತು ಅನುಭವವಿರುವ ಉದ್ಯೋಗಿಗಳಿ
ಅವರ ಉದ್ಯೋಗವನ್ನು ಕಾರ್ಯದಕ್ಷಗೊಳಿಸಲಿಕ್ಕೆ ಬೇಕಾದ ಸೌಲಭ್ಯಗಳನ್ನು ಇಸ್ಲಾಮಿ
ಸರಕಾರ ಒದಗಿಸುವುದು.

3. ಕಡಿಮೆ ಶ್ರಮದಿಂದ ಹೆಚ್ಚು ಉತ್ಪಾದನೆಗೆ ಸಹಾಯಕವಾದ ಉದ್ಯೋಗ, ಸಲಕರ
ಮತ್ತು ಪಯಣ ಸಾಮಗ್ರಿಗಳನ್ನು ಉದ್ಯೋಗಿಗಳಿಗೆ ನೀಡುವುದು.

4. ದುಡಿಮೆಯ ಭಾರಕ್ಕೆ ಸರಿಹೊಂದುವ ಮತ್ತು ಜೀವನಾವಶ್ಯಕತೆಗಳ ನಿರ್ವಹಣೆ
ಬೇಕಾದ ವೇತನ- ಅದೆಷ್ಟೇ ಅಧಿಕವಿದ್ದರೂ - ಉದ್ಯೋಗಿಗೆ ದೊರೆಯುವುದು. ಅದನ
ಸ್ವಾಯತ್ತಗೊಳಿಸಿ ವಾರೀಸುದಾರರಿಗೆ ಒಪ್ಪಿಸುವ ಅನುಮತಿಯನ್ನೂ ನೀಡುತ್ತದೆ.

5. ದುಡಿಮೆಯ ಪ್ರತಿಫಲ, ವ್ಯಾಪಾರದ ಲಾಭ ಅಥವಾ ಕೃಷಿ ಉತ್ಪನ್ನಗಳು. ಓರ್ವ
ಕುಟುಂಬದ ಜೀವನಾವಶ್ಯಕತೆಗಳಿಗೆ ಸಾಲದಿದ್ದರೆ ಅವಶ್ಯಕ ಮೊತ್ತವನ್ನು ಸಾರ್ವಜನಿ
ಬೊಕ್ಕಸದಿಂದ ಅಪೇಕ್ಷಿಸುವ ಹಕ್ಕು ಪ್ರತಿಯೊಬ್ಬ ಉದ್ಯೋಗಿಗೂ ಇರುತ್ತದೆ.

6. ಯಾವುದಾದರೂ ದುರಂತದಿಂದ ನಷ್ಟವುಂಟಾದವರಿಗೆ ಝಕಾತಿನಲ್ಲಿ ಸಾಲಗಾರರಿಗಿರು
ಪಾಲಿನಿಂದ ಅಥವಾ ರಾಷ್ಟ್ರದ ಇತರ ನಿಧಿಗಳಿಂದ ಪರಿಹಾರ ಹಣ ಸ್ವೀಕರಿಸು
ಅರ್ಹತೆಯಿರುತ್ತದೆ.

7. ಮೇಲಿನ ಈ ಎಲ್ಲ ಸೌಲಭ್ಯ ಮತ್ತು ಅನುಕೂಲತೆಗಳನ್ನು ಮದ್ಯ ಮತ

ಕಾಮುಕಿಯರಿಲ್ಲದ, ಅನಾವಶ್ಯಕ ಆಡಂಬರ ಮತ್ತು ಐಷಾರಾಮಗಳಿಗೆ ಅನುಮತಿಸದ, ಬೇಸಾಯ ಮತ್ತು ಮಾನವ ಶಕ್ತಿಯನ್ನು ನಾಶ ಪಡಿಸುವ ವಿನಾಶಾತ್ಮಕ ಚಟುವಟಿಕೆಗಳನ್ನು ಕಟುವಾಗಿ ವಿರೋಧಿಸಿರುವ ಆರೋಗ್ಯವಂತ ಇಸ್ಲಾಮಿ ಸಮಾಜದಲ್ಲಿ ನೀಡಲಾಗುತ್ತದೆ.

ಆದರೆ ಇತರ ರಂಗಗಳಲ್ಲಿ ಇಸ್ಲಾಮನ್ನು ತೊರೆಯುವ ಆಧುನಿಕ ರಾಷ್ಟ್ರವು ಇಸ್ಲಾಮಿನ ಝಕಾತ್ ವ್ಯವಸ್ಥೆಯನ್ನು ಮಾತ್ರ ಜ್ಯಾರಿಗೊಳಿಸಿದರೆ ಏನಾದೀತೆಂಬುದನ್ನು ಪರಿಶೀಲಿಸೋಣ.

1. ಬಡತನ ನಿವಾರಣೆಗೆ ತೀರಾ ಅಪರ್ಯಾಪ್ತವಾಗಿರುವ ತುಚ್ಛ ಮೊತ್ತವನ್ನು ಮಾತ್ರ ಈ ವ್ಯವಸ್ಥೆಯಿಂದ ಸಂಗ್ರಹಿಸಬಹುದಾಗಿದೆ. ಅದಕ್ಕೆ ಹಲವು ಕಾರಣಗಳಿವೆ-

i) ಜನರು ಈ ಸರಕಾರಕ್ಕೆ ಝಕಾತ್ ನೀಡುವ ಒಲವು ಹೊಂದಿರಲಾರರು. ಯಾಕೆಂದರೆ, ಇತರ ಹಲವು ತೆರಿಗೆಗಳ ಹೊರೆಯಿಂದ ಅವರು ತತ್ತರಿಸುತ್ತಿರಬಹುದು. ಅದಲ್ಲದೇ, ದೇವೇತರ ಕಾನೂನು ವ್ಯವಸ್ಥೆಗಳನ್ನು ಪಾಲಿಸುವ ಈ ಸರಕಾರದ ಬಗ್ಗೆ ಅವರಿಗೆ ಭರವಸೆಯಿರಲಾರದು. ಇತರ ತೆರಿಗೆಗಳಂತೆಯೇ ಝಕಾತನ್ನು ಇಸ್ಲಾಮಿನ ಆದೇಶ ಪ್ರಕಾರ ವ್ಯಯಿಸದೆ ಅನಾವಶ್ಯಕ ಮತ್ತು ಅನುಚಿತ ರೀತಿಯಲ್ಲಿ ವ್ಯಯವಾದೀತೆಂದು ಅವರು ಶಂಕಿಸುತ್ತಾರೆ. ಎಲ್ಲಕ್ಕಿಂತ ಮಿಗಿಲಾಗಿ , ಪರಕೀಯ ಮತ್ತು ಇಸ್ಲಾಮೇತರ ವಿಚಾರಧಾರೆಗಳ ಆಕ್ರಮಣದಿಂದ ಜನರ ಕುಂದಿದ ಇಸ್ಲಾಮಿ ಸ್ಫೂರ್ತಿ ಮತ್ತು ದುರ್ಬಲಗೊಂಡ ಧಾರ್ಮಿಕ ವಿಶ್ವಾಸವು ಝಕಾತ್ ನೀಡದಿರಲು ಪ್ರೇರಕವಾಗುತ್ತದೆ.

ii) ಝಕಾತ್ ನೀಡಿಕೆ ಕಡ್ಡಾಯವಾಗುವಷ್ಟು ಸಂಪತ್ತಿರುವವರು ಇಂದಿನ ಮುಸ್ಲಿಮ್ ಸಮಾಜದಲ್ಲಿ ತೀರಾ ವಿರಳ. ಇದು ಆಧುನಿಕ ಕಾಲದಲ್ಲಿ ಪ್ರಭಾವ ಬೀರಿರುವ ಅನ್ಯ ಮತ್ತು ಇಸ್ಲಾಮೇತರವಾಗಿರುವ ಜೀವನ ವಿಧಾನವನ್ನು ಮುಸ್ಲಿಮರು ಅಂಗೀಕರಿಸಿರುವುದರ ಪರಿಣಾಮವಾಗಿದೆ. ದೌರ್ಭಾಗ್ಯವಶಾತ್, ಮುಸ್ಲಿಮರು ಚಾಚೂತಪ್ಪದೆ ಆ ಜೀವನ ವಿಧಾನವನ್ನು ಅನುಸರಿಸುತ್ತಿದ್ದಾರೆ. ಅವರು ಒಂದು ಉಡದ ಬಿಲಕ್ಕೆ ಪ್ರವೇಶಿಸಿದರೆ ಮುಸ್ಲಿಮರೂ ಅವರ ಜತೆಯಲ್ಲಿ ಅದರೊಳಗೆ ಪ್ರವೇಶಿಸುವಂತಹ ಪರಿಸ್ಥಿತಿಯಿದೆ. ಆ ಜೀವನ ವಿಧಾನದ ಬುನಾದಿಯಾದರೋ, ಕೇವಲ ಡಾಂಭಿಕತೆ, ದುಂದುವೆಚ್ಚ, ವಿನೋದ ಮತ್ತು ಲೌಕಿಕ ಸುಖಭೋಗವಾಗಿದೆ.

2. ಝಕಾತ್‌ನ ಬಾಬ್ತಿನಲ್ಲಿ ಸಂಗ್ರಹವಾಗುವ ಅಲ್ಪ ಮೊತ್ತದ ಬಹುವಂಶವು ಅದರ ಸಂಗ್ರಹ-ವಿತರಣೆಯ ಕೆಲಸ ಮಾಡುವ ಅಧಿಕಾರಿಗಳಿಗೂ ನಿರ್ವಾಹಕರಿಗೂ ವ್ಯಯವಾಗುತ್ತದೆ. ಸರಕಾರದ ಕಾರ್ಯನಿರ್ವಹಣೆಯ ಶೈಲಿಯು ಆ ಪ್ರಕಾರವಿದೆಯಷ್ಟೆ. ಕಾರ್ಯಕ್ರಮಗಳ ಬಾಹ್ಯಾಡಂಬರ ಮತ್ತು ಖ್ಯಾತಿಯೇ ಸರಕಾರಕ್ಕೆ ಮುಖ್ಯವಾಗಿದೆ. ಆದ್ದರಿಂದ ಝಕಾತ್ ಬಡವರ ಕೈಗಳಿಗೆ ತಲಪುವುದಕ್ಕಿಂತ ಮುಂಚೆಯೇ ಬಹುವಂಶ ಖಾಲಿಯಾಗುತ್ತದೆ.

3. ವಿತರಣಾ ರಂಗದಲ್ಲಿ ಅನ್ಯಾಯ, ಅರಾಜಕತೆ ತಾಂಡವವಾಡುತ್ತದೆ. ಅರ್ಹರಿಗೆ ಝಕಾತ್ ದೊರೆಯದೆ ಅನರ್ಹರಿಗೆ ಲಭ್ಯವಾಗುತ್ತದೆ. ಇಸ್ಲಾಮೀ ಆತ್ಮಸಾಕ್ಷಿಯ ಕೊರತೆ ಮತ್ತು ರೋಗಗ್ರಸ್ತ ಹೃದಯಗಳೇ ಅದಕ್ಕೆ ಕಾರಣವಾಗಿದೆ. ಇದು ಝಕಾತ್‌ನ ವಿತರಣಾ ವಿಭಾಗದ ಹೊರತಾಗಿ ಇತರ ಬಹುಮಂದಿಯನ್ನು ಪೀಡಿಸಬಹುದು.

4. ಈ ಎಲ್ಲ ಪರಿಣಾಮಗಳಿಂದಾಗಿ ಪ್ರಸ್ತುತ ವ್ಯವಸ್ಥೆಯು ಬಡತನ ನಿರ್ಮೂಲನ ಕಾರ್ಯದಲ್ಲಿ ವಿಫಲವಾಗಬಹುದು.

ಈ ವ್ಯವಸ್ಥೆಯ ಅನುಕೂಲತೆಗಳು ಬಹಳ ಕಡಿಮೆ ಮಂದಿಗೆ ಲಭ್ಯವಾಗುವುದರಿಂದ ಅದು ಲಭಿಸದ ಬಹು ಮಂದಿಯಿಂದ ದೂರುಗಳು ಕೇಳಿಬರಬಹುದು. ಅದರಿಂದಾಗಿ ನೈಜ ಝಕಾತ್ ವ್ಯವಸ್ಥೆಯ ಬಗ್ಗೆ ದ್ವೇಷ ಮತ್ತು ಜಿಗುಪ್ಸೆ ಮೂಡಬಹುದು. ಅಂತಿಮವಾಗಿ ಇಸ್ಲಾಮೀ ಜೀವನ ವ್ಯವಸ್ಥೆಯ ಬಗ್ಗೆಯೇ ಅಸಂತೃಪ್ತಿ ವ್ಯಾಪಕವಾಗಬಹುದು. ಇದು ಶುದ್ಧ ಇಸ್ಲಾಮೀ ವ್ಯವಸ್ಥೆಯಲ್ಲಿಯೂ ಇಸ್ಲಾಮೀ ಕಾನೂನುಗಳಿಂದ ತೇಪೆ ಹಾಕಿದ ಇಸ್ಲಾಮೇತರ ವ್ಯವಸ್ಥೆಯಲ್ಲಿಯೂ ಜಾರಿಗೊಳಿಸಲಾಗುವ ಇಸ್ಲಾಮೀ ಸಿದ್ಧಾಂತದ ವಿಭಿನ್ನ ಪರಿಣಾಮಗಳಾಗಿವೆ. ಬಡತನ ನಿರ್ಮೂಲನಕ್ಕಾಗಿ ಇಸ್ಲಾಮ್ ಆದೇಶಿಸಿರುವ ವ್ಯವಸ್ಥೆಗಳ ತೇಪೆ ಹಾಕಿ ಬಡತನವನ್ನು ನಿರ್ಮೂಲನಗೊಳಿಸಲು ಇಸ್ಲಾಮೇತರ ವ್ಯವಸ್ಥೆಗೆ ಸಾಧ್ಯವಿಲ್ಲವೆಂಬುದು ವ್ಯಕ್ತ.

ಇದು ಇಸ್ಲಾಮಿನ ಅವಿಭಾಜ್ಯ ಏಕತೆಯನ್ನು ಸೂಚಿಸುತ್ತದೆ. ಆರ್ಥಿಕ ರಂಗದಲ್ಲಿ ಇಸ್ಲಾಮ್, ಖಾಸಗಿ ಒಡೆತನವನ್ನು ಅನುಮತಿಸುತ್ತದೆ. ಅದೇ ವೇಳೆ ಕೆಲವು ನಿಯಂತ್ರಣ ಮತ್ತು ಉಪಾಧಿಗಳಿಂದ ಅದರ ದುರುಪಯೋಗವನ್ನು ತಡೆಯುತ್ತದೆ. ಅದರೊಂದಿಗೆ ಸೊತ್ತಿನಲ್ಲಿ ವಾರೀಸು ಹಕ್ಕು ನೀಡುತ್ತದೆ. ಆದ್ದರಿಂದ ಸ್ವಸಂತಾನಗಳ ಭವಿಷ್ಯದ ಬಗ್ಗೆ ಯಾರೂ ವ್ಯಾಕುಲ ಪಡಬೇಕಾಗಿಲ್ಲ. ಈ ಕಾನೂನುಗಳು ಪ್ರತಿಯೊಬ್ಬರ ಸ್ವಂತ ವ್ಯಕ್ತಿತ್ವದ ವಿಕಾಸ ಮತ್ತು ಸಾಮರ್ಥ್ಯಗಳ ಬಳಕೆಗೆ ಅವಕಾಶ ನೀಡುತ್ತದೆ. ಅವುಗಳ ಫಲವನ್ನು ಸ್ವಯಂ ಸವಿದು ಇತರರಿಗೆ ಸವಿಯುವ ಅವಕಾಶ ಒದಗಿಸುತ್ತದೆ. ಇಂತಹ ಪರಿಸ್ಥಿತಿಯಲ್ಲಿ ಹಣವು ಸಚ್ಚಾರಿತ್ರ್ಯವಂತರ ಹಸ್ತಗಳಲ್ಲಿ ಉಪಯುಕ್ತ ಸಾಧನವಾಗಿ ಮಾರ್ಪಡುತ್ತದೆ. ಅದು ಸಮಾಜದ ಐಶ್ವರ್ಯವನ್ನು ವೃದ್ಧಿಸುವ ಅವಕಾಶವನ್ನು ಒದಗಿಸಿ ಬಡತನದಿಂದ ಬಳಲುತ್ತಿರುವವರಿಗೆ ಸಾಂತ್ವನ ನೀಡುತ್ತದೆ.

ಇಸ್ಲಾಮ್ ಖಾಸಗೀ ಒಡೆತನ ಹಕ್ಕನ್ನು ಅನುಮತಿಸಿದ್ದರೂ ಬಂಡವಾಳ ಶಾಹಿಯಂತೆ, ಸಮಾಜದ ಹಿತವನ್ನು ಕಡೆಗಣಿಸಲಿಲ್ಲ. ಅದು ವ್ಯಕ್ತಿ ಮತ್ತು ಸಮಾಜದ ಮಧ್ಯೆ ಸಂತುಲನೆಯನ್ನು ಕಾಯ್ದುಕೊಂಡಿತು. ವ್ಯಕ್ತಿ ಮತ್ತು ಸಮಾಜವು ಪರಸ್ಪರ ಕರ್ತವ್ಯಗಳನ್ನು ಈಡೇರಿಸಬೇಕೆಂದು ನಿಶ್ಚಯಿಸಿತು. ಪ್ರತಿಯೊಬ್ಬರಿಗೂ ಇನ್ನೊಬ್ಬರಿಂದ ದೊರೆಯಬೇಕಾದ ಹಕ್ಕುಗಳನ್ನು ಉಪಲಬ್ಧಗೊಳಿಸುವ ಏರ್ಪಾಡುಗಳನ್ನು ಮಾಡಿತು.

ಇಸ್ಲಾಮೀ ವ್ಯವಸ್ಥೆಯಲ್ಲಿ ಸಂಪತ್ತು ಅಲ್ಲಾಹನಿಗೆ ಸೇರಿದೆ. ಮಾನವನು, ಅಲ್ಲಾಹನ ಸಂಪತ್ತನ್ನು ನಂಬಿಕೆಯಿಂದ ವಹಿಸಿಕೊಡಲಾದ ವಕೀಲ್ ಆಗಿದ್ದಾನೆ. ಮಾನವನಿಗೆ ಅದನ್ನು ಮನಬಂದಂತೆ ವ್ಯಯಿಸುವ ಸ್ವಾತಂತ್ರ್ಯವಿಲ್ಲ. ಹಣದ ನೈಜ ಒಡೆಯನ ಆದೇಶ ಪ್ರಕಾರವೇ ಆತನು ವರ್ತಿಸಬೇಕು. ಶ್ರೀಮಂತ ಮತ್ತು ಬಡವರ ಪ್ರಭುವಾದ ಅಲ್ಲಾಹನೇ ಅದರ ನೈಜ ಒಡೆಯ. ಅಲ್ಲಾಹನಿಗೆ ತನ್ನ ಎಲ್ಲ ಸೃಷ್ಟಿಗಳೊಡನೆಯೂ ಏಕ ಪ್ರಕಾರ ಕರುಣೆ ತೋರಿಸಬೇಕೆಂಬ ನಿರ್ಬಂಧವಿದೆ. ಆದ್ದರಿಂದ ಸಂಪತ್ತಿನ ಸಂರಕ್ಷಣೆ, ವಿತರಣೆ, ವಿನಿಮಯ, ಸಂಪಾದನೆಗಳಿಗೆ ಅಲ್ಲಾಹನು ಆಜ್ಞಾಪಿಸಿರುವ ಕಾನೂನು ವ್ಯವಸ್ಥೆಗಳಲ್ಲಿ, ಬಡವ ಹಾಗೂ ಶ್ರೀಮಂತರೆಲ್ಲರ ಕ್ಷೇಮಾಭಿವೃದ್ಧಿಯನ್ನು ಪರಿಗಣಿಸಲಾಗಿದೆ.

ಇಸ್ಲಾಮ್, ಹಣದ ದುರ್ವ್ಯಯ ಮತ್ತು ದುಂದುಗಾರಿಕೆಯನ್ನು ನಿಷೇಧಿಸಿದೆ. ಅದು ಹಣವನ್ನು ದುರುಪಯೋಗಿಸುವವರನ್ನು ಪಿಶಾಚಿಯ ಸಂಗಡಿಗರೆಂದು ವರ್ಣಿಸಿದೆ. ಈ ನಿಷೇಧವು ಕೇವಲ ಕೆಲವು ಆದೇಶಗಳಿಗೆ ಸೀಮಿತವಾಗಿಲ್ಲ. ಹಣದ ದುರುಪಯೋಗವಾಗದಿರಲಿಕ್ಕಾಗಿ ತಿಳಿಗೇಡಿಗಳ ವಶ ನೀಡಬಾರದೆಂದೂ ಅದು ತಿಳಿಸಿದೆ.

"ಅಲ್ಲಾಹನು ನಿಮಗೆ ಜೀವನ ಸಾಧನವಾಗಿ ನಿಶ್ಚಯಿಸಿರುವ ಸಂಪತ್ತನ್ನು ತಿಳಿಗೇಡಿಗಳ ವಶಕ್ಕೆ ಒಪ್ಪಿಸಬೇಡಿರಿ." (ಅನ್ನಿಸಾ:5)

ಬಹುಮಂದಿಯನ್ನು ನಿತ್ಯಸಂಕಷ್ಟ ಮತ್ತು ದುಃಖಸಾಗರಕ್ಕೆ ದೂಡಿ ಕೆಲವಾರು ಮಂದಿ ಸುಖವೈಭೋಗದಲ್ಲಿ ಮೆರೆದಾಡಲು ಇಸ್ಲಾಮ್ ಅನುಮತಿಸುವುದಿಲ್ಲ. ಜನ ಜೀವನದಲ್ಲಿ ಪ್ರಕಟವಾಗುವ ಲೌಕಿಕ ವ್ಯಾಮೋಹ ಮತ್ತು ದುಂದುಗಾರಿಕೆಯನ್ನು ಸತ್ಯಪ್ರಚಾರಕ್ಕೆ ಆತಂಕವೊಡ್ಡಿ ಪ್ರವಾದಿಯವರನ್ನು ಧಿಕ್ಕರಿಸುವವರ ಸಂಕೇತವೆಂದು ಕುರ್‌ಆನ್ ಪರಿಗಣಿಸಿದೆ. ಯಾವುದೇ ಸಮುದಾಯದ ಶ್ರೀಮಂತರು, ದುಂದು ವೆಚ್ಚ ಮತ್ತು ಸುಖಾಡಂಬರಗಳಲ್ಲಿ ತನ್ಮಯವಾಗುವ ಸ್ಥಿತಿಯು, ಆ ಸಮುದಾಯದ ಅವನತಿಯ ಲಕ್ಷಣವೆಂದು ಕುರ್‌ಆನ್ ಹೇಳಿದೆ:

"ನಾವು ಒಂದು ನಾಡನ್ನು ನಾಶ ಗೊಳಿಸಲಿಚ್ಛಿಸಿದಾಗ ಅದರ ಸ್ಥಿತಿವಂತರಿಗೆ ಅಪ್ಪಣೆ ಕೊಡುತ್ತೇವೆ ಮತ್ತು ಅವರು ಅದರಲ್ಲಿ ಆಜ್ಞೋಲ್ಲಂಘನೆ ಮಾಡ ತೊಡಗುತ್ತಾರೆ. ಆಗ ಯಾತನೆಯ ತೀರ್ಮಾನವು ಆ ನಾಡಿಗೆ ಅನ್ವಯವಾಗಿ ಬಿಡುತ್ತದೆ ಮತ್ತು ನಾವು ಅದನ್ನು ಸಂಪೂರ್ಣ ನಾಶಮಾಡಿ ಬಿಡುತ್ತೇವೆ." (ಬನೀ ಇಸ್ರಾಈಲ್ : 16)

ಬೆಳ್ಳಿ-ಬಂಗಾರ ಇತ್ಯಾದಿ ಅಮೂಲ್ಯ ಲೋಹಗಳಿಂದ ನಿರ್ಮಿಸಿದ ಪಾತ್ರೆಗಳು, ಪ್ರತಿಮೆಗಳು ಮತ್ತು ಬೊಂಬೆ ಇತ್ಯಾದಿಗಳ ಬಳಕೆಯನ್ನು ಇಸ್ಲಾಮ್ ನಿಷೇಧಿಸಿದೆ. ಅವು ಡಾಂಭಿಕ ಶ್ರೀಮಂತರ ಮನೆಗಳ ಆಡಂಬರದ ವಸ್ತುಗಳಾಗಿವೆ. ಪುರುಷರು ಚಿನ್ನ ಮತ್ತು ರೇಷ್ಮೆ ಬಳಸುವುದನ್ನೂ ಅದು ನಿಷೇಧಿಸಿದೆ.

ಹಣ ಸಂಪಾದನೆಯಲ್ಲಿಯೂ ಇಸ್ಲಾಮ್ ನಿಯಂತ್ರಣ ಹೇರಿದೆ. ಕಳ್ಳ ದಾಸ್ತಾನು ಮತ್ತು ಬಡ್ಡಿಯನ್ನು ಕಟುವಾಗಿ ನಿಷೇಧಿಸಿದೆ. ಅವು ಬಂಡವಾಳಶಾಹೀ ಗುತ್ತಿಗೆಯ ಮೂಲಾಧಾರಗಳಾಗಿವೆ.

"ಯಾರಾದರೂ ಆಹಾರ ವಸ್ತುಗಳನ್ನು 40 ದಿನ ಬಚ್ಚಿಟ್ಟರೆ ಅಲ್ಲಾಹನಿಗೆ ಆತನೊಂದಿಗೆ ಅಥವಾ ಆತನಿಗೆ ಅಲ್ಲಾಹನೊಂದಿಗೆ ಯಾವುದೇ ಹೊಣೆ ಉಳಿಯಲಾರದು."

(ಅಹ್ಮದ್, ಹಾಕಿಮ್)

ಬಡ್ಡಿ ಪಡೆಯುವವನು ಪಶ್ಚಾತ್ತಾಪ ಪಟ್ಟು ತೊರೆಯದಿದ್ದರೆ ಅಲ್ಲಾಹ್ ಮತ್ತು ಪ್ರವಾದಿಯವರು ಆತನ ವಿರುದ್ಧ ಯುದ್ಧ ಸಾರುವರೆಂದು ಕುರ್‌ಆನ್ ಸಾರಿದೆ. ಪಶ್ಚಾತ್ತಾಪ ಪಟ್ಟು ತೊರೆದರೆ ಅವರಿಗೆ ಮೂಲ ಧನ ದೊರೆಯುತ್ತದೆ. ಅವರು ಅನ್ಯಾಯವೆಸಗ ಬಾರದೆಂಬಂತೆಯೇ ಅವರು ಅನ್ಯಾಯಕ್ಕೆ ಗುರಿಯಾಗಬಾರದೆಂದೂ ಕುರ್‌ಆನ್ ಮುಂದೆ ಹೇಳಿದೆ. ಬಡ್ಡಿ ಮತ್ತು ಕಳ್ಳ ದಾಸ್ತಾನುಗಳು ಶ್ರೀಮಂತರಿಗೆ ಬಡವರ ರಕ್ತ ಹೀರುವ ವ್ಯವಸ್ಥೆಗಳಾಗಿವೆ ಎಂಬುದರಲ್ಲಿ ಸಂದೇಹವಿಲ್ಲ. ಅದರಿಂದಾಗಿ ಶ್ರೀಮಂತರು ಮತ್ತಷ್ಟು ಶ್ರೀಮಂತರಾಗಿ ಬಡವರು ಮತ್ತಷ್ಟು ಬಡವರಾಗುತ್ತಾರೆ.

ಹಣವನ್ನು ಮಾರುಕಟ್ಟೆಯಲ್ಲಿ ಚಲಾವಣೆ ಮಾಡದೆ ಶೇಖರಿಸುವುದನ್ನು ಇಸ್ಲಾಮ್ ಬಲವಾಗಿ ವಿರೋಧಿಸಿದೆ. ಅದಕ್ಕಾಗಿ ಬಹಳ ಸೂಕ್ಷ್ಮ ಮತ್ತು ನಿಖರವಾದ ನಿಯಮಗಳನ್ನು ಅದು ರೂಪಿಸಿದೆ. ಬಂಡವಾಳವನ್ನು ವೃದ್ಧಿಸುವ ವ್ಯವಸ್ಥೆ ಮಾಡಿದರೂ ಮಾಡದಿದ್ದರೂ ಪ್ರತಿವರ್ಷ ಝಕಾತ್ ನೀಡಬೇಕೆಂದು ಇಸ್ಲಾಮ್ ಆಜ್ಞಾಪಿಸಿದೆ. ಅದರಿಂದಾಗಿ ಜನರು ಹಣವನ್ನು ಶೇಖರಿಸಿಡದೆ ಮಾರುಕಟ್ಟೆಯಲ್ಲಿ ತೊಡಗಿಸಲು ನಿರ್ಬಂಧಿತರಾಗುತ್ತಾರೆ. ಇಲ್ಲದಿದ್ದರೆ ಪ್ರತಿವರ್ಷ ಝಕಾತ್ ನೀಡುವ ಮೊತ್ತವು ಬಂಡವಾಳದಿಂದ ಕಡಿಮೆಯಾಗಿರುತ್ತದೆ.

ಕ್ರಯ ವಿಕ್ರಯದಲ್ಲಿ ನ್ಯಾಯ ಮತ್ತು ಸತ್ಯ ಪಾಲಿಸಬೇಕೆಂದು ಇಸ್ಲಾಮ್ ಆಜ್ಞಾಪಿಸಿದೆ. ಅದಕ್ಕಾಗಿ ಬಹಳ ಸೂಕ್ಷ್ಮ ಮತ್ತು ಸ್ಪಷ್ಟ ನಿಯಮಗಳನ್ನು ಅದು ರೂಪಿಸಿದೆ. ಕಾರ್ಮಿಕ-ಮಾಲಕ, ಒಡೆಯ- ಬಾಡಿಗೆದಾರ, ಗ್ರಾಹಕ- ಮಾರಾಟಗಾರ, ಉತ್ಪಾದಕ-ಬಳಕೆದಾರರು ಪರಸ್ಪರ ಪಾಲಿಸಬೇಕಾದ ಶಿಷ್ಟಾಚಾರ ಮತ್ತು ನಿಬಂಧನೆಗಳನ್ನು ಇಸ್ಲಾಮ್ ಬಹಳ ನ್ಯಾಯ ಪ್ರಜ್ಞೆ ಮತ್ತು ತತ್ತ್ವ ದೀಕ್ಷೆಯಿಂದ ನಿರ್ಣಯಿಸಿದೆ.

ಆರ್ಥಿಕ ರಂಗದಲ್ಲಿ ಇಸ್ಲಾಮ್ ವಿಧಿಸಿರುವ ಕಾನೂನು ವ್ಯವಸ್ಥೆಗಳು ಸಮಾಜದ ಉತ್ಪಾದನಾ ಕ್ಷಮತೆಯನ್ನು ಹೆಚ್ಚಿಸುವ ಗುರಿಯನ್ನು ಹೊಂದಿದೆ. ಅದೇ ವೇಳೆ ಸಂಪತ್ತಿನ ದುರುಪಯೋಗ ಮತ್ತು ದುರ್ವ್ಯಯವನ್ನು ಅದು ತಡೆಯ ಬಯಸುತ್ತದೆ. ಮದ್ಯ ಮತ್ತು ಇತರ ಮಾದಕ ವಸ್ತುಗಳ ಬಳಕೆ, ನಿಷಿದ್ಧ ವಿನೋದಗಳು, ಅನೈತಿಕ ಕೃತ್ಯಗಳು ಇತ್ಯಾದಿಗಳನ್ನು ಕಠಿಣವಾಗಿ ನಿಷೇಧಿಸಿ ಮಾನವ ಶಕ್ತಿ, ಆರೋಗ್ಯ ಮತ್ತು ಸಂಪತ್ತನ್ನು ಅನಗತ್ಯವಾಗಿ

ನಾಶಗೊಳಿಸುವ ಅವಕಾಶಗಳನ್ನು ಅದು ಅಳಿಸಿ ಬಿಟ್ಟಿದೆ. ಅಲ್ಲದೇ ಇಸ್ಲಾಮೀ ವಿಶ್ವಾಸಗಳ ಆಧಾರದಲ್ಲಿ ಸುಸಂಸ್ಕೃತಗೊಂಡ ಮಾನವ ಮನಸ್ಸುಗಳು ಅಂತಹ ಸಮಾಜ ನಿರ್ಮಾಣಕ್ಕೆ ಪೂರಕವಾಗುತ್ತದೆ. ಹೀಗೆ ಆರೋಗ್ಯ ಮತ್ತು ಶಕ್ತಿ ಸಂಪಾದಿಸಿ ಸ್ವಂತ ಕೆಲಸಗಳನ್ನು ದಕ್ಷತೆಯಿಂದ ನಿರ್ವಹಿಸಿ ಉತ್ಪಾದನೆ ಮತ್ತು ಸಂಪತ್ತನ್ನು ಹೆಚ್ಚಿಸಲು ಸಾಧ್ಯವಾಗುತ್ತದೆ. ಒಂದು ವಿಭಾಗವು ಮುಂಜಾವದಲ್ಲಿ ಬೇಗನೆ ಎದ್ದು ಅಂಗಶುದ್ಧಿ ಮಾಡಿ ಸರ್ವ ಶಕ್ತನೊಡನೆ ಪ್ರಾರ್ಥಿಸಿ ಶುದ್ಧ ಮನಸ್ಸು ಮತ್ತು ಸುಶಕ್ತ ದೇಹದಿಂದ ಉತ್ಸಾಹ ಭರಿತವಾಗಿ ಲವಲವಿಕೆಯಿಂದ ಕೆಲಸದಲ್ಲಿ ನಿರತವಾಗುತ್ತದೆ. ಇನ್ನೊಂದು ವಿಭಾವು ನಡು ರಾತ್ರಿಯ ತನಕ ಲೀಲಾ ವಿನೋದ ಮತ್ತು ಅಕೃತ್ಯಗಳಲ್ಲಿ ಸಮಯ ಕಳೆದು ರಾತ್ರಿಯ ಅಂತ್ಯ ಯಾಮದಲ್ಲಿ ಮಲಗಿ ಸೂರ್ಯೋದಯವನ್ನೇ ಅರಿತಿಲ್ಲದ ರೀತಿಯಲ್ಲಿ ನಿದ್ರಿಸಿ, ಹಗಲನ್ನು ಹಳಿಯುತ್ತಾ ಎಚ್ಚೆತ್ತು ಅರೆ ಮನಸ್ಸು ಮತ್ತು ಬಳಲಿದ ದೇಹದಿಂದ ಕೆಲಸ ಆರಂಭಿಸುತ್ತದೆ. ಈ ಎರಡು ವಿಭಾಗಗಳ ಪೈಕಿ ಉತ್ಪಾದನಾ ರಂಗದಲ್ಲಿ ಯಾರು ಹೆಚ್ಚು ಕಾರ್ಯದಕ್ಷತೆ ತೋರಿಸಿಯಾರು? ಒಂದನೇಯ ವಿಭಾಗವೆನ್ನಲು ಸಂಶಯ ಪಡಬೇಕಾಗಿಲ್ಲ.

ಒಟ್ಟಿನಲ್ಲಿ ಇಸ್ಲಾಮಿನ ಕಾನೂನು ವ್ಯವಸ್ಥೆಗಳು ರಾಷ್ಟ್ರದ ಸಂಪನ್ಮೂಲಗಳನ್ನು ಹೆಚ್ಚಿಸಿ ನಿರುದ್ಯೋಗಿಗಳ ಮತ್ತು ಬಡವರ ಸಂಖ್ಯೆಯನ್ನು ಕಡಿಮೆಗೊಳಿಸಬಲ್ಲುದಾಗಿದೆ. ಬಡವರ ಸಂಖ್ಯೆ ಕಡಿಮೆಯಾಗಿ ರಾಷ್ಟ್ರದ ಸಂಪನ್ಮೂಲಗಳನ್ನು ಹೆಚ್ಚಿಸಿ ಸಂಪಾದನೆ ಮತ್ತು ವಿನಿಯೋಗದಲ್ಲಿ ಶ್ರೀಮಂತರು ಪರಿಶುದ್ಧ ವಿಧಾನವನ್ನು ಅವಲಂಬಿಸುವುದರಿಂದ, ಬಡತನ ನಿರ್ಮೂಲನ ಕಾರ್ಯ ಸಂಭವಿಸುತ್ತದೆ. ಮಾತ್ರವಲ್ಲ ಬಡತನವು ಅದರ ಭಯಾನಕ ರೂಪದಲ್ಲಿ ಸಮಾಜದಲ್ಲಿ ಸರ್ವಥಾ ತಲೆದೋರಲಾರದು. ಬಂಡವಾಳಶಾಹೀ ರಾಷ್ಟ್ರಗಳಲ್ಲಿ ಬಡತನವು ಅನೇಕ ಕ್ರಾಂತಿಗಳಿಗೆ ಆಸ್ಪದ ನೀಡಿತು. ಆ ಅಕ್ರಮ ವ್ಯವಸ್ಥೆಗಳು ಮತ್ತಷ್ಟು ಅಪಾಯಕಾರಿಯಾದ ಹೊಸ ಸಿದ್ಧಾಂತಗಳಿಗೆ ಜನ್ಮ ನೀಡಿತು. ಕಮ್ಯೂನಿಝಮ್ ಅದರಲ್ಲಿ ಸೇರಿದೆ. ಅವರು ಹಳೆಯ ಬಡತನವನ್ನು ಹೊಸ ಬಡತನದಿಂದ ಎದುರಿಸಿದರು. ಬಡತನದಲ್ಲಿ ಸಮಾನತೆಯೇ ಅವರ ಸಿದ್ಧಾಂತವಾಗಿತ್ತು. ಆದರೆ ಒಂದು ಸೌಭಾಗ್ಯವಂತ ವಿಭಾಗವು ಅಂದೂ ಇಂದೂ ಆ ಸಮಾನತೆಯನ್ನು ಮೀರಿಸಿತ್ತು. ಆಡಳಿತ ಪಕ್ಷದ ನೇತಾರರು ಮತ್ತು ಹೊಸ ವ್ಯವಸ್ಥೆಯ ನಿವಾರ್ಹಕರು!

ಇಸ್ಲಾಮ್ ಸ್ವಂತ ಅಧಿಕಾರಶಕ್ತಿ ಮತ್ತು ಉಪದೇಶಗಳ ಮೂಲಕ ಬಡತನ ನಿರ್ಮೂಲನ ಮತ್ತು ವಿವಿಧ ಕ್ರಮಗಳಿಂದ ಬಡವರ ಸ್ವಾವಲಂಬನೆಗಾಗಿ ಪ್ರಯತ್ನಿಸುತ್ತದೆ. ಆದರೆ, ಇಸ್ಲಾಮೀ ಸಮಾಜದಿಂದ ಯಾವ ರೀತಿಯಲ್ಲಾದರೂ ಕೆಲ ಮಂದಿ ಬಡವರು ಉಳಿದರೆ ಅವರನ್ನು 'ಬಡವರ್ಗ'ವೆಂಬ ಹೆಸರಲ್ಲಿ ವಿಶೇಷ ವರ್ಗವಾಗಿ ಉಳಿಸಿಕೊಳ್ಳುವುದನ್ನು ಇಸ್ಲಾಮ್ ಸರ್ವಥಾ ಅಂಗೀಕರಿಸುವುದಿಲ್ಲ. ವರ್ಗಭೇದವು ಕಾನೂನಿನ ಬೆಂಬಲದಿಂದ ಮತ್ತು ಪಾರಂಪರ್ಯದ ನೆರವಿನಿಂದ ಪೀಳಿಗೆಗಳಲ್ಲಿ ಉಳಿದುಕೊಳ್ಳುವ ಶಾಶ್ವತ ಗುಣ ವೈಶಿಷ್ಟ್ಯಗಳಾಗಿವೆ. ಆದರೆ ಬಡವರನ್ನು, ಮಕ್ಕಳು ತಂದೆಯರಿಂದ-ಮೊಮ್ಮಕ್ಕಳು, ಪಿತಾಮಹರಿಂದ- ವಾರೀಸು

ಪಡೆಯುವ ಪರಂಪರಾಗತ ಗುಣವೆಂಬ ನೆಲೆಯಲ್ಲಿ ಸಮಾಜದ ಯಾವುದಾದರೊಂದು ವಿಭಾಗದ ವರ್ಗ ಗುಣವೆಂದು ಪರಿಗಣಿಸಲು, ಮುಸ್ಲಿಮ್ ಸಮಾಜದ ಇತಿಹಾಸದ ವಿವಿಧ ಹಂತಗಳಲ್ಲಿ ರಚಿಸಲಾದ ನಿಯಮ ನಿಬಂಧನೆಗಳು ಪ್ರಯತ್ನಿಸಲಿಲ್ಲ. ಬಡತನವು ಬದಲಾಯಿಸಲಾಗದ ಸುಸ್ಥಿರ ಮತ್ತು ಶಾಶ್ವತ ಪದವಿಯೆಂದು ಇಸ್ಲಾಮ್ ಎಂದೂ ಭಾವಿಸಿಲ್ಲ. ಅದು ಕೇವಲವೊಂದು ತಾತ್ಕಾಲಿಕ ಸ್ಥಿತಿಯಾಗಿದೆ. ಬದಲಾಯಿಸಬಹುದಾದ ಮತ್ತು ಸಂಪೂರ್ಣ ನಿರ್ಮೂಲನಗೊಳಿಸಬಹುದಾದ ಸ್ಥಿತಿಯಾಗಿದೆ. ಇಂದಿನ ಬಡವರು ನಾಳಿನ ಶ್ರೀಮಂತನಾಗಬಹುದು. ಶ್ರೀಮಂತರಾಗುವ ಅವಕಾಶಗಳು ಸಮಾಜದ ಎಲ್ಲರ ಮುಂದೆಯೂ ಸಮಾನವಾಗಿ ತೆರೆದಿದೆ.

"ಅವರು ಬಡವರಾಗಿದ್ದರೆ ಅಲ್ಲಾಹನು ಅವನ ಅನುಗ್ರಹದಿಂದ ಅವರನ್ನು ಶ್ರೀಮಂತಗೊಳಿಸುತ್ತಾನೆ." (ಅನ್ನೂರ್ : 32)

"ಅಲ್ಲಾಹನು ಸಂಕಷ್ಟಗಳ ಬಳಿಕ ಸೌಲಭ್ಯವನ್ನು ಒದಗಿಸುತ್ತಾನೆ." (ಅತ್ತಲಾಖ್: 7)

## ಸ್ವಾಭಿಮಾನ ಸಂರಕ್ಷಣೆ

ಇಸ್ಲಾಮೀ ಸಮಾಜದಲ್ಲಿಯಾವನೇ ಬಡವನ ಸ್ವಾಭಿಮಾನಕ್ಕೆ ಧಕ್ಕೆಯುಂಟಾಗುವುದಿಲ್ಲ. ಹಕ್ಕುಗಳು ನಿಷ್ಫಲವಾಗುವುದಿಲ್ಲ. ಘನತೆ ಗೌರವಗಳ ಮಾನದಂಡವು ಸಂಪತ್ತು ಯಾ ಸಮೃದ್ಧಿಯಾಗಿರದೆ- ಸತ್ಯವಿಶ್ವಾಸ, ಸತ್ಕರ್ಮ, ದೇವ ಭಯ ಮತ್ತು ಪಾಂಡಿತ್ಯವೆಂದು ಇಸ್ಲಾಮ್ ಅದರ ಅನುಯಾಯಿಗಳಿಗೆ ಕಲಿಸಿದೆ.

"ನಿಮ್ಮ ಪೈಕಿ ಅತ್ಯಧಿಕ ದೇವ ಭಯವಿರಿಸುವಾತನೇ ಅತ್ಯಂತ ಗೌರವಾರ್ಹನು."

(ಅಲ್ ಹುಜರಾತ್:13)

"ಜ್ಞಾನಿಗಳು ಮತ್ತು ಅಜ್ಞಾನಿಗಳು ಸಮಾನರಾಗಬಲ್ಲರೇ' (ಅಲ್ ಮುಜಾದಲಃ:11) "ಕುರುಡ ಮತ್ತು ದೃಷ್ಟಿ ಶಕ್ತಿಯಿರುವವರು ಸಮಾನರಾಗಲಾರರು. ವಿಶ್ವಾಸವಿರಿಸಿ ಸತ್ಕರ್ಮವೆಸಗುವವರೂ ದುಷ್ಕರ್ಮಿಗಳೂ ಸಮಾನರಾಗಲಾರರು." (ಅಲ್ ಗಾಫಿರ್:58)

ಅಜ್ಞಾನ ಕಾಲದ ಅರಬರು ಜನರ ಸ್ಥಾನಮಾನಗಳನ್ನು ಶ್ರೀಮಂತಿಕೆಯ ಆಧಾರದಲ್ಲಿ ಅಳೆಯುತ್ತಿದ್ದರು. "ಸಾವಿರ ವಿರುವಾತನ ಬೆಲೆಯು ಸಾವಿರ ಮತ್ತು ಅದಕ್ಕಿಂತ ಅಧಿಕವಾಗಿದೆ. ಒಂದು ದಿರ್ಹಮ್ ಇರುವಾತನ ಬೆಲೆಯು ಕೇವಲ ಒಂದು ದಿರ್ಹಮ್ ಮಾತ್ರವಾಗಿದೆ" ಎಂದು ಜಾಹಿಲಿಯ್ಯಾ ಕಾಲದ ಕವಿಯೊಬ್ಬ ಹಾಡಿದ್ದ. ಮುಹಮ್ಮದ್‌ರ(ಸ) ಪ್ರವಾದಿತ್ವವನ್ನು ಪ್ರಶ್ನಿಸಲು ಅವರು ಇದೇ ಮಾನದಂಡವನ್ನು ಬಳಸಿದ್ದರು. ಮಕ್ಕಾದ ವಲೀದ್ ಬಿನ್ ಮುಗೀರ, ತಾಯಿಫ್‌ನ ಉರ್ವಾ ಬಿನ್ ಮಸ್‌ಊದ್ ಮುಂತಾದ ಶ್ರೀಮಂತರು ಪ್ರವಾದಿತ್ವಕ್ಕೆ ಬಹಳ ಯೋಗ್ಯರೆಂದು ಅವರು ವಾದಿಸಿದ್ದರು: "ಆ ಎರಡು ಪ್ರಸಿದ್ಧ ನಗರಗಳ

ನಿವಾಸಿಗಳಾಗಿರುವ ಆ ಈರ್ವರಿಗೆ ಕುರ್‌ಆನ್ ಯಾಕೆ ಅವತೀರ್ಣಗೊಳ್ಳಲಿಲ್ಲವೆಂದು ಅವರು ಕೇಳುತ್ತಾರೆ." (ಅಝ್ಝುಖ್ರುಫ್) ಕುರ್‌ಆನ್ ಅವರ ಮನೋಭಾವವನ್ನು ಆ ರೀತಿ ಪ್ರತಿಬಿಂಬಿಸಿದೆ.

ಇಸ್ಲಾಮ್ ಇಂಥ ತಪ್ಪು ತಿಳುವಳಿಕೆಗಳನ್ನು ಸಂಪೂರ್ಣವಾಗಿ ತೊಡೆದು ಹಾಕಿತು. ಮಾನವ ಶ್ರೇಷ್ಠತೆಯು ವಿಶ್ವಾಸ ಮತ್ತು ಕರ್ಮಗಳಿಗೆ ಬದ್ಧವಾಗಿದೆಯೇ ವಿನಾ ಮಾಂಸ, ಕೊಬ್ಬು, ಬಂಗಾರ, ಬೆಳ್ಳಿ, ಬಟ್ಟೆಬರೆ ಮತ್ತು ಸಿಂಗಾರದಲ್ಲಿಲ್ಲವೆಂದು ಅದು ಸಾರಿತು.

ಪ್ರವಾದಿಯವರು ಹೇಳಿದರು:

"ಜಡೆಗಟ್ಟಿದ ಕೂದಲು, ಧೂಳು ಮುಕ್ಕಿದ ದೇಹ, ಹರಿದು ಚಿಂದಿಯಾದ ಬಟ್ಟೆ ಬರೆಗಳಿರುವ ಅದೆಷ್ಟೋ ನಿರ್ಲಕ್ಷಿತ ಜನರಿದ್ದಾರೆ. ಅವರು ಅಲ್ಲಾಹನಲ್ಲಿ ಪ್ರತಿಜ್ಞೆ ಮಾಡಿದರೆ ಅವುಗಳನ್ನು ಪಾಲಿಸುತ್ತಾರೆ." (ಅಹ್ಮದ್, ಮುಸ್ಲಿಮ್)

ಅದಕ್ಕಿಂತ ಭಿನ್ನವಾದ ಇನ್ನೊಂದು ಕೂಟವನ್ನು ಪ್ರವಾದಿಯವರು ತಿಳಿಸಿದ್ದಾರೆ:

"ಬೊಜ್ಜು ಬೆಳೆದ ಕೆಲವರು ಅಂತ್ಯ ದಿನದಲ್ಲಿ ಹಾಜರಾಗುತ್ತಾರೆ. ಅವರಿಗೆ ಅಲ್ಲಾಹನ ಬಳಿ ಒಂದು ಸೊಳ್ಳೆಯ ರೆಕ್ಕೆಯಷ್ಟು ಬೆಲೆಯೂ ಇರುವುದಿಲ್ಲ." (ಬುಖಾರಿ)

"ಅಂತ್ಯ ದಿನದಲ್ಲಿ ನಾವು ಅವರಿಗೆ ಕಿಂಚಿತ್ತೂ ಬೆಲೆ ನೀಡುವುದಿಲ್ಲ." (ಅಲ್ ಕಹ್ಫ್:105) ಎಂದು ಕುರ್‌ಆನ್ ವ್ಯಾಖ್ಯಾನಿಸಿದೆ.

13

# ಬಡತನದ ವಿರುದ್ಧ ಇಸ್ಲಾಮಿನ ವಿಜಯ

ಜನರು, ತಾತ್ವಿಕ ಆಧಾರಗಳ ಬದಲಾಗಿ ವ್ಯಾವಹಾರಿಕ ಅನುಭವಗಳಿಗೆ ಪ್ರಾಮುಖ್ಯ ನೀಡುತ್ತಾರೆ. ಆದರೆ ಬಡತನದ ಮೇಲೆ ಇಸ್ಲಾಮ್ ಸಾಧಿಸಿದ ವಿಜಯಕ್ಕೆ ಸಾಕ್ಷಿಯಾಗಿ ಇತಿಹಾಸದ ಕೆಲವು ಜೀವಂತ ಉದಾಹರಣೆಗಳನ್ನು ಎತ್ತಿ ತೋರಿಸುವುದು ಸೂಕ್ತವಾಗಿದೆ. ಇಸ್ಲಾಮ್ ಬಯಸುವ ಸುಖ ಜೀವನ, ನಿರ್ಭೀತಿ ಮತ್ತು ಶಾಂತ ವಾತಾವರಣದ ಉದಯದ ಬಗ್ಗೆ ಪ್ರವಾದಿಯವರು(ಸ) ಭವಿಷ್ಯ ನುಡಿದಿದ್ದರು. ಅವು ಪ್ರವಾದಿತ್ವದ ಸಾಕ್ಷ್ಯವೂ ಆಗಿದ್ದುವು. ಮುಸ್ಲಿಮ್ ಸಮಾಜವು ಕಠೋರ ಕಷ್ಟ ಕೋಟಲೆಗಳನ್ನು ಸಹಿಸಿ, ಭೀತಿಯಿಂದ ಅಶಾಂತ ವಾತಾವರಣದಲ್ಲಿ ದಿನ ದೂಡುತ್ತಿದ್ದಂತಹ ಕಾಲದಲ್ಲಿ ಪ್ರವಾದಿಯವರು ಈ ಭವಿಷ್ಯ ನುಡಿದಿದ್ದರು. ಅಲ್ಲಾಹನು ಪ್ರವಾದಿಯವರಿಗೆ ತಾನು ವಹಿಸಿಕೊಟ್ಟ ವ್ಯವಸ್ಥೆಯ ಗುಣ ಸ್ವಭಾವದ ತಿಳುವಳಿಕೆ ನೀಡಿದನು. ಜನರು ಅದನ್ನು ಯಥಾಪ್ರಕಾರ ಮೈಗೂಡಿಸಿದರೆ ದೊರೆಯುವ ಸತ್ಫಲಗಳ ಕುರಿತು ಅಲ್ಲಾಹನು ಶುಭವಾರ್ತೆ ನೀಡಿದನು. ಅಂತೆಯೇ ಪ್ರವಾದಿಯವರು, ಝಕಾತ್ ಪಡೆಯುವ ಜನರಿಲ್ಲದ ರೀತಿಯಲ್ಲಿ ಇಸ್ಲಾಮಿನಿಂದ ಸಂಪತ್ಸಮೃದ್ಧಿಯುಂಟಾಗಲಿದೆ ಮತ್ತು ಶಾಂತಿ ಸುಭಿಕ್ಷೆ ವ್ಯಾಪಿಸಲಿದೆಯೆಂದು ಸುವಾರ್ತೆ ನೀಡಿದ್ದರು.

ಅದಿಯ್ಯ್‌ಬಿನ್ ಹಾತಿಮ್ ತ್ವಾಯಿಯವರಿಂದ ಬುಖಾರಿ ವರದಿ ಮಾಡಿದ್ದಾರೆ: ಅವರು ಪ್ರವಾದಿಯವರ ಬಳಿಯಿದ್ದಾಗ ಓರ್ವನು ಆಗಮಿಸಿ ತನ್ನ ಬಡತನದ ಬಗ್ಗೆ ಹೇಳಿಕೊಂಡನು. ಇನ್ನೊಬ್ಬಾತ ಬಂದು, ಪ್ರಯಾಣಿಕರನ್ನು ದೋಚುವ ದರೋಡೆಕೋರರ ಬಗ್ಗೆ ದೂರು ನೀಡಿದನು. ಅದಿಯ್ಯ್ ಇಸ್ಲಾಮ್ ಸ್ವೀಕರಿಸಲಿಕ್ಕಾಗಿ ಬಂದಿದ್ದರು. ಆದ್ದರಿಂದ ಬಡತನ ಮತ್ತು ದರೋಡೆಯ ಬಗ್ಗೆ ಆಗಂತುಕ ನೀಡಿದ ದೂರಿನಿಂದಾಗಿ ಅದಿಯ್ಯ್‌ರ ಮನದಲ್ಲಿ ತನ್ನ ಅನುಯಾಯಿಗಳ ದುರವಸ್ಥೆ ಮತ್ತು ದೇಶದ ಅಶಾಂತಿಯ ಕುರಿತು ತಪ್ಪಭಿಪ್ರಾಯ ಮೂಡಬಹುದೆಂದು ಪ್ರವಾದಿಯವರಿಗೆ ಶಂಕೆಯಾಯಿತು. ಆಗ ಅವರು ಇಸ್ಲಾಮೀ ಸಮಾಜವು ಸಾಧಿಸಲಿರುವ ಯಶಸ್ಸಿನ ಕುರಿತು ತಿಳಿಸಿದರು. "ನೀವು ಹೀರ ನೋಡಿದ್ದೀರಾ?" ಪ್ರವಾದಿ(ಸ) ಪ್ರಶ್ನಿಸಿದರು. "ಇಲ್ಲ, ಆದರೆ ಕೇಳಿದ್ದೇನೆ" ಎಂದು ಅದಿಯ್ಯ್ ಹೇಳಿದರು.

"ನೀವು ಬದುಕಿದ್ದರೆ ಮಹಿಳೆಯರ ಒಂದು ತಂಡವು ಹೀರದಿಂದ ಹೊರಟು ನಿರ್ಭೀತಿಯಿಂದ ಸಂಚರಿಸಿ ಕಅಬಾ ಪ್ರದರ್ಶನ ಮಾಡುವುದನ್ನು ನೀವು ನೋಡುವಿರಿ. ಅವರು ಅಲ್ಲಾಹನ ಹೊರತು ಬೇರೆ ಯಾರಿಗೂ ಹೆದರಲಾರರು."

ಅದಿಯ್ಯ್ ಹೇಳಿದರು: "ಪ್ರವಾದಿಯವರು ಹಾಗೆ ಹೇಳಿದಾಗ ನನಗೆ ಹಾದಿಯಲ್ಲಿ ಬೆಂಕಿ

ರಾಶಿ ಹಾಕಿ ಪ್ರಯಾಣಿಕರನ್ನು ದೋಚುತ್ತಿದ್ದ ತ್ವಯ್ಯ್ ಗೋತ್ರದ ದರೋಡೆ ತಂಡದ ಸೆನಪಾಯಿತು."

ಪ್ರವಾದಿಯವರು(ಸ) ಹೇಳಿದರು: "ನೀವು ಬದುಕಿದ್ದರೆ ಕೈಸರನ ಖಜಾನೆಗಳು ತೆರೆಯಲ್ಪಡುವುದನ್ನು ನೀವು ನೋಡುವಿರಿ." "ಕಿಸ್ರಾ ಬಿನ್ ಹುರ್ಮುಸ್‌ರದ್ದೋ?" ಅದಿಯ್ಯ್ ಅಚ್ಚರಿಯಿಂದ ಕೇಳಿದರು: "ಹೌದು, ಕಿಸ್ರಾ ಬಿನ್ ಹುರ್ಮುಸ್‌ನದ್ದೆ?" ಪ್ರವಾದಿ ಹೇಳಿದರು. ಅವರು ಮುಂದುವರಿಸಿದರು- "ನೀವು ಬದುಕಿದ್ದರೆ ಕೈ ತುಂಬಾ ಬಂಗಾರ ಮತ್ತು ಬೆಳ್ಳಿ ಹಿಡಿದು, ಇದು ಯಾರಿಗಾದರೂ ಬೇಕೇ? ಎಂದು ಕೇಳುವವರನ್ನು ನೀವು ಕಾಣಬಹುದು. ಆದರೆ, ಯಾರಿಗೂ ಅಗತ್ಯವಿರಲಾರದು."

ಅದಿಯ್ಯ್ ಇಸ್ಲಾಮ್ ಸ್ವೀಕರಿಸಿದರು. ಇಸ್ಲಾಮಿಗೆ ಶ್ಲಾಘನೀಯ ಸೇವೆ ಸಲ್ಲಿಸಿದರು. ಪ್ರವಾದಿಯವರ ಭವಿಷ್ಯ ನುಡಿ ಸಾಕ್ಷಾತ್ಕಾರವಾಗುವುದನ್ನು ನೋಡುವ ಅವಕಾಶ ಅವರಿಗೆ ದೊರೆಯಿತು. ಅವರು ಹೇಳುತ್ತಾರೆ: "ಅಲ್ಲಾಹನ ಹೊರತು ಬೇರೆ ಯಾರಿಗೂ ಹೆದರದ ಮಹಿಳೆಯರು ಹೀರಾದಿಂದ ಮಕ್ಕಾಕ್ಕೆ ಬಂದು ಕಅಬಾ ಪ್ರದಕ್ಷಿಣೆ ಮಾಡುವುದನ್ನು ನಾನು ನೋಡಿದೆ. ಕಿಸ್ರಾರ ಖಜಾನೆಗಳನ್ನು ತೆರೆದವರ ಗುಂಪಿನಲ್ಲಿ ನಾನೂ ಇದ್ದೆ. ನೀವು ಬದುಕಿದ್ದರೆ ಕೈ ತುಂಬಾ ಬೆಳ್ಳಿ, ಬಂಗಾರ ಹಿಡಿದು ಯಾರಿಗಾದರೂ ಬೇಕೇ ಎಂದು ವಿಚಾರಿಸುವವರನ್ನು ನೀವು ನೋಡುವಿರಿ". ಶೀಘ್ರ ಭವಿಷ್ಯದಲ್ಲಿಯೇ ಇಂತಹ ಘಟನೆ ಸಂಭವಿಸಲಿದೆ ಮತ್ತು ಅಂದು ಸಹಾಬಿಗಳಲ್ಲಿ ಯಾರಾದರೂ ಬದುಕಿದ್ದರೆ ಅವರಿಗೆ ಅದನ್ನು ನೋಡುವ ಸೌಭಾಗ್ಯ ದೊರೆಯುವುದೆಂಬುದು ಅವರ ಕೊನೆಯ ಮಾತಿನ ಇಂಗಿತವಾಗಿತ್ತು. ಉಮರ್ ಬಿನ್ ಅಬ್ದುಲ್ ಅಝೀಝ್‌ರ ಕಾಲದಲ್ಲಿ ಅದು ನಿಜಗೊಂಡಿತು. ಅಂದು ಬದುಕಿದ್ದ ಸಹಾಬಿಗಳಿಗೆ ಅದನ್ನು ನೋಡುವ ಭಾಗ್ಯ ಲಭಿಸಿತು.

ಭವಿಷ್ಯದಲ್ಲಿ ಮುಸ್ಲಿಮ್ ಸಮುದಾಯದ ಸಂಪತ್ಸಮೃದ್ಧಿ ಮತ್ತು ಝಕಾತ್ ಪಡೆಯುವ ಜನರಿಲ್ಲದಂತಹ ಸುಭಿಕ್ಷೆಯ ಕುರಿತು ಇತರ ಅನೇಕ ಪ್ರವಾದಿವಚನಗಳಿವೆ. ಈ ಪ್ರವಚನಗಳು ಬಡತನವನ್ನು ನಿರ್ಮೂಲನಗೊಳಿಸಿ ಸಿರಿವಂತ ಸಮಾಜ ನಿರ್ಮಾಣಕ್ಕೆ ವಿಶೇಷ ಸ್ಫೂರ್ತಿ ನೀಡಿದ್ದುವು. ಆದರೆ, ಬೈಬಲ್ ವಚನಗಳು, ಬಡತನವನ್ನು ಶಾಶ್ವತ ಪ್ರಕ್ರಿಯೆಯೆಂದು ಪರಿಗಣಿಸುತ್ತವೆ. ಬಡತನವನ್ನು ಭೂಮಿಯಿಂದ ನಿರ್ಮೂಲನಗೊಳಿಸಲು ಸಾಧ್ಯವಿಲ್ಲವೆಂದು ಅವು ವಾದಿಸುತ್ತವೆ. ಆ ಭಾವನೆಯು ತಪ್ಪೆಂದು ಸಾಬೀತು ಪಡಿಸುವ ಅನೇಕ ಪ್ರವಾದಿ ವಚನಗಳಿವೆ.

ಹಾರಿಸ ಬಿನ್ ವಹ್ಬ್ ಖುಝಾಈ ಹೇಳುತ್ತಾರೆ: "ಪ್ರವಾದಿಯವರು ಹೇಳಿದ್ದನ್ನು ನಾನು ಕೇಳಿದ್ದೇನೆ. ನೀವು ಝಕಾತ್ ಕೊಡಿರಿ. ಜನರು ಝಕಾತ್ ಪಡೆಯಲರ್ಹವಾದವರನ್ನು ಹುಡುಕುತ್ತಾ ನಡೆದಾಡುವ ಕಾಲ ನಿಮಗೆ ಖಂಡಿತ ಬರಲಿದೆ. ಅಂದು ಜನರು ನೀವು ನಿನ್ನೆ ಬರುತ್ತಿದ್ದರೆ ನಾನು ಇದನ್ನು ಸ್ವೀಕರಿಸುತ್ತಿದ್ದೆ. ಆದರೆ ಇಂದು ನನಗೆ ಅದರ ಅಗತ್ಯವಿಲ್ಲ"

ಎಂದು ಹೇಳುವರು. (ಬುಖಾ

ಅಬೂ ಮೂಸಾ ಅಶ್‌ಅರಿಯವರಿಂದ ವರದಿಯಾಗಿದೆ: ಪ್ರವಾದಿಯವರು ಹೇಳಿದರ "'ಝುಕಾತ್ ನೀಡಲಿಕ್ಕಾಗಿ ಕೈಯಲ್ಲಿ ಚಿನ್ನ ಹಿಡಿದು ಅರ್ಹರನ್ನು ಹುಡುಕುವ ಮತ್ತು ಅದ ಸ್ವೀಕರಿಸಲು ಅರ್ಹ ಜನರಿಲ್ಲದಂತಹ ಕಾಲವು ಖಂಡಿತವಾಗಿಯೂ ನಿಮಗೆ ಬರಲಿದೆ." (ಬುಖಾ

ಈ ಭವಿಷ್ಯ ನುಡಿಗಳನ್ನು ನೀಡಿ ಹೆಚ್ಚು ಕಾಲ ಕಳೆದಿರಲಿಲ್ಲ. ಅದಕ್ಕೆ ಮುಂಚೆಯೆ ಅವು ನಿಜಗೊಂಡವು. ಉಮರ್ ಬಿನ್ ಅಬ್ದುಲ್ ಅಝೀಝ್‌ರ ಕಾಲವು ಅದ ಸಾಕ್ಷಿಯಾಯಿತು.

ಉಮರ್ ಬಿನ್ ಅಸೀದ್ ಹೇಳುತ್ತಾರೆ: "ಉಮರ್ ಬಿನ್ ಅಬ್ದುಲ್ ಅಝೀಝ್ ಕೇವಲ 30 ತಿಂಗಳು ರಾಜ್ಯಭಾರ ನಡೆಸಿದ್ದರು. ಆದರೆ, ಆ ಕಾಲಾವಧಿಯಲ್ಲಿಯೇ ಜನರನ ಸ್ವಾವಲಂಬಿಗೊಳಿಸಲು ಅವರಿಗೆ ಸಾಧ್ಯವಾಗಿತ್ತು. ಅದರಿಂದಾಗಿ ಝುಕಾತ್ ವಿತರಿಸುವವರ ಅದನ್ನು ಸ್ವೀಕರಿಸುವ ಜನರಿಲ್ಲದೇ ಮರಳಿ ಹೋಗ ಬೇಕಾಯಿತು."

ಈ ಪ್ರಸ್ತಾಪವನ್ನು ಉದ್ಧರಿಸಿದ ಬಳಿಕ ಬೈಹಕಿ ಹೇಳುತ್ತಾರೆ: ಅದಿಯ್ಯ್ ಬಿ ಹಾತಿಮ್‌ರವರಿಂದ ಉದ್ಧರಿಸಿದ ಪ್ರವಾದಿವಚನದಲ್ಲಿರುವ ಭವಿಷ್ಯನುಡಿಯ ಸಾಕ್ಷಾತ್ಕಾರವನ ಈ ಘಟನೆಯಲ್ಲಿ ನೋಡಬಹುದು-

ಯಹ್ಯಾಬಿನ್ ಸಈದ್ ಹೇಳುತ್ತಾರೆ: "ಉಮರ್ ಬಿನ್ ಅಬ್ದುಲ್ ಅಝೀಝ್ ಕಾಲದಲ್ಲಿ ನಾನು ಆಫ್ರಿಕಾದಲ್ಲಿ ಝುಕಾತ್ ನಿರ್ವಾಹಕನಾಗಿ ನೇಮಕಗೊಂಡೆ. ಝುಕಾತನ ಸಂಪೂರ್ಣ ಸಂಗ್ರಹಿಸಿದ ಬಳಿಕ ಅದರ ವಿತರಣೆಗಾಗಿ ಅರ್ಹ ಮಂದಿಯನ್ನು ಹುಡುಕಿದ ಯಾರೂ ಸಿಗಲಿಲ್ಲ. ಉಮರ್ ಬಿನ್ ಅಬ್ದುಲ್ ಅಝೀಝ್‌ರು ಎಲ್ಲ ಜನರನ ಸ್ವಾವಲಂಬಿಗಳಾಗಿ ಮಾಡಿದ್ದರು. ಆದ್ದರಿಂದ ನಾನು ಆ ಹಣದಿಂದ ಒಂದು ಗುಲಾಮನನ ಖರೀದಿಸಿ ಸ್ವತಂತ್ರ ಗೊಳಿಸಿದೆ.

ಉಮರ್ ಬಿನ್ ಅಬ್ದುಲ್ ಅಝೀಝ್‌ರ ಕಾಲಕ್ಕಿಂತ ಮುಂಚೆ ಇಸ್ಲಾಮಿ ಆಡಳಿ ವ್ಯವಸ್ಥೆಯ ಆಶ್ರಯದಲ್ಲಿದ್ದ ಯಮನ್‌ನಲ್ಲಿಯೂ ಅಂತಹ ಅನುಭವವಾಗಿತ್ತು. ಅದ ಉಮರ್ ಬಿನ್ ಖತ್ತಾಬ್‌ರ ಆಡಳಿತ ಕಾಲ. ಮುಆದ್‌ರನ್ನು ಝುಕಾತ್ ನಿರ್ವಾಹಕರಾ ಪ್ರವಾದಿಯವರೇ ಯಮನ್ ಪ್ರಾಂತ್ಯಕ್ಕೆ ನೇಮಿಸಿದ್ದರು. ಅಬೂಬಕರ್ ಮತ್ತು ಉಮರ್ ಕಾಲದಲ್ಲಿಯೂ ಅವರು ಆ ಹುದ್ದೆಯಲ್ಲಿದ್ದರು.

ಅಬೂ ಉಬೈದಾ ಉಲ್ಲೇಖಿಸಿದ್ದಾರೆ:

ಪ್ರವಾದಿಯವರು ಮುಆದ್‌ರನ್ನು ಯಮನ್‌ಗೆ ಕಳುಹಿಸುವುದಕ್ಕಿಂತ ಮುಂಚೆ ಅವರ ಸೇನೆಯಲ್ಲಿದ್ದರು. ಪ್ರವಾದಿಯವರ ವಿಯೋಗದ ಬಳಿಕ ಖಲೀಫರಾಗಿದ್ದ ಅಬೂಬಕರ್ ಮತ್ತ

ರ್‌ರೂ ಅವರನ್ನು ಅದೇ ಹುದ್ದೆಯಲ್ಲಿ ಉಳಿಸಿಕೊಂಡರು. ಉಮರ್‌ರ ಕಾಲದಲ್ಲಿ ಆದ್‌ರು ಯಮನ್‌ನಲ್ಲಿ ಸಂಗ್ರಹವಾದ ಝಕಾತಿನ $^{1}/_{3}$ ಅಂಶವನ್ನು ಉಮರ್‌ರಿಗೆ ಹಿಸಿದರು. ಉಮರ್‌ರಿಗೆ ಅದು ಸ್ವಲ್ಪವೂ ಸರಿಗಾಣಲಿಲ್ಲ. ಅವರು ಹೇಳಿದರು: "ನಾವು ನ್ನು ಯಮನಿಗೆ ತೆರಿಗೆ ಅಥವಾ ಜಿಝಿಯಾ ಸಂಗ್ರಹಕ್ಕಾಗಿ ಕಳುಹಿಸಿಲ್ಲ. ಶ್ರೀಮಂತರಿಂದ ಾತ್ ಸಂಗ್ರಹಿಸಿ ಬಡವರಿಗೆ ವಿತರಣೆ ಮಾಡುವುದೇ ನಿಮ್ಮ ಕಾರ್ಯಭಾರವಾಗಿದೆ." ಆದ್ ಹೇಳಿದರು: "ಇದನ್ನು ಪಡೆಯಲರ್ಹವಾದ ಯಾರೊಬ್ಬರೂ ಉಳಿದಿಲ್ಲದಿರುವುದರಿಂದ ನ್ನು ನಿಮಗೆ ಕಳುಹಿಸಿದ್ದೇನೆ." ಮರುವರ್ಷ ಮುಆದ್‌ರು ಸಂಗ್ರಹವಾದ ಝಕಾತ್‌ನ ಂಶವನ್ನು ಉಮರ್‌ರಿಗೆ ಕಳುಹಿಸಿಕೊಟ್ಟರು. ಆಗಲೂ ಉಮರ್‌ರವರು ಹಿಂದಿನ ವರ್ಷ ದ ಮಾತನ್ನೇ ಪುನರಾವರ್ತಿಸಿದರು. ಮೂರನೇ ವರ್ಷದಲ್ಲಿ ಮುಆದ್‌ರು ಸಂಗ್ರಹವಾದ ಾತನ್ನು ಸಂಪೂರ್ಣವಾಗಿ ಉಮರ್‌ರಿಗೆ ಕಳುಹಿಸಿ ಕೊಟ್ಟರು. ಉಮರ್‌ರು ಹಿಂದಿನ ಗಳ ಅಪೇಕ್ಷೆಯನ್ನೇ ವ್ಯಕ್ತಪಡಿಸಿದರು. ಮುಆದ್ ಹೀಗೆ ಉತ್ತರಿಸಿದರು: "ನನ್ನ ಯಿಂದ ಏನಾದರೂ ಪಡೆಯಲರ್ಹವಾದ ಯಾರೊಬ್ಬರೂ ನನಗೆ ಕಂಡು ಬಂದಿಲ್ಲ."

ಇಂತಹ ಪರಿಸ್ಥಿತಿಯು ಎಷ್ಟೊಂದು ಶ್ಲಾಘನೀಯ! ಇಲ್ಲಿ ಇಸ್ಲಾಮ್ ಅಲ್ಪಾವಧಿಯಲ್ಲಿ ಸಿದ ಸಂಪತ್ಸಮೃದ್ಧಿ, ಸ್ವಾವಲಂಬನೆ ಮತ್ತು ಭದ್ರತೆಯ ಸುಂದರ ಚಿತ್ರ ನಮಗೆ ಚರಿಸುತ್ತಿದೆ. ಇದಕ್ಕೆ ಬೇರೊಂದು ಉದಾಹರಣೆ ಬೇರೆಲ್ಲಿಯಾದರೂ ಜಗತ್ತು ಕಂಡಿದೆಯೇ? ತ್ಯದಿಂದ ಕೇಂದ್ರಕ್ಕೆ ಕಳುಹಿಸಿದ ಹಣವನ್ನು ಸ್ವೀಕರಿಸಲೊಪ್ಪದ ಬೇರೆ ಆಡಳಿತಗಾರರನ್ನು ತ್ತು ಕಂಡಿದೆಯೇ? ಅವರು ತಮ್ಮ ರಾಜ್ಯ ಪಾಲರೊಡನೆ, ನಿಮ್ಮನ್ನು ತೆರಿಗೆ ಅಥವಾ ಯಾ ಸಂಗ್ರಹಣೆಗಾಗಿ ಕಳುಹಿಸಿಲ್ಲ. ಶ್ರೀಮಂತರಿಂದ ಝಕಾತ್ ಸಂಗ್ರಹಿಸಿ ಸ್ಥಳೀಯರಿಗೆ ರಣೆ ಮಾಡುವುದೇ ನಿಮ್ಮ ಕೆಲಸವೆಂದು ಹೇಳುತ್ತಾರೆ. ಝಕಾತ್ ಪಡೆಯಲರ್ಹರಾದ ರೊಬ್ಬರೂ ಉಳಿದಿಲ್ಲದಿರುವುದರಿಂದ ನಾನು ಇದನ್ನು ನಿಮಗೆ ಕಳುಹಿಸುತ್ತಿದ್ದೇನೆ. ನನ್ನ ೇಶದ ಜನರು ಝಕಾತ್‌ನ ಅಗತ್ಯವಿರದಷ್ಟು ಸ್ವಾವಲಂಬಿಗಳಾಗಿದ್ದಾರೆಂದು ವಿದ್ವಾಂಸರಾದ ಆದ್‌ರು ಉಮರ್‌ರಿಗೆ ಮನಗಾಣಿಸದಿರುತ್ತಿದ್ದರೆ ಅವರು ಆ ಹಣವನ್ನು ಸ್ವೀಕರಿಸುತ್ತಿರಲಿಲ್ಲ. ಆದ್‌ರು: "ಶ್ರೀಮಂತರಿಂದ ಝಕಾತ್ ಸಂಗ್ರಹಿಸಿ ಬಡವರಿಗೆ ವಿತರಣೆ ಮಾಡಿರಿ" ಎಂದು ದಿಯವರಿಂದ ನೇರವಾಗಿ ಆಜ್ಞೆ ಪಡೆದ ವ್ಯಕ್ತಿಯಾಗಿದ್ದರಷ್ಟೆ!

ಮುಸ್ಲಿಮರು ಇಸ್ಲಾಮೀ ರಾಷ್ಟ್ರದ ಯಾವ ಪ್ರದೇಶದಲ್ಲಿದ್ದರೂ ಒಂದೇ ತೆಯಾಗಿರುತ್ತಾರೆ. ಒಂದು ಪ್ರದೇಶದ ನಿವಾಸಿಗಳು ಸ್ವಾವಲಂಬಿಗಳಾಗಿ ಅಲ್ಲಿ ಝಕಾತ್‌ಗೆ ರಾದವರಿಲ್ಲದಿದ್ದರೆ ಅದನ್ನು ಬೇರೆಡೆಯಲ್ಲಿ ವಾಸವಾಗಿರುವ ಅರ್ಹರಿಗೆ ವಿತರಣೆ ಡಬೇಕು ಅಥವಾ ಸರಕಾರವು ಅದನ್ನು ಮುಸ್ಲಿಮರ ಸಾರ್ವಜನಿಕ ಹಿತಕ್ಕಾಗಿ ಬಳಸಬೇಕೆಂಬುದು ಮಿನ ನೀತಿಯಾಗಿದೆ. ಇಸ್ಲಾಮೀ ವ್ಯವಸ್ಥೆಯು ನೈಜ ರೂಪದಲ್ಲಿ ಜಾರಿಯಲ್ಲಿದ್ದ ದಲ್ಲಿ ಸಮುದಾಯವು ಅದರ ಸತ್ಫಲವನ್ನು ಅನುಭೋಗಿಸಿತ್ತು. ಆ ಸತ್ಫಲಗಳು ವುದಾದರೂ ಜನತೆಗೆ ಲಭ್ಯವಾಗಿಲ್ಲದಿದ್ದರೆ ಅದಕ್ಕೆ ಕಾರಣ ಅವರ ವ್ಯವಹಾರಗಳನ್ನು

ಅಕ್ರಮಿಗಳಾದ ನಾಯಕರಿಗೆ ಒಪ್ಪಿಸಿರುವುದು, ಅವರ ಸಂಪತ್ತಿನಲ್ಲಿ ಅವಿವೇಕಿಗಳು ಪ
ಸಾಧಿಸಿರುವುದು ಅಥವಾ ಅವರ ಜೀವನ ವ್ಯವಸ್ಥೆಯನ್ನು ಅಜ್ಞಾನ ಮತ್ತು ಅ
ವಿಚಾರಧಾರೆಗಳು ವಿಕೃತಗೊಳಿಸಿರುವುದೇ ಆಗಿದೆ.

ಬಡತನವು ಖಂಡಿತವಾಗಿಯೂ ಒಂದು ಅನಿವಾರ್ಯತೆಯಲ್ಲ, ನಿವಾರಿಸ
ಪೀಡೆಯಲ್ಲ, ಅದು ಕೇವಲ ತಾತ್ಕಾಲಿಕ ಸ್ಥಿತಿಯಾಗಿದೆ. ಇತರ ಸಮುದಾಯಗಳ
ಮುಸ್ಲಿಮ್ ಸಮುದಾಯದಲ್ಲಿಯೂ ಅದು ತಲೆದೋರಬಹುದು. ಆಗ ಅದನ್ನು ಕಾ
ಬೆಂಬಲದಿಂದ ಎದುರಿಸಬೇಕಾದುದು ಕಡ್ಡಾಯವಾಗಿದೆ.

ಹಾಗೆಯೇ ಜನಸಮುದಾಯಗಳಲ್ಲಿ ಬಡತನವಿಲ್ಲದ ಸ್ಥಿತಿ ಉಂಟಾಗಬ
ಸಂಪತ್ಸಮೃದ್ಧಿಯ ಪ್ರವಾಹದಿಂದ ಜನಜೀವನದಲ್ಲಿ ಸುಖ, ಶಾಂತಿ, ಸ
ಲಾಸ್ಯವಾಡಬಹುದು. ಆಗ ದೂರು ಸಂಕಟಗಳ ಧ್ವನಿಯು ಅದಕ್ಕೆ ಅಪರಿಚಿತವಾಗಬ
ನ್ಯಾಯ ನಿಷ್ಠವಾದ ಇಸ್ಲಾಮೀ ವ್ಯವಸ್ಥೆಯಿಂದಾಗಿ, ಝಕಾತ್‌ಗೆ ಅರ್ಹರಾದವರೇ ಉಳಿಯ
ಉತ್ಪಾದನೆಯ ವೃದ್ಧಿ ಮತ್ತು ಸಮಾನ ಅವಕಾಶ ಪ್ರಾಪ್ತವಾಗುವುದು. ಅಂತಹ ಸಂದರ್ಭ
ಝಕಾತನ್ನು ಸಂಪೂರ್ಣವಾಗಿ ಇತರ ರಂಗಗಳಲ್ಲಿ ಇಸ್ಲಾಮಿನ ಒಲವಿರುವ ಮುಸ್ಲಿಮೇತ
ಗುಲಾಮ ವಿಮೋಚನೆಗೂ ಸಾಲಗ್ರಸ್ತರಿಗೂ ದೇವ ಮಾರ್ಗದಲ್ಲಿಯೂ ಯಾತ್ರಿಕರಿಗ
ವಿನಿಯೋಗಿಸಲಾಗುವುದು.

❄❄❄